# KATHA SANGRAHA

OR

# Canarese Selections.

## PROSE.

PART I to III.

# PART III.

:O:

## Extracts from the Maha Bharata.

:O:

### 55. The Churning of the Milk Sea.

### ೫೫. ಸಮುದ್ರ ಮಥನದ ಕಥೆ.

ಪೂರ್ವದಲ್ಲಿ, ಒಂದಾನೊಂದು ಸಮಯದಲ್ಲಿ ಇಂದ್ರನೇ ಮೊದಲಾದ ಸಮಸ್ತ ದೇವತೆಗಳು, ಸೂರ್ಯ ಕಾಂತಿಯನ್ನು ನಿರಾಕರಿಸುತ್ತಲಿರುವ ಚಿನ್ನದ ಶಿಖರಗಳಿಂದ ಕೂಡಿ ಕೊಂಡಿರುವಂಥಾ—ಸಕಲ ಭೂಷಣಗಳನ್ನು ಧರಿಸಿರುವ ದೇವ ದಾನವರಿಂದ ಸೇವಿಸಲ್ಪಟ್ಟಂಥಾ—ದುಷ್ಕರ್ಮಗಳನ್ನು ಮಾಡಿದ ಜನರಿಗೆ ದುರವಗಾಹವಾದಂಥಾ—ಅತಿ ಭಯಂಕರವಾದ ದುಷ್ಟ ಸರ್ಪ ಸಮೂಹದಿಂದ ಯುಕ್ತವಾದಂಥಾ—ಸಕಲ ಮೂಲಿಕೆಗಳಿಗೆ ಆಶ್ರಯವಾದಂಥಾ—ಆಕಾಶವನ್ನು ಮುಟ್ಟುವಂಥಾ—ಅನೇಕ ನದಿಗಳಿಂದ ಕೂಡಿರುವಂಥಾ—ಫಲ ಪುಷ್ಪ ಶೋಭಿತಗಳಾದ ಅನೇಕ ವನಗಳಿಂದ ಕೂಡಿರುವಂಥಾ—ಗಿಣಿ, ಗೊರವಂಕ, ಪಾರಿವಾಳ, ನವಿಲು, ಇವೇ ಮೊದಲಾದ ನಾನಾ ಪಕ್ಷಿಗಳ ಧ್ವನಿಗಳಿಂದ ಅತಿ ರಮಣೀಯವಾದಂಥ ಮಹಾ ಮೇರು ಪರ್ವತಕ್ಕೆ ಹೋಗಿ, ಅಲ್ಲಿ ಓಲಗದ ಚಾವಡಿಯಲ್ಲಿ ಕುಳಿತು ಕೊಂಡು, ಅಮೃತವನ್ನು ಹೊಂದುವದಕ್ಕೋಸ್ಕರ ಆಲೋಚನೆಯನ್ನು ಮಾಡುತ್ತಿರಲು; ಭಕ್ತ ಜನ ಪರಿಪಾಲಕನಾದ ಮಹಾ ವಿಷ್ಣುವು ಬ್ರಹ್ಮ ದೇವನನ್ನು ಕುರಿತು—ಎಲೈ, ಬ್ರಹ್ಮನೇ, ಈ ದೇವತೆಗಳೂ, ರಾಕ್ಷಸರೂ ಕ್ಷೀರ ಸಮುದ್ರಕ್ಕೆ ಹೋಗಿ, ಸಕಲ ಮೂಲಿಕೆಗಳನ್ನೂ, ರತ್ನಗಳನ್ನೂ, ಅದರೊಳಗೆ ಹಾಕಿ, ಮಥಿಸಿದರೆ, ಅದರಲ್ಲಿ ಅಮೃತ ಹುಟ್ಟುತ್ತದೆ. ಆ ಅಮೃತ ಪಾನದಿಂದ ದೇವತೆಗಳು ಸುಖದಲ್ಲಿರುವರು ಎಂದು, ಕಟ್ಟು ಮಾಡಲು; ಬ್ರಹ್ಮನು ಹಾಗೆಯೇ ದೇವಾಸುರರಿಗೆ ಕಟ್ಟು ಮಾಡಿದನು.

ಆಗಲಾ ದೇವಾಸುರರು ಬ್ರಹ್ಮ ದೇವನ ಅಪ್ಪಣೆಯನ್ನು ಶಿರಸಾವಹಿಸಿ, ಶರತ್ಕಾಲದ ಮೇಘಗಳೋಪಾದಿಯಲ್ಲಿ ಬಿಳುಪಾಗಿರುವ ಶಿಖರಗಳಿಂದ ಅಲಂಕೃತವಾಗಿ—ಗರುಡ, ಗಂಧರ್ವ, ಕಿನ್ನರ, ಕಿಂಪುರುಷ, ದೇವತಾ ಸಮೂಹದಿಂದ ಸೇವಿಸಲ್ಪಟ್ಟಂಥಾ—ನಾನಾ ಪಕ್ಷಿಗಳ ಧ್ವನಿಗಳಿಂದ ಶೋಭಿಸುವಂಥಾ—ಸಿಂಹ, ಶಾರ್ದೂಲ, ಶರಭ, ಮೊದಲಾದ ಮೃಗಗಳಿಂದ ಅತಿ ಭಯಂಕರವಾದಂ

ಥಾ—ಭೂಮಿಯೊಳಗೆ ಹನ್ನೊಂದು ಸಾವಿರ ಯೋಜನ ಇಳಿದಿರುವಂಥಾ—ಭೂಮಿಯ ಮೇಲೆ ಹನ್ನೊಂದು ಸಾವಿರ ಯೋಜನ ಉದ್ದವಾದ ಮಂದರ ಪರ್ವತವನ್ನು ಕಂಡು, ಅದನ್ನು ಬಹು ಪ್ರಯತ್ನದಿಂದ ಎತ್ತಿದರೂ ಅಲ್ಲಾಡದೆ ಇದ್ದದರಿಂದ, ತಿರಿಗಿ ಬ್ರಹ್ಮ ದೇವನೊಡನೆ ಕೂಡಿ ಕೊಂಡಿರುವ ವಿಷ್ಣುವಿನ ಬಳಿಗೆ ಬಂದು, ನಮಸ್ಕರಿಸಿ, ಮಂದರ ಪರ್ವತವನ್ನು ತರುವದಕ್ಕೆ ಉಪಾಯವೇನೆಂದು, ದೇವತೆಗಳು ಕೇಳಲು; ಆ ಮಹಾ ವಿಷ್ಣುವು ಅನಂತನೆಂಬ ಮಹಾ ಸರ್ಪನನ್ನು ಕರೆದು—ನೀನು ಮಂದರ ಪರ್ವತವನ್ನು ಭೂಮಿಯಿಂದ ಕಿತ್ತು ಬಿಡೆಂದು, ಕಳುಹಿಸಲು; ಆತನು ಮಹಾ ಬಲಶಾಲಿಯಾದ್ದರಿಂದ, ಆ ಪರ್ವತವನ್ನು ಕ್ಷಣ ಮಾತ್ರದಲ್ಲಿ ಕಿತ್ತು ಬಿಡಲು; ಆ ದೇವಾಸುರರು ಅನಂತನೊಡನೆ ಕೂಡಿ, ಆ ಮಂದರ ಪರ್ವತವನ್ನು ತಂದು, ಸಮುದ್ರದಲ್ಲಿ ಹಾಕಿ, ಆ ಸಮುದ್ರನನ್ನು ಕುರಿತು—ಎಲೈ, ಸಮುದ್ರನೇ, ನಾವು ನಿನ್ನ ಉದಕವನ್ನು ಮಥಿಸುತ್ತಲಿದ್ದೇವೆ. ನೀನು ಸೈರಿಸ ಬೇಕೆಂದು ಪ್ರಾರ್ಥಿಸಲು; ಆತನು—ಎಲೈ, ದೇವತೆಗಳಿರಾ, ಆ ಅಮೃತದಲ್ಲಿ ನನಗೊಂದು ಭಾಗವನ್ನು ಕೊಟ್ಟರೆ, ಈ ಆಯಾಸವನ್ನು ಸಹಿಸುತ್ತೇನೆಂದು ಹೇಳಲು; ಅದಕ್ಕೆ ದೇವಾಸುರರು ಒಪ್ಪಿ ಕೊಂಡು, ಸಮುದ್ರ ಮಧ್ಯದಲ್ಲಿರುವ ಮಹಾ ಕೂರ್ಮನನ್ನು ಕಂಡು—ಎಲೈ, ಕೂರ್ಮನೇ, ಈ ಅಮೃತ ಮಥನಕ್ಕೋಸ್ಕರ ಸಮುದ್ರ ಮಧ್ಯದಲ್ಲಿ ಹಾಕಲ್ಪಡುವ ಮಂದರ ಪರ್ವತಕ್ಕೆ ಆಧಾರವಾಗಿ ನೀನಿರ ಬೇಕೆಂದು ಪ್ರಾರ್ಥಿಸಲು; ಆ ಕೂರ್ಮನು—ಹಾಗೆ ಆಗಲೆಂದು ಸಮ್ಮತಿಸಿ, ತನ್ನ ಬೆನ್ನಿನ ಚಿಪ್ಪಿನಿಂದ ಆ ಮಹಾ ಪರ್ವತವನ್ನು ಆನಲು; ಇಂದ್ರನು ತನ್ನ ವಜ್ರಾಯುಧದಿಂದ ಆ ಪರ್ವತದ ಮೇಲ್ಭಾಗವನ್ನು ಅಮುಕಿ ಕೊಂಡಿರಲು; ಆ ದೇವತೆಗಳು ಮಂದರ ಪರ್ವತವೆಂಬ ಕಡೆಗೋಲಿಗೆ ವಾಸುಕಿಯನ್ನು ಹಗ್ಗವಾಗಿ ಮಾಡಿ, ಸಮುದ್ರ ಮಥನಕ್ಕೆ ಯತ್ನಾ ಮಾಡಿ, ದೈತ್ಯ ದಾನವರು ವಾಸುಕಿಯ ಮುಖಭಾಗವನ್ನೂ, ದೇವತೆಗಳು ಬಾಲದ ಕಡೆಯನ್ನೂ ಹಿಡಿದು ಕೊಂಡು, ಸರ್ಪಶ್ರೇಷ್ಠನಾದ ಅನಂತನೊಡನೆ ಕೂಡಿ ಕೊಂಡಿರುವ ನಾರಾಯಣನ ಸಂಗಡ ನಿಂತು, ಕಡೆಯುತ್ತಿರಲು; ಆ ವಾಸುಕಿಯ ಮುಖದಿಂದ ಹೊರಡುವ ವಿಷಜ್ವಾಲೆಗಳು ಸಮುದ್ರದ ನೀರಿನೊಡನೆ ಕೂಡಲು; ಆ ಮಥನ ಸಮಯದಲ್ಲಿ ಹಾಲಾಹಲವೆಂಬ ಮಹಾ ವಿಷವು ವಾಸುಕಿಯ ವಿಷ ಜ್ವಾಲೆಗಳೊಡನೆ ಕೂಡಿ, ಆ ಸಮುದ್ರದಲ್ಲಿ ಹುಟ್ಟಿ, ದೇವ ದಾನವರನ್ನು ಕೊಲ್ಲುವದಕ್ಕೆ ಯತ್ನಾ ಮಾಡಲು; ಅವರು ಆ ವಿಷ ಜ್ವಾಲೆಯನ್ನು ಸಹಿಸಲಾರದೆ, ಬ್ರಹ್ಮ

ದೇವನ ಸನ್ನಿಧಿಗೆ ಹೋಗಿ,—ಸ್ವಾಮಿ, ಬ್ರಹ್ಮನೇ, ನಾವು ಅಮೃತವನ್ನು ಬಯಸಿ, ಸಮುದ್ರವನ್ನು ಮಥಿಸುವ ಸಮಯದಲ್ಲಿ ಕಾಲಾಗ್ನಿಯೋಪಾದಿಯಲ್ಲಿರುವ ಒಂದು ಹಾಲಾಹಲವೆಂಬ ವಿಷ ಹುಟ್ಟಿ, ಲೋಕಗಳೆಲ್ಲವನ್ನು ದಹಿಸಿ ಬಿಡುತ್ತಲಿದೆ. ಇದಕ್ಕೆ ಈಗಲೇ ಪ್ರತಿ ಕ್ರಿಯೆಯನ್ನು ಮಾಡ ಬೇಕೆಂದು ಪ್ರಾರ್ಥಿಸಲು; ಆಗ ಬ್ರಹ್ಮ ದೇವನು ಶೂಲಪಾಣಿಯಾಗಿ—ತ್ರಿನೇತ್ರ ಧರನಾಗಿ—ಸಕಲ ಲೋಕಾಧಿಪತಿಯಾಗಿ—ಸಕಲ ದೇವತೆಗಳಿಗೆ ಶ್ರೇಷ್ಠನಾಗಿರುವ ಪರಮೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಿಸಲು; ಆಗ ಭಕ್ತಾನುಗ್ರಹವುಳ್ಳ ಪರಮೇಶ್ವರನು ಪ್ರತ್ಯಕ್ಷವಾಗಿ ನಿಂತು, ಬ್ರಹ್ಮನ ಮುಖ ವಚನದಿಂದ ವಿಷ ಹುಟ್ಟಿದ ರೀತಿಯನ್ನು ತಿಳಿದು, ಲೋಕ ಹಿತಾರ್ಥವಾಗಿ ಆ ವಿಷವನ್ನು ಪಾನಾ ಮಾಡಿ, ಕಂಠದಲ್ಲಿ ನಿಲ್ಲಿಸಿ ಕೊಂಡು, ಲೋಕದಲ್ಲಿ ವಿಷಕಂಠನೆಂಬ ಹೆಸರನ್ನು ಪಡೆದನು. ಹೀಗೆ ಆ ಪರಮೇಶ್ವರನು ವಿಷ ಬಾಧೆಯನ್ನು ಪರಿಹರಿಸಲು; ದೇವತೆಗಳೆಲಾ ಸಂತುಷ್ಟರಾಗಿ, ಯಥಾ ಪ್ರಕಾರ ಸಮುದ್ರವನ್ನು ಮಥಿಸ ತೊಡಗಿದರು.

ಆ ಕಾಲದಲ್ಲಿ ಹೊಗೆಗಳಿಂದಲೂ ಉರಿಗಳಿಂದಲೂ ಕೂಡಿ, ಮಹತ್ತಾದ ಘಾಳಿ ಬೀಸಿತು. ಆ ಹೊಗೆ ಉರಿಗಳು ಆಕಾಶದಲ್ಲಿ ಮಿಂಚುಗಳೊಡನೆ ಕೂಡಿದ ಮೇಘಗಳಾಗಿ, ದೇವತೆಗಳ ಶ್ರಮವನ್ನು ಪರಿಹರಿಸುವ ಹಾಗೆ ಉದಕದ ಹನಿಗಳನ್ನು ವರ್ಷಿಸುತ್ತಿದ್ದವು. ಮತ್ತು ಆ ಮಂದರ ಪರ್ವತದಲ್ಲಿರುವ ಮರಗಳು ತಮ್ಮ ಪುಷ್ಪ ವರ್ಷಗಳಿಂದ ಸಕಲ ದೇವತೆಗಳ ಶ್ರಮವನ್ನು ಪರಿಹರಿಸುತ್ತಿದ್ದವು. ಈ ಪ್ರಕಾರ ದೇವಾಸುರರು ಪ್ರಯಾಸದಿಂದ ಮತಿಸುತ್ತಿರುವ ಸಮುದ್ರ ಮಧ್ಯದಿಂದ ಮೇಘ ಧ್ವನಿಯ ಹಾಗೆ ದೊಡ್ಡ ಧ್ವನಿ ಹುಟ್ಟಿತು. ಮತ್ತು ಸಮುದ್ರವನ್ನು ಪರ್ವತದಿಂದ ಕಡೆಯುವದರಿಂದ ನಾನಾ ಜಲಚರಗಳೂ, ಅನೇಕ ಪರ್ವತಗಳೂ, ತುಮುರು ತುಮುರಾಗಿ ಹೋದವು. ಮತ್ತು ಆ ಪರ್ವತದಲ್ಲಿರುವ ಮರಗಳು ಒಂದಕ್ಕೊಂದು ಒಡಿದಾಡಿ, ಮುರಿದು, ಪಕ್ಷಿ ಸಮೇತಗಳಾಗಿ ಆ ಸಮುದ್ರದಲ್ಲಿ ಬಿದ್ದವು. ಆ ಮರಗಳು ಒಂದಕ್ಕೊಂದು ಉಜ್ಜುವದರಿಂದ ಎಲ್ಲಿ ನೋಡಿದರೂ ಕಾಡ್ಗಿಚ್ಚು ಹೆಚ್ಚಿ, ಮಿಂಚು ಬಳ್ಳಿಗಳು ಮೇಘಗಳನ್ನು ಆವರಿಸುವ ಹಾಗೆ ಆ ಮಹಾ ಪರ್ವತವನ್ನು ಸುತ್ತಿ ಕೊಂಡು, ಅಲ್ಲಿರುವ ಸಿಂಹ, ಶಾರ್ದೂಲ, ಶರಭ, ಗಂಡಭೇರುಂಡಾದಿ ಮೃಗಗಳನ್ನೂ, ಪಕ್ಷಿಗಳನ್ನೂ ಸುಡುತ್ತಿರಲು; ದೇವೇಂದ್ರನು ಅದನ್ನು ನೋಡಿ, ಮೇಘ ವರ್ಷಗಳಿಂದ ಆ ಕಾಡ್ಗಿಚ್ಚನ್ನು ಕೆಡಿಸುತ್ತಿರಲು; ಆ ಮಂದರ ಪರ್ವತವಲ್ಲಿರುವ ವೃಕ್ಷಗಳ ಬೇರುಗಳಿಂದ ನಾನಾ ಪ್ರಕಾರವಾದ ಮೂಲಿಕಾ ರಸಗಳು ನದೀ ರೂಪವಾಗಿ ಹರಿಯುತ್ತಿ

ದ್ದವು. ಆ ಅಮೃತ ಸಮಾನವಾದ ದಿವ್ಯ ರಸ ಸಂಪರ್ಕದಿಂದ ದೇವತೆಗಳಿಗೆ ಬಲ ಹೆಚ್ಚುತ್ತಾ ಬಂತು. ಹೀಗೆ ಅತಿ ಪ್ರಯತ್ನದಿಂದ ದೇವ ದಾನವರು ಬಹು ಕಾಲ ಮಥಿಸಿದರೂ, ಅಮೃತ ಹುಟ್ಟಲಿಲ್ಲ. ಆಗ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ—ಎಲೈ, ಬ್ರಹ್ಮನೇ, ನಾವು ಎಷ್ಟು ಕಷ್ಟ ಪಟ್ಟರೂ, ಸಕಲ ಲೋಕ ರಕ್ಷಕನಾದ ನಾರಾಯಣನ ಅನುಗ್ರಹವಿಲ್ಲದೆ ಹೋದರೆ, ಅಮೃತ ಹೊಂದುವದಕ್ಕಾಗುವದಿಲ್ಲ ಎಂದು ಬಿನ್ನೈಸಲು; ಹಾಗೆಯೇ ಬ್ರಹ್ಮನು ಮಹಾ ವಿಷ್ಣುವಿಗೆ ಅರಿಕೆ ಮಾಡಿ ಕೊಳ್ಳಲು; ಆ ವಿಷ್ಣುವು,—ನಾನು ದೇವ ದಾನವರಿಗೆ ಹೆಚ್ಚಾದ ಬಲವನ್ನು ಕೊಡುತ್ತೇನೆ. ಅವರು ಯಥಾ ಪ್ರಕಾರ ಮಥಿಸಲಿ ಎಂದು ಅಪ್ಪಣೆ ಕೊಡಲು; ಆಗ ವಿಷ್ಣುವಿನ ಅನುಗ್ರಹದಿಂದ ದೇವ ದಾನವರು ಮಹಾ ಬಲಶಾಲಿಗಳಾಗಿ, ಎಲ್ಲರು ಒಟ್ಟಾಗಿ ಕೂಡಿ, ಸಾವಿರ ವರುಷಗಳ ಪರ್ಯಂತರ ಮಥಿಸುತ್ತಿರಲು; ಸರ್ಪಾಭರಣ ಭೂಷಿತೆಯಾಗಿ, ಕಪ್ಪು ವರ್ಣವುಳ್ಳ ಜೇಷ್ಠಾ ದೇವಿ ಹುಟ್ಟಿದಳು. ಅನಂತರ, ನೂರು ಸೂರ್ಯರ ಕಾಂತಿಗಳನ್ನು ಚೆಲ್ಲುತ್ತಾ, ತಂಪಾದ ಕಿರಣಗಳುಳ್ಳವನಾಗಿ, ಚಂದ್ರನು ಹುಟ್ಟಿದನು. ಅನಂತರದಲ್ಲಿ ಬಿಳೀ ವಸ್ತ್ರಗಳನ್ನು ಧರಿಸಿ ಕೊಂಡು, ಮಹಾ ಲಕ್ಷ್ಮಿ ಹುಟ್ಟಿದಳು. ಆ ಮೇಲೆ ಮದ್ಯವೂ, ಉಚ್ಚೈಶ್ರವಸ್ಸೆಂಬ ಕುದುರೆಯೂ, ಕೌಂಸ್ತುಭವೆಂಬ ದಿವ್ಯ ರತ್ನವೂ ಹುಟ್ಟಿದವು. ಆ ಕೌಂಸ್ತುಭ ಮಣಿಯು ನಾರಾಯಣನಿಗೆ ಪದಕವಾಯಿತು. ಆ ಮೇಲೆ, ಪಾರಿಜಾತವೂ, ಕಾಮಧೇನುವೂ, ಕಲ್ಪವೃಕ್ಷಗಳೂ, ನಾಲ್ಕು ಕೊಂಬುಗಳಿಂದ ಒಪ್ಪುತ್ತಿರುವ ಐರಾವತವೆಂಬ ಆನೆಯೂ ಜನಿಸಿದವು. ಜೇಷ್ಠಾದೇವಿಯೂ, ಚಂದ್ರನೂ, ಲಕ್ಷ್ಮಿಯೂ, ಸುರೆಯೂ, ಉಚ್ಚೈಶ್ರವಸ್ಸೆಂಬ ಕುದುರೆಯೂ, ಕಾಮಧೇನುವೂ, ಕಲ್ಪವೃಕ್ಷವೂ, ಐರಾವತವೂ, ಇವೆಲ್ಲಾ ದೇವತೆಗಳ ಪಾಲಿಗೆ ಬಂದವು.

ಅನಂತರದಲ್ಲಿ, ಧನ್ವಂತರಿ ಎಂಬ ಒಬ್ಬ ದಿವ್ಯ ಪುರುಷನು ಅಮೃತ ಪೂರಿತವಾದ ಬಿಳೀ ಕಲಶವನ್ನು ಕೈಯಲ್ಲಿ ಹಿಡಿದು ಕೊಂಡು, ಸಮುದ್ರ ಮಧ್ಯದಿಂದ ಹೊರಟು ಬರಲು; ಆ ದಿವ್ಯ ಪುರುಷನನ್ನು ಕಂಡು, ಆಶ್ಚರ್ಯ ಪಟ್ಟು, ದೈತ್ಯ ದಾನವರು ಆ ಅಮೃತಕ್ಕೋಸ್ಕರ ಕಲಹಮಾಡಿ, ಆ ಅಮೃತವನ್ನು ತೆಗೆದು ಕೊಳ್ಳಲು; ನಾರಾಯಣನು ಯೋಗ ಮಾಯ ಪ್ರಭಾವದಿಂದ ಮೋಹಿನೀ ರೂಪವನ್ನು ತಾಳಿ, ಆ ದೈತ್ಯ ದಾನವರಿಗೆ ಎದುರಾಗಿ ನಿಲ್ಲಲು; ಅವರು ಮೋಹಿನಿಯನ್ನು ಕಂಡು, ಮೂಢ ಹೃದಯರಾಗಿ, ಆಕೆಯಲ್ಲಿ ಮೋಹದಿಂದ ಪರವಶರಾಗಿ, ಆ ಅಮೃತವನ್ನು ಮೋಹಿನಿಗೆ ಒಪ್ಪಿಸಲು; ಆ ಮೋಹಿನಿಯು ಅಮೃತ ಕಲಶ

ವನ್ನು ಕೈಯಲ್ಲಿ ಧರಿಸಿ, ದೇವತೆಗಳನ್ನೂ ದಾನವರನ್ನೂ ಪ್ರತ್ಯೇಕವಾಗಿ ತನ್ನ ಎರಡು ಪಾರ್ಶಗಳಲ್ಲಿ ಪಙ್ತಿಯಾಗಿ ಕುಳ್ಳಿರಿಸಿ, ಪಕ್ಷಪಾತದಿಂದ ದೇವತೆಗಳಿಗೆ ಮೊದಲು ಅಮೃತವನ್ನು ಬಡಿಸಲು; ದಾನವರು ಕೋಪಿಸಿ ಕೊಂಡು, ನಾನಾ ಆಯುಧಗಳನ್ನು ತೆಗೆದು ಕೊಂಡು ದಿವ್ಯವಾದ ಕವಚಗಳನ್ನು ತೊಟ್ಟು, ಆ ದೇವತೆಗಳ ಕೂಡೆ ಯುದ್ಧವನ್ನು ಮಾಡಲು; ಆಗ ಇಂದ್ರನಿಗೆ ಸಹಾಯವಾಗಿ ನಾರಾಯಣನು ತಾನೇ ಕಾಣಿಸಿ ಕೊಂಡು, ಅದುತ ಪರಾಕ್ರಮದಿಂದ ಯುದ್ಧದಲ್ಲಿ ದಾನವ ಶ್ರೇಷ್ಠರನ್ನು ಪೆಟ್ಟಿನಿಂದ ಓಡಿಸಿ, ಆ ಅಮೃತವನ್ನು ದೇವತೆಗಳಿಗೆ ಹಂಚುತ್ತಿರಲು; ಅವರು ಪಙ್ತಿಯಾಗಿ ಕುಳಿತು ಕೊಂಡು, ಅಮೃತವನ್ನು ಪಾನಾ ಮಾಡುತ್ತಿರುವ ಸಮಯದಲ್ಲಿ ರಾಹುವೆಂಬ ದಾನವನು ದೇವತಾ ವೇಷದಿಂದ ದೇವತೆಗಳೊಡನೆ ಬೆರಿಸಿ, ಅಮೃತ ಪಾನಾ ಮಾಡುವ ಸಮಯದಲ್ಲಿ, ಆ ಅಮೃತವು ಆತನ ಕೊರಳಿನಲ್ಲಿ ಇಳಿಯುವಷ್ಟರೊಳಗೆ, ದೇವತೆಗಳಿಗೆ ಹಿತವನ್ನು ಬಯಸಿ, ಚಂದ್ರ ಸೂರ್ಯರಿಬ್ಬರು ಸರ್ವಜ್ಞನಾದ ವಿಷ್ಣುವಿಗೆ ಸನ್ನೆಯಿಂದ ತಿಳಿಸಲು; ಚಕ್ರಾಯುಧನು ತನ್ನ ಕೈಯಲ್ಲಿರುವ ಚಕ್ರದಿಂದ ಆ ರಾಹುವಿನ ಕೊರಳನ್ನು ಕತ್ತರಿಸಲು; ಅವನ ತಲೆಯು ಪರ್ವತ ಶಿಖರದೋಪಾದಿಯಲ್ಲಿ ಭೂಮಿಯಲ್ಲಿ ಬೀಳಲು; ಅದರ ಭಾರದಿಂದ ಭೂಮಿಯು ಗಡಗಡನೆ ನಡುಗಲು; ಆ ರಾಹುವು ಈ ದ್ವೇಷವನ್ನು ಮನಸ್ಸಿನಲ್ಲಿಟ್ಟು ಕೊಂಡು, ಅದು ಮೊದಲು ಆ ಚಂದ್ರ ಸೂರ್ಯರನ್ನು ಪರ್ವ ಕಾಲಗಳಲ್ಲಿ ಪೀಡಿಸುತ್ತಲಿದ್ದನು. ಈ ರೀತಿಯಲ್ಲಿ ದೇವತೆಗಳು ಮಹಾ ವಿಷ್ಣುವಿನ ದಯದಿಂದ ಅಮೃತ ಪಾನವನ್ನು ಮಾಡಿ, ದೈತ್ಯ ದಾನವರ ಮೇಲೆ ಜಯವನ್ನು ಹೊಂದಿ, ಮಂದರ ಪರ್ವತವನ್ನು ಯಥಾ ಸ್ಥಾನದಲ್ಲಿ ನಿಲ್ಲಿಸಿ, ಇಂದ್ರನ ಸನ್ನಿಧಿಗೆ ಬಂದು—ಈ ಅಮೃತವನ್ನೂ ನಮ್ಮನ್ನೂ ರಕ್ಷಿಸುವ ಭಾರ ನಿನ್ನದೇ ಎಂದು ಹೇಳಿ, ಆ ಅಮೃತ ಕಲಶವನ್ನು ಇಂದ್ರನ ವಶಕ್ಕೆ ಒಪ್ಪಿಸಿ ಬಿಟ್ಟರು.

**56. Garuda conquers the gods and carries off the Ambrosia.**

೫೬. ಗರುಡನು ದೇವತೆಗಳನ್ನು ಜಯಿಸಿ, ಅಮೃತ ಕಲಶವನ್ನು ತಂದದ್ದು.

ಒಂದಾನೊಂದು ದಿವಸ ಕದ್ರು ದೇವಿಯು, ಸಕಲ ಶುಭ ಲಕ್ಷಣ ಲಕ್ಷಿತವಾಗಿ, ಅತ್ಯಂತ ವೇಗ ಯುಕ್ತವಾಗಿರುವ ಒಂದು ಅಶ್ವ ರತ್ನವನ್ನು ಕಂಡು, ವಿನತೆಯನ್ನು ಕರೆದು—ಈ ಕುದುರೆ ಯಾವ ವರ್ಣವುಳ್ಳದ್ದಾಗಿದೆ? ಬೇಗ ಹೇಳೆನಲು; ಆ ವಿನತೆಯು,—ಅದು ಬಿಳೀ ವರ್ಣವುಳ್ಳದ್ದಾಗಿ ತೋರುತ್ತದೆ. ಆದರೆ ನಿನಗೆ ಹ್ಯಾಗೆ ತೋರುತ್ತೆ? ಹೇಳೆನಲು; ಆ ಕದ್ರು ದೇವಿಯು—ಈ ಕುದುರೇ ಬಾಲ

ಕಪ್ಪಾಗಿ ತೋರುತ್ತಿದೆ. ಈ ವಿಷಯದಲ್ಲಿ ಸೋತವರು ಗೆದ್ದವರಿಗೆ ದಾಸ್ಯವನ್ನು ಮಾಡಲುಳ್ಳವರು ಎಂದು ಜೂದವಿಸಿ, ನಾಳೆ ನಿಗದಿ ಮಾಡೋಣ ಎಂದು ಹೇಳಿ, ಅವರಿಬ್ಬರು ತಮ್ಮ ತಮ್ಮ ಮನೆಗಳಿಗೆ ಹೋಗಲು; ಆ ಕದ್ರುವು ತನ್ನ ಸಾವಿರ ಮಂದಿ ಮಕ್ಕಳಾದ ಸರ್ಪಗಳನ್ನು ಕರೆದು—ಎಲೈ, ಮಕ್ಕಳಿರಾ, ನಾನು ವಿನತೆಯ ಕೂಡೆ ಜೂಜಾಡಿ ಇದ್ಧೇನೆ. ಆದ್ದರಿಂದ ನಾನು ಈ ಅರ್ಥದಲ್ಲಿ ಸೋಲದಂತೆ ನೀವಷ್ಟು ಕಪ್ಪು ಕೂದಲುಗಳ ಹಾಗೆ ಆ ಕುದುರೆಯ ಬಾಲದಲ್ಲಿ ಕಾಣಿಸ ಬೇಕೆಂದು ಪ್ರಾರ್ಥಿಸಲು; ಆ ಕುಮಾರಕರು ಆ ವಾಕ್ಯವನ್ನು ಕೇಳಿ, ಪರಿಹಾಸದಿಂದ ಆ ಅರ್ಥವನ್ನು ಅಂಗೀಕರಿಸದೆ ಹೋಗಲು; ಆ ಕದ್ರು ದೇವಿಯು ಕೋಪಿಸಿ ಕೊಂಡು—ನನ್ನ ಮಾತನ್ನು ಮೀರಿದ್ದರಿಂದ ಜನಮೇಜಯರಾಯನ ಸರ್ಪ ಯಾಗದಲ್ಲಿ ಈ ಸರ್ಪ ಕುಲವಷ್ಟನ್ನು ಅಗ್ನಿ ದಹಿಸಲಿ ಎಂದು ಶಪಿಸಲು; ತಾಯಿಯ ಶಾಪಕ್ಕೆ ತಲ್ಲಣಿಸಿ, ಕರ್ಕೋಟಕನೆಂಬ ಸರ್ಪನು ಭಕ್ತಿ ವಿಶ್ವಾಸಗಳಿಂದ ತಾಯಿಯ ಅಡಿಗಳಿಗೆ ಎರಗಿ—ಎಲೈ, ತಾಯೇ, ನೀನು ಹೇಳಿದ ಪ್ರಕಾರ ಕುದುರೆಯ ಬಾಲದಲ್ಲಿ ಶೇರಿ, ಕಪ್ಪು ಕೂದಲುಗಳೋಪಾದಿಯಲ್ಲಿ ಕಾಣಿಸುತ್ತೇವೆ. ನಿನ್ನ ಮನಸ್ಸಿನಲ್ಲಿರುವ ಪರಿತಾಪವನ್ನು ಬಿಡೆಂದು ಪ್ರಾರ್ಥಿಸಲು; ಕದ್ರು ದೇವಿಯು—ನೀವು ಹಾಗೆ ಮಾಡಿದರೆ, ನಿಮಗೆ ಶ್ರೇಯಸ್ಸಾಗುತ್ತದೆ ಎಂದು ಹೇಳಿ, ಸಂತೋಷ ಪಟ್ಟಳು.

ಆ ರಾತ್ರಿಯನ್ನು ಕಳೆದು, ಸೂರ್ಯೋದಯವಾಗಲು; ಅಕ್ಕ ತಂಗಿಯರಾದ ಕದ್ರು ವಿನತೆಯರು ಓರ್ವರೋರ್ವರಿಗೆ ಮತ್ಸರಿಸಿ, ತಮ್ಮ ತಮ್ಮ ಪಂಥವು ಗೆಲ್ಲ ಬೇಕೆಂದು ನಿಶ್ಚಯಿಸಿ, ಉಚ್ಚೈಶ್ರವಸ್ಸೆಂಬ ಕುದುರೆಯನ್ನು ಹುಡುಕುತ್ತಾ, ಅದನ್ನು ಮೊದಲು ಕಂಡ ಸ್ಥಳಕ್ಕೆ ಬಂದು, ಆ ಪ್ರದೇಶದಲ್ಲಿ ಮಹತ್ತಾದ ಜಲಗಳಿಗೆ ಆಧಾರವಾಗಿ—ಹೆಚ್ಚಾಗಿರುವ ಧ್ವನಿಯಿಂದ ಭಯಂಕರವಾಗಿ—ತಿಮಿ ತಿಮಿಂಗಿಲಗಳು ಮೊದಲಾದ ಜಲ ಜಂತುಗಳಿಂದ ಕೂಡಿ—ಅಖಿಲ ರತ್ನಗಳಿಗೂ ಆಕರವಾಗಿ—ವರುಣನಿಗೆ ಅರಮನೆಯಾಗಿ—ಸಕಲ ಲೋಕ ಭಯಂಕರವಾಗಿ—ಅಮೃತಕ್ಕೆ ಉತ್ಪತ್ತಿ ಸ್ಥಾನವಾಗಿ—ಅಪ್ರಮೇಯವಾಗಿ—ಅಚಿಂತ್ಯವಾಗಿ—ಘಾಳಿಯಿಂದ ತೆರಳಿ ಬರುವ ತೆರೆಗಳೆಂಬ ಹಸ್ತಗಳಿಂದ ನಟಿಸುವಂಥಾದ್ದಾಗಿ—ಚಂದ್ರನ ವೃದ್ಧಿ ಕ್ಷಯಗಳನ್ನು ಆಚರಿಸುತ್ತಾ, ಆಕಾಶದೋಪಾದಿಯಲ್ಲಿ ಇರುವ ಸಮುದ್ರವನ್ನು ಕಂಡು, ಅದನ್ನು ದಾಟಿ, ಬಹು ದೂರವಾಗಿ ಹೋಗಿ, ಒಂದು ಪ್ರದೇಶದಲ್ಲಿ ಉಚ್ಚೈಶ್ರವಸ್ಸೆಂಬ ಕುದುರೆಯನ್ನು ಕಂಡು, ಅದರ ಬಾಲ ಕಪ್ಪಾಗಿರುವದರಿಂದ ಮನಸ್ಸಿನಲ್ಲಿ ಖೇದ ಯುಕ್ತಳಾ

ಗಿರುವ ವಿನತೆಯನ್ನು ಕಂಡು, ತನ್ನ ದಾಸತ್ವಕ್ಕೆ ಕದ್ರು ದೇವಿಯು ನೇಮಿಸಲು; ಅದಕ್ಕೆ ಮನ ಒಡಂಬಡದೆ, ಹಂಬಲಿಸುತ್ತಾ ಇರುತ್ತಿದ್ದಳು. ಹೀಗಿರುತ್ತಿರುವಲ್ಲಿ, ಆಕೆಯ ಗರ್ಭದಿಂದ ಜನಿಸಿದ ಮೊಟ್ಟೆ ಒಡೆದು ಹುಟ್ಟಿದ ಗರುಡನು ಮಹಾ ಬಲ ಸಂಪನ್ನನಾಗಿ–ಸೂರ್ಯನನ್ನು ಅತಿಕ್ರಮಿಸಿರುವ ತೇಜೋ ವಿಶೇಷದಿಂದ ಯುಕ್ತನಾಗಿ–ಸ್ವೇಚ್ಛಾ ವಿಹಾರಿಯಾಗಿ–ಸಮುದ್ರ ತೀರದಲ್ಲಿದ್ದ ತನ್ನ ತಾಯಿಯ ಬಳಿಗೆ ಬಂದನು.

ಆ ವೇಳೆಯಲ್ಲಿ ಒಂದಾನೊಂದು ದಿವಸ, ಆ ಕದ್ರುವು ತನ್ನ ಕುಮಾರರ ಎದುರಿಗೆ ಆ ವಿನತಾ ದೇವಿಯನ್ನು ಕರೆದು–ಎಲೈ, ಸಕಲ ಸರ್ಪಗಳಿಗೆ ಆಪ್ರಿಯವಾಗಿ, ಸಮುದ್ರ ಮಧ್ಯದಲ್ಲಿರುವ ರಮಣಕ ದ್ವೀಪಕ್ಕೆ ನನ್ನನ್ನೂ ನನ್ನ ಕುಮಾರರನ್ನೂ ಕರೆದು ಕೊಂಡು, ಹೋಗೆನಲು; ಹಾಗೆ ಆಗಲೆಂದು, ವಿನತಾ ದೇವಿಯು ಆ ಕದ್ರು ದೇವಿಯನ್ನು ತನ್ನ ಬೆನ್ನಿನ ಮೇಲೆ ಏರಿಸಿ ಕೊಂಡು, ಆ ಸರ್ಪಗಳನ್ನು ಬೆನ್ನಿನ ಮೇಲೆ ಹೊತ್ತು ಕೊಂಡು ಬರುವಂತೆ ತನ್ನ ಮಗನಾದ ಗರುಡನಿಗೆ ಆಜ್ಞಾಪಿಸಲು; ಅವನು ತನ್ನ ತಾಯಿಯ ಅಪ್ಪಣೆಯ ಪ್ರಕಾರ ಆ ಸರ್ಪಗಳನ್ನು ತನ್ನ ಬೆನ್ನಿನ ಮೇಲೆ ಇರಿಸಿ ಕೊಂಡು, ಅಂತರಿಕ್ಷದಲ್ಲಿ ಸೂರ್ಯನಿಗೆದುರಾಗಿ ಹಾರಲು; ಅವರಿಬ್ಬರು ನಡೆಯುತ್ತಿರುವ ಸಮಯದಲ್ಲಿ, ಸೂರ್ಯ ಕಿರಣ ಸಂತಾಪದಿಂದ ಸರ್ಪಗಳೆಲ್ಲಾ ಮೂರ್ಛಿಸಿ ಕೆಳಗೆ ಬೀಳಲು; ಆ ಕದ್ರುವು ದೇವೇಂದ್ರನನ್ನು ನಾನಾ ಪ್ರಕಾರವಾದ ಸ್ತೋತ್ರಗಳಿಂದ ಸ್ತುತಿಸಲು; ಇಂದ್ರನು ಸಂತುಷ್ಟನಾಗಿ ಮೇಘಗಳನ್ನೆಲ್ಲಾ ಕರೆದು–ನೀವು ಆಕಾಶವನ್ನೆಲ್ಲಾ ಆವರಿಸಿ ಕೊಂಡು, ವರ್ಷಿಸಿರಿ ಎಂದು ಕಟ್ಟು ಮಾಡಲು; ಅವುಗಳು ಅದೇ ಪ್ರಕಾರ ವರ್ಷಿಸಲು; ಆ ವರ್ಷದಿಂದ ತಂಪು ಹೊಂದಿ, ಸರ್ಪಗಳೆಲ್ಲಾ ಯಥಾ ಪ್ರಕಾರ ಮೂರ್ಛೆ ತಿಳಿದು ಎದ್ದು, ತಿರಿಗಿ ಗರುಡನ ಮೇಲೆ ಏರಿ ಕೊಂಡು, ಸಮುದ್ರ ಮಧ್ಯದಲ್ಲಿ ಹೋಗುತ್ತಾ, ವಿಚಿತ್ರ ಫಲ ಪುಷ್ಪ ಭರಿತಗಳಾದ ಉದ್ಯಾನ ವನಗಳಿಂದಲೂ, ಕನಕ ರತ್ನ ಖಚಿತಗಳಾದ ಮನೆಗಳಿಂದಲೂ, ಸ್ವಚ್ಛೋದಕಗಳುಳ್ಳ ಸರಸ್ಸುಗಳಿಂದಲೂ, ಪರಿಮಳಿಸುತ್ತಲಿರುವ ಹೊನ್ನೆ, ಸುರಹೊನ್ನೆ, ಮಾವು, ಶೀಮಾವು, ನಿಂಬೆ, ದಾಡಿಂಬೆ, ಹಲಸು, ಕಿತ್ತಳೆ, ನೇರಿಲು ಮೊದಲಾದ ವೃಕ್ಷ ಸಮೂಹದಿಂದಲೂ, ಮಕರಂದ ಪಾನದಿಂದ ಮದಿಸಿ ಝೇಂಕರಿಸುತ್ತಲಿರುವ ತುಂಬಿಗಳ ತಂಡಗಳಿಂದಲೂ, ಯುಕ್ತವಾಗಿ ಶೋಭಿಸುವ ರಮಣಕ ದ್ವೀಪವನ್ನು ಕಂಡು, ಅಲ್ಲಿ ಇಳಿದು, ತಮ್ಮ ಮನಸ್ಸು ಬಂದ ಕಡೆಯಲ್ಲೆಲ್ಲಾ ಸಂಚರಿಸಿ, ತಿರಿಗಿ ಆ ಸರ್ಪಗಳು ಗರುಡನನ್ನು ಕುರಿತು–ಎಲೈ, ಈ ದ್ವೀಪವ

ಲ್ಲದೆ ಇನ್ನು ಅನೇಕ ಸ್ಥಳಗಳಿವೆ; ಅವುಗಳನ್ನೆಲ್ಲಾ ತೋರಿಸು ಎಂಧೇಳಲು; ಗರುಡನು ಆ ಮಾತನ್ನು ಕೇಳಿ, ಚಿಂತಾಕ್ರಾಂತನಾಗಿ, ತನ್ನ ತಾಯಿಯ ಮುಖವನ್ನು ನೋಡಿ—ಎಲೈ, ತಾಯೇ, ನಾವು ಇವರ ಮಾತು ಕೇಳಿ, ಚಾಕರಿ ಮಾಡುವದಕ್ಕೆ ಕಾರಣವೇನೆಂದು ಕೇಳಲು; ಆ ವಿನತೆಯು ತನ್ನನ್ನು ಕದ್ರುವು ಮೋಸದಿಂದ ಜೂಜಿನಲ್ಲಿ ಗೆದ್ದದ್ದನ್ನು ವಿಸ್ತಾರವಾಗಿ ತಿಳಿಸಲು; ಅದನ್ನು ಕೇಳಿ, ಗರುಡನು ಮನಸ್ಸಿನಲ್ಲಿ ಬಹಳ ವ್ಯಸನ ಪಟ್ಟು, ಈ ದಾಸ್ಯವನ್ನು ತಪ್ಪಿಸುವದಕ್ಕೆ ಏನು ಉಪಾಯವನ್ನು ಮಾಡ ಬೇಕೆಂದು ಯೋಚಿಸುತ್ತಾ, ಆ ಕದ್ರುವಿನ ಮಕ್ಕಳನ್ನು ಕರೆದು—ಎಲೈ, ಮಹಾತ್ಮರುಗಳಿರಾ, ನಮ್ಮ ದಾಸ್ಯವನ್ನು ತಪ್ಪಿಸಿ ಕೊಳ್ಳುವ ಹಾಗೆ ನಾವು ನಿಮಗೆ ಏನು ತಂದು ಕೊಡ ಬೇಕು? ಯಾವ ವೃತ್ತಾಂತವನ್ನು ತಿಳಿದು ಹೇಳ ಬೇಕು? ಎಂಥಾ ಸಾಹಸ ಕಾರ್ಯವನ್ನು ಮಾಡ ಬೇಕು? ನಿಶ್ಚಯವಾಗಿ ಹೇಳಿರೆಂದು ಕೇಳಲು; ಆ ಸರ್ಪಗಳೆಲ್ಲಾ ಒಟ್ಟು ಕೂಡಿ, ಆಲೋಚನೆ ಮಾಡಿ ಕೊಂಡು—ಎಲೈ, ಗರುಡನೇ, ನೀನು ಅಮೃತವನ್ನು ತಂದು ಕೊಟ್ಟರೆ, ನಿಮ್ಮ ದಾಸ್ಯವು ಹೋಗುವದೆಂದು ಗರುಡನಿಗೆ ಹೇಳಲು; ಅವನು ಅದಕ್ಕೆ ಒಪ್ಪಿ ಕೊಂಡು, ತನ್ನ ತಾಯಿಯ ಸಂಗಡ—ಎಲೈ, ತಾಯೇ, ನಾನು ಅವಶ್ಯವಾಗಿ ಈ ಸರ್ಪಗಳಿಗೋಸ್ಕರ ಅಮೃತವನ್ನು ತರುವದಕ್ಕೆ ಹೋಗುತ್ತಲಿದ್ದೇನೆ; ನನಗೆ ಆಹಾರವನ್ನು ಕೊಡೆಂದು ಕೇಳಲು; ಅವಳು—ಎಲೈ, ಮಗನೇ, ಸಮುದ್ರ ಮಧ್ಯದ ಒಂದು ದ್ವೀಪದಲ್ಲಿ ಬೇಡರ ಹಳ್ಳಿಗಳುಂಟು. ಅಲ್ಲಿ ಬೇಡರು ಹೆಚ್ಚಾಗಿ ಉಂಟು. ನೀನಲ್ಲಿಗೆ ಹೋಗಿ, ಅವರನ್ನು ಭಕ್ಷಿಸು. ಅಲ್ಲಿ ಬ್ರಾಹ್ಮಣರು ಇದ್ದರೆ, ಅವರನ್ನು ಬಿಟ್ಟು ಬಿಡೆನಲು; ಗರುಡನು ಆ ವಾಕ್ಯವನ್ನು ಕೇಳಿ—ಅಷ್ಟು ಮಂದಿ ಬೇಡರಲ್ಲಿ ಬ್ರಾಹ್ಮಣನು ಶಿಕ್ಕಿದ್ದು ಹ್ಯಾಗೆ ತಿಳಿಯ ಬೇಕೆಂದು ಕೇಳಲು; ವಿನತೆಯು ಮಗನನ್ನು ಕರೆದು—ನೀನು ಬೇಡರನ್ನು ಭಕ್ಷಿಸುವ ಸಮಯದಲ್ಲಿ ಕೊರಳಲ್ಲಿ ಶಿಕ್ಕಿ ಅಗ್ನಿಯೋಪಾದಿಯಲ್ಲಿಯೂ, ಗಾಣದೋಪಾದಿಯಲ್ಲಿಯೂ, ಯಾವವನು ಪೀಡಿಸುವನೋ, ಅವನು ಬ್ರಾಹ್ಮಣನು ಎಂದು ಗುರುತನ್ನು ಹೇಳಿ, ಆಶೀರ್ವಾದಗಳನ್ನು ಮಾಡಿ, ಕಳುಹಿಸಲು; ತಾಯಿಯ ಅಪ್ಪಣೆಯನ್ನು ಶಿರಸಾವಹಿಸಿ, ಗರುಡನು ಗರಿಗಳನ್ನು ಬಿಚ್ಚಿ, ಗಗನ ಮಂಡಲಕ್ಕೆ ಹಾರಿ, ಅಧಿಕವಾದ ಹಸಿವು ಬಾಯಾರಿಕೆಗಳಿಂದ ಕಂಗೆಟ್ಟು, ಎರಡನೇ ಯಮನೋಪಾದಿಯಲ್ಲಿ ಆ ಬೇಡರ ಗ್ರಾಮವನ್ನು ಕುರಿತು ಹೋಗುವಾಗ, ಗರಿಗಳ ಘಾಳಿಗೆ ಭೂಮಿಯಿಂದ ಎದ್ದ ದೂಳಿಯು ಆಕಾಶ ಮಂಡಲಕ್ಕೆ ಹಾರಲು; ಸಮುದ್ರ ಮಧ್ಯದಲ್ಲಿ ಇರುವ ಜಲವಷ್ಟು ಕಲಕಲು;

ಸಮೀಪದಲ್ಲಿರುವ ಪರ್ವತಗಳು ಅಲ್ಲಾಡಲು; ಭಯಂಕರವಾದ ಬಾಹು ಬಲದಿಂದ ವಿಜೃಂಭಿಸಿ, ಬೇಡರನ್ನು ನುಂಗುವದಕ್ಕೋಸ್ಕರ ಬಾಯಿ ತೆರೆಯಲು; ಆ ಬೇಡರು ಅತಿ ತ್ವರೆಯಿಂದ ಮಹಾ ಘೋಷದಿಂದ ಕದಲುತ್ತಿರುವ ವನದಲ್ಲಿ ಧೂಳಿಗಳ ಪೆಟ್ಟನಿಂದ ದಿಕ್ಕುಗೆಟ್ಟು, ಬೆದರಿದ ಪಕ್ಷಿ ಸಮೂಹವು ಆಕಾಶವನ್ನು ಪ್ರವೇಶಿಸುವ ಹಾಗೆ, ಆ ಗರುಡನ ಬಾಯಿಯನ್ನು ಪ್ರವೇಶಿಸಲು; ಅವರಷ್ಟನ್ನೂ ಭಕ್ಷಿಸಿದರೂ, ಸಾಲದೆ, ಸಮುದ್ರದಲ್ಲಿರುವ ಬಹು ವಿಧ ಮತ್ಸ್ಯಗಳನ್ನು ಭಕ್ಷಿಸಿದನು.

ಆ ಸಮಯದಲ್ಲಿ ಗರುಡನ ಕೊರಳಲ್ಲಿ ಅಗ್ನಿ ಜ್ವಾಲೆಯ ಹಾಗೆ ಉರಿಯುತ್ತಾ, ನುಂಗ ಕೂಡದೆ ಇರುವ ಒಬ್ಬ ಬ್ರಾಹ್ಮಣನು ಅಡ್ಡಲಾಗಲು; ಆ ಬ್ರಾಹ್ಮಣನನ್ನು ಬಿಟ್ಟು ಬಿಟ್ಟು, ಆ ಕಿರಾತರನ್ನೆಲ್ಲಾ ತಿಂದರೂ, ಹಸಿವು ಅಡಗದೆ ಹೋದ್ದರಿಂದ ತನ್ನ ತಂದೆಯಾದ ಕಶ್ಯಪನೆಡೆಗೆ ಹೋಗಿ—ಅಪ್ಪಾ, ನಾನು ತಾಯಿಯ ದಾಸ್ಯವನ್ನು ಪರಿಹಾರಾ ಮಾಡುವ ನಿಮಿತ್ತ ಅಮೃತವನ್ನು ತರುವದಕ್ಕೆ ಹೋಗುತ್ತಲಿದ್ದೇನೆ; ನನಗೊಂದು ಆಹಾರದಿಂದ ತೃಪ್ತಿ ಆಗಲಿಲ್ಲ; ನೀನಿನ್ನೊಂದು ಊಟವನ್ನು ನೇಮಿಸೆಂದು ಬೇಡಿಕೊಳ್ಳಲು; ಅವನು—ಎಲೈ, ಮಗನೇ, ಪೂರ್ವದಲ್ಲಿ ಸುಪ್ರತೀಕ ವಿಭಾವಸುಗಳೆಂಬ ಇಬ್ಬರು ಅಣ್ಣ ತಮ್ಮಂದಿರು ಪಿತರಾರ್ಜಿತ ಧನ ವಿಭಾಗದ ನಿಮಿತ್ಯ ಪರಸ್ಪರ ಶಾಪಗ್ರಸ್ತರಾಗಿ, ಆನೆ ಆಮೆಗಳಾಗಿ ಒಂದು ನದಿಯಲ್ಲಿ ಜಗಳವಾಡುತ್ತಿದ್ದಾರೆ. ನೀನು ಅವುಗಳನ್ನು ಭಕ್ಷಿಸು; ಹೋಗೆಂದು ಕಳುಹಿಸಲು; ಗರುಡನು ಅದೇ ಮೇರೆ ಅವುಗಳನ್ನು ಭಕ್ಷಿಸಿ, ತೃಪ್ತನಾಗಿ, ಅಮೃತವನ್ನು ತರುವದಕ್ಕೋಸ್ಕರ ಅಂತರಿಕ್ಷಕ್ಕೆ ಹಾರಲು; ಆಗ ದೇವಲೋಕದಲ್ಲಿ ಅಶುಭ ಸೂಚಕಗಳಾದ ಉತ್ಪಾತಗಳು ಉಂಟಾದವು. ಹ್ಯಾಗಂದರೆ—ಇಂದ್ರನ ವಜ್ರಾಯುಧವು ತನ್ನಷ್ಟಕ್ಕೆ ತಾನೇ ಉರಿಯಿತು. ಹೊಗೆಯಿಂದಲೂ ಉರಿಯಿಂದಲೂ ಕೂಡಿದ ಒಂದು ಕೊಳ್ಳಿಯು ಇಂದ್ರನ ಮುಂದೆ ಬಿತ್ತು. ಆಕಾಶದಲ್ಲಿ ಮೇಘಗಳಿಲ್ಲದೆ ಗುಡುಗಿತು. ಮೇಘಗಳೆಲ್ಲಾ ರಕ್ತವನ್ನು ವರ್ಷಿಸಿದವು. ದೇವತೆಗಳು ಧರಿಸಿರುವ ಪುಷ್ಪ ಮಾಲೆಗಳು ಬಾಡಿದವು. ದೇವತೆಗಳ ಮುಖ ಕಾಂತಿ ತಪ್ಪಿತು. ಇವೇ ಮೊದಲಾದ ಉತ್ಪಾತಗಳನ್ನು ಕಂಡು, ದೇವೇಂದ್ರನು ಭಯ ಪಟ್ಟು, ಬೃಹಸ್ಪತ್ಯಾಚಾರ್ಯನನ್ನು ಕರಿಸಿ—ಈ ಅಪಶಕುನ ಯಾವ ನಿಮಿತ್ಯ ಉಂಟಾಯಿತು? ಹೇಳರೆಂದು ಕೇಳಲು; ಆ ಗುರುವು—ಎಲೈ, ಇಂದ್ರನೇ, ನೀನು ಪೂರ್ವದಲ್ಲಿ ವಾಲಖಿಲ್ಯರನ್ನು ಪರಿಹಾಸ್ಯ ಮಾಡಿದ್ದರಿಂದ, ಅವರ ತಪೋ ಪ್ರಭಾವದಿಂದ ಹುಟ್ಟಿದ ಗರುಡನೆಂಬವನು ಅಮೃತವನ್ನು ತೆಗೆದು ಕೊಂಡು ಹೋಗ ಬರುತ್ತಿದ್ದಾನೆ. ಇದು ನಿಶ್ಚಯವೆಂದು

ಹೇಳಲು; ಇಂದ್ರನು ಆ ಅಮೃತ ಕಲಶಕ್ಕೆ ಕಾವಲಾಗಿರುವ ದೇವತೆಗಳನ್ನು ಕರಿಸಿ, ಈ ವೃತ್ತಾಂತವನ್ನು ತಿಳಿಸಿ, ನೀವು ನಿಮ್ಮ ಆಯುಧಗಳನ್ನು ಹಿಡಿದು, ಮೋಸ ಬಾರದ ರೀತಿಗೆ ಸನ್ನದ್ಧರಾಗಿರ್ರಿ ಎಂದು, ಕಟ್ಟು ಮಾಡಲು; ಅವರು ಅದೇ ಪ್ರಕಾರ ಎಚ್ಚರದಿಂದ ಕಾದು ಕೊಂಡಿದ್ದರು. ಇತರ ದೇವತೆಗಳು ಕನಕ ವೈಢೂರ್ಯ ವಿಚಿತ್ರಗಳಾದ ತಮ್ಮ ತಮ್ಮ ಕವಚಗಳನ್ನು ತೊಟ್ಟು, ಕೆಲವರು ಶಸ್ತ್ರಗಳನ್ನು, ಕೆಲವರು ಚಕ್ರಗಳನ್ನು, ಕೆಲವರು ದೊಣ್ಣೆಗಳನ್ನು, ಕೆಲವರು ಶೂಲಗಳನ್ನು, ಕೆಲವರು ಕೊಡಲಿಗಳನ್ನು, ಇನ್ನು ಕೆಲವರು ಈಟಿಗಳನ್ನು, ಹಿಡಿದು ಕೊಂಡು, ಯುದ್ಧ ಸನ್ನದ್ಧರಾಗಿ ನಿಂತು ಕೊಂಡರು.

ಇತ್ತಲಾ ಗರುಡನು ದೇವ ಲೋಕವನ್ನು ಪ್ರವೇಶಿಸಲು; ಆತನನ್ನು ಕಂಡು, ದೇವತಾ ಸೈನ್ಯವೆಲ್ಲಾ ತಲ್ಲಣಿಸುತ್ತಾ ಇರಲು; ಆ ಅಮೃತ ಕಲಶಕ್ಕೆ ಕಾವಲಾಗಿದ್ದ ಭೌಮನು ಮುಹೂರ್ತ ಮಾತ್ರ ಕಾದಿ, ಆ ಪಕ್ಷಿರಾಜನ ಗರಿಗಳಿಂದಲೂ ಕೊಕ್ಕಿನಿಂದಲೂ ಘಾಯ ಪಡೆದು, ಓಡಿ ಹೋಗಲು; ಆ ಗರುಡನು ತನ್ನ ಗರಿಗಳ ವೇಗದಿಂದ ಘಾಳಿಯನ್ನು ಕಲ್ಪಿಸಲು; ಆ ಘಾಳಿಯಿಂದುಂಟಾದ ಧೂಳು ದೇವತಾ ಸೈನ್ಯಗಳ ಮೇಲೆ ಕವಿಯುತ್ತಾ, ಅವರ ಕಣ್ಣುಗಳನ್ನೆಲ್ಲಾ ಮುಚ್ಚುತ್ತಿರಲು; ಅವರು ಕುರುಡರಾಗಿ, ಇವನನ್ನು ನೋಡುವದಕ್ಕಾಗದೆ, ಸುಮ್ಮನೆ ತಿರುಗುತ್ತಿರಲು; ಗರುಡನು ಆ ಸೈನ್ಯವನ್ನೆಲ್ಲಾ ಗರಿಗಳಿಂದಲೂ ಕೊಕ್ಕಿನಿಂದಲೂ ಹೊಡೆದು, ಚುಚ್ಚುತ್ತಾ, ನೆಲಕ್ಕೆ ಕೆಡಹಲು; ದೇವೇಂದ್ರನು ಆ ಧೂಳಿಯನ್ನು ಹೋಗಲಾಡಿಸುವದಕ್ಕೆ ವಾಯು ದೇವನನ್ನು ಕಳುಹಿಸಲು; ಆ ವಾಯುವು ಆ ಧೂಳಿಯನ್ನು ಪರಿಹರಿಸಿ, ದಿಕ್ಕುಗಳನ್ನು ಬೆಳಗಿಸಲು; ದೇವತೆಗಳು ಒಮ್ಮಡಿಯಾಗಿ ಕಾಣಿಸಿ ಕೊಂಡು, ತಮ್ಮ ತಮ್ಮ ಆಯುಧಗಳಿಂದ ಗರುಡನನ್ನು ತಿವಿಯಲು; ಗರುಡನು ಕೋಪಿಸಿ ಕೊಂಡು, ಸಿಂಹನಾದವನ್ನು ಮಾಡಿ, ನಾಲ್ಕು ದಿಕ್ಕುಗಳಲ್ಲಿ ಕಾಣಿಸಿ ಕೊಂಡು, ನಾನಾ ಪ್ರಕಾರವಾಗಿ ಆಯುಧಗಳಿಂದ ತಿವಿಯುವ ದೇವತೆಗಳಿಗೆ ಭಯ ಹುಟ್ಟುವ ಹಾಗೆ ಆಕಾಶಕ್ಕೆ ಹಾರಲು; ಆ ದೇವತೆಗಳು ಕಬ್ಬಿಣದ ಕೋಲುಗಳನ್ನೂ, ಶೂಲಗಳನ್ನೂ, ದೊಣ್ಣೆಗಳನ್ನೂ, ಪಟ್ಟಾ ಕತ್ತಿಗಳನ್ನೂ, ಚೂರಿಗಳನ್ನೂ, ಸಾಹಾ ಕತ್ತಿಗಳನ್ನೂ, ಇನ್ನು ನಾನಾ ವಿಧಗಳಾದ ಆಯುಧಗಳನ್ನೂ, ಆ ಗರುಡನ ಮೇಲೆ ಪ್ರಯೋಗಿಸಿದರೂ, ಲಕ್ಷಿಸದೆ, ನಿಮಿಷ ಮಾತ್ರದಲ್ಲಿ ಆ ಗರುಡನು ತನ್ನ ಗರಿಗಳಿಂದಲೂ ಉಗುರುಗಳಿಂದಲೂ ದೇವತೆಗಳನ್ನು ಪೆಟ್ಟಿಕ್ಕಲು; ಅವನ ಉಗುರುಗಳ ಪೆಟ್ಟು ತಡ ಕೊಳ್ಳಲಾರದೆ, ಆ ದೇವತೆಗಳೆಲ್ಲಾ ದಿಕ್ಕು ದಿಕ್ಕಿಗೆ ಓಡಿ ಹೋದರು.

ಈ ಪ್ರಕಾರವಾಗಿ ಸಕಲ ದೇವತಾ ಸಮೂಹಗಳು ಅನೇಕ ಮುಖವಾಗಿ ತನ್ನೊಡನೆ ಕಾಳಗವಾಡುತ್ತಿರುವ ಗರುಡನ ಪರಾಕ್ರಮಕ್ಕೆ ನಿಲ್ಲಲಾರದೆ, ತಿರಿ ತಿರಿಗಿ ನೋಡುತ್ತಾ, ಭಯದಿಂದ ಪಲಾಯನವಾದರು. ಅಶ್ವಕ್ರಂದನನು, ರೇಣುಕನು, ಕ್ರುರರನು, ತಪನನು, ಉಲೂಕನು, ಚವಮಾನನು, ನಿಮಿಷನು, ಪ್ರರುಜನು, ಪ್ರತಿಹನು ಎಂಬ ದೇವತೆಗಳೊಡನೆ ತಾಕಿ, ಯುದ್ಧಕ್ಕೆ ತಲ ಪಟ್ಟು, ಕೊಕ್ಕಿನಿಂದ ತಿವಿದು, ರೆಕ್ಕೆಗಳಿಂದ ಬಡೆದು, ಹದವಾದ ಉಗುರುಗಳಿಂದ ಶೀಳಿ, ಧುಮುಕಿ, ಕಕ್ಕಸಗಾರನಾಗಿ, ತೋರುವ ಪ್ರಳಯ ಕಾಲದ ರುದ್ರನೋಪಾದಿಯಲ್ಲಿ ರೌದ್ರ ರೂಪಿನಿಂದ ಇರಲು; ಮಹಾ ಬಲ ಪರಾಕ್ರಮ ಸಂಪನ್ನನಾಗಿರುವ ಅ ಅಮರ ಶ್ರೇಷ್ಠರು ರಕ್ತಗಳನ್ನು ವರ್ಷಿಸುವ ಮಹಾ ಮೇಘಗಳ ರೀತಿಗೆ ನಿಂತಿರಲು; ಅವರನ್ನು ನಿಶ್ಶೇಷವಾಗಿ ಕೊಂದು, ಅಮೃತ ವಿದ್ದ ತಾವಿಗೆ ಹೋಗುವ ಸಮಯದಲ್ಲಿ ಅಮೃತ ಸ್ಥಾನವನ್ನು ಸುತ್ತಿ ಕೊಂಡು, ಜ್ವಾಲೆಗಳಿಂದ ದಹಿಸುತ್ತಲಿರುವ ಅಗ್ನಿ ಸ್ವರೂಪವಾದ ಸುತ್ತಿನ ಕೋಟೆಯನ್ನು ಕಂಡು, ಎಂಟು ಸಾವಿರದ ನೂರು ಮುಖಗಳನ್ನು ಧರಿಸಿ, ಮನೋ ವೇಗದಿಂದ ಹೋಗಿ, ಸಕಲ ನದೀ ಜಲಗಳನ್ನೆಲ್ಲಾ ಕುಡಿದು ಬಂದು, ಅಗ್ನಿ ಜ್ವಾಲೆಯನ್ನು ತಡೆದು, ಅಮೃತ ಸ್ಥಾನವನ್ನು ಹೊಕ್ಕು, ಅದರ ಸಮೀಪದಲ್ಲಿ ತೀಕ್ಷ್ಣವಾದ ಅಚ್ಚುಗಳಿಂದಲೂ, ಅಗ್ನಿ ಸೂರ್ಯ ಕಾಂತಿಯಿಂದಲೂ, ಕೂಡಿ ಕೊಂಡು, ಯಾವಾಗಲೂ ಸುತ್ತುತ್ತಾ, ಅಮೃತವನ್ನು ಅಪಹರಿಸಿ ಕೊಂಡು ಹೋಗುವವರಿಗೆ ವಿಘ್ನವಾಗುವ ರೀತಿಗೆ ದೇವತೆಗಳು ಮಾಡಿದ ಶಸ್ತ್ರ ಯಂತ್ರವನ್ನು ನೋಡಿ, ಅದರಲ್ಲಿ ಹೋಗುವದಕ್ಕೆ ಅವಕಾಶವನ್ನು ಕಾಣದೆ, ಆ ಯಂತ್ರದ ಸುತ್ತಲು ತಿರಿಗಿ, ಅದರ ಅಚ್ಚಿನ ಸಂಧಿನಲ್ಲಿ ಸ್ವಲ್ಪ ಸ್ಥಳವನ್ನು ಕಂಡು, ಸೂಕ್ಷ್ಮ ರೂಪವನ್ನು ವಹಿಸಿ, ನಿಮಿಷ ಮಾತ್ರದಲ್ಲಿ ಅದರೊಳಗೆ ಹೊಕ್ಕು; ಆ ಚಕ್ರದ ಕೆಳಗೆ ಮಿಂಚು ಬಳ್ಳಿಗಳಂದದಿಂದ ನಾಲಿಗೆಗಳನ್ನು ನೀಡುತ್ತಾ, ಗಗನವನ್ನು ಸೋಕುವ ಉರಿಗಳೊಡನೆ ಕೂಡಿರುವ ಕಾಡು ಗಿಚ್ಚಿನೋಪಾದಿಯಲ್ಲಿ ಮಹಾ ಶರೀರ ಯುಕ್ತಗಳಾಗಿ—ಕಣ್ಣುಗಳಿಂದ ವಿಷವನ್ನು ಕಾರುವಂಥಾ, ಯವೆ ಇಲ್ಲದೆ ಇರುವ ದೃಷ್ಟಿಗಳುಳ್ಳಂಥಾ, ಯಾವಾಗಲೂ ಕೋಪದಿಂದಲೇ ಕೂಡಿ, ನೋಡಿದ ಮಾತ್ರದಿಂದಲೇ ದಹಿಸುವ ಎರಡು ಸರ್ಪಗಳನ್ನು ಕಂಡು, ತನ್ನ ಗರಿಗಳ ಘಾಳಿಗಳಿಂದ ಹುಟ್ಟಿದ ಧೂಳಿಗಳಿಂದ ಆ ಕ್ರೂರ ಸರ್ಪಗಳ ಕಣ್ಣುಗಳನ್ನು ಮುಚ್ಚಿ, ಅವುಗಳು ಕಾಣದಂತೆ ಆ ಸರ್ಪಗಳನ್ನು ಹಿಡಿದು, ತುಮುರು ತುಮುರಾಗಿ ಮಾಡಿ, ಆ ಅಮೃತ ಕಲಶವನ್ನು

ತೆಗೆದು ಕೊಂಡು, ಅಮೃತ ಪಾನವನ್ನು ಅಪೇಕ್ಷಿಸದೆ, ಹೊರಗೆ ಬಂದು, ತನ್ನ ಎರಡು ಗರಿಗಳಿಂದ ಸೂರ್ಯ ಕಾಂತಿಯನ್ನು ಮುಚ್ಚುತ್ತಾ ಬರುವ ಸಮಯದಲ್ಲಿ, ಆತನ ಸಾಹಸಕ್ಕೆ ಸಂತೋಷ ಪಟ್ಟು, ಮಹಾ ವಿಷ್ಣುವು ಆತನಿಗೆ ಪ್ರತ್ಯಕ್ಷನಾಗಿ—ಎಲೈ, ಪಕ್ಷಿರಾಜನೇ, ನಿನ್ನ ಪರಾಕ್ರಮಕ್ಕೆ ಮೆಚ್ಚಿದೆನು; ನಿನಗಿಷ್ಟವಾದ ವರವನ್ನು ಬೇಡೆನಲು;—ಎಲೈ, ವಿಷ್ಣುವೇ, ನನಗೆ ಅಮೃತ ಪಾನವಿಲ್ಲದಿದ್ದರೂ, ಜರಾ ಮರಣಗಳಿಲ್ಲದಂತೆ ದಯ ಮಾಡ ಬೇಕೆನಲು;—ಹಾಗೆ ಆಗಲೆಂದು ಹೇಳಿದ ವಿಷ್ಣುವು ಆತನನ್ನು ತನಗೆ ವಾಹನವಾಗಿಯೂ ಧ್ವಜವಾಗಿಯೂ ಇರ ಬೇಕೆಂದು ಪ್ರಾರ್ಥಿಸಲು; ಗರುಡನು ಅದಕ್ಕೆ ಒಪ್ಪಿ ಕೊಂಡು, ಗಗನ ಮಾರ್ಗದಲ್ಲಿ ಬರುತ್ತಿರಲು; ಇಂದ್ರನು ಅಮೃತವನ್ನು ತೆಗೆದು ಕೊಂಡು ಹೋದನೆಂಬ ಕೋಪದಿಂದ ಆ ಗರುಡನನ್ನು ಬೆನ್ನಟ್ಟಿ ಕೊಂಡು ಬಂದು, ತನ್ನ ವಜ್ರಾಯುಧದಿಂದ ತಿವಿಯಲು; ಅವನು ಇಂದ್ರನನ್ನು ಕುರಿತು ನಸು ನಗುತ್ತಾ—ಎಲೈ, ಇಂದ್ರನೇ, ನಿನ್ನ ವಜ್ರಾಯುಧವು ನನಗೆ ಬಂದಿಷ್ಟಾದರೂ ನೋಯಿಸದೆ ಹೋಯಿತು. ಆದರೆ ಈ ಆಯುಧೋತ್ಪತ್ತಿ ಕಾರಣನಾದ ದಧೀಚಿಯನ್ನೂ, ನಿನ್ನನ್ನೂ, ಈ ಆಯುಧವನ್ನೂ, ಸಕಲರು ಬಹುಮಾನ ಪಡಿಸುವ ಹಾಗೆ, ಈ ಪಕ್ಷದಲ್ಲಿರುವ ಒಂದು ಗರಿಯನ್ನು ಸಡಲಿಸಿ ಬಿಡುತ್ತಲಿದ್ದೇನೆ ಎಂದು, ಒಂದು ಗರಿಯನ್ನು ಬಿಟ್ಟನು. ಇಂದ್ರನು ಆತನ ಅದ್ಭುತ ಪರಾಕ್ರಮವನ್ನೂ ಸಾಹಸವನ್ನೂ ಕಂಡು, ಆತನನ್ನು ಕರೆದು—ನಿನ್ನ ಬಲವೆಷ್ಟು ಎಂದು ತಿಳಿಯ ಬೇಕು. ನಿನ್ನ ಕೂಡೆ ಸರ್ವಥಾ ಸ್ನೇಹವನ್ನು ಬಯಸಿದ್ದೇನೆ ಎನಲು; ಗರುಡನು—ಎಲೈ, ದೇವೇಂದ್ರನೇ, ನೀನು ಹೇಳಿದ ಪ್ರಕಾರಕ್ಕೆ ತನ್ನ ಸ್ನೇಹ ನಿನಗೆ ಆಗ ತಕ್ಕದ್ದೇ ಸರಿ; ನನ್ನ ಮಹಾ ಬಲವನ್ನು ತಿಳಿಯ ಬೇಕೆಂದು ಕೇಳಿದಿಯಲ್ಲ? ಲೋಕದಲ್ಲಿ ಆತ್ಮ ಸ್ತುತಿ ಮಾಡ ಬಾರದು ಎಂದು, ದೊಡ್ಡವರು ಹೇಳುವರು. ಆದರೂ ಮಿತ್ರಭಾವದಿಂದ ಕೇಳಿದ ಕಾರಣ, ವಿವರಿಸುತ್ತೇನೆ; ಕೇಳು; ಪರ್ವತಗಳೂ, ವನಗಳೂ, ಧನಗಳೂ, ನಿಧಿಗಳೂ, ಸಮುದ್ರಗಳುಳ್ಳ ಈ ಮಹೀಮಂಡಲವೂ, ನಿನ್ನೊಡನೆ ಕೂಡಿದ ಸ್ಥಾವರ ಜಂಗಮಾತ್ಮಕವಾದ ಸಮಸ್ತ ಲೋಕಗಳನ್ನು ಒಂದು ರೆಕ್ಕೆಯಲ್ಲಿ ಆಯಾಸವಿಲ್ಲದೆ ವಹಿಸುವೆನು. ಇದೀಗ ನನ್ನ ಬಲವೆಂದು ತಿಳಿಸಲು; ದೇವೇಂದ್ರನು ಆತನನ್ನು ಕಂಡು—ನೀನು ಅಷ್ಟು ಬಲವುಳ್ಳವನೇ ಸರಿ; ಅದಕ್ಕೆ ಸಂಶಯವಿಲ್ಲ. ಈ ಹೊತ್ತು ಮೊದಲ್ಗೊಂಡು ನನ್ನಲ್ಲಿ ನಿಲಕಡೆಯಾದ ಸ್ನೇಹವನ್ನು ಪರಿಪಾಲಿಸು. ಈ ಅಮೃತವನ್ನು ತೆಕ್ಕೊಂಡು ಹೋಗಿ, ಮತ್ತೊಬ್ಬರಿಗೆ

ಕೊಟ್ಟರೆ, ಅವರು ನಮ್ಮ ಕೂಡೆ ಪ್ರತಿಭವಿಸಿ, ನಮ್ಮನ್ನು ಬಾಧಿಸುವರು. ಇದರಿಂದ ನಿನಗೆ ಪ್ರಯೋಜನವೇನು? ಆದದರಿಂದ ಈ ಅಮೃತವನ್ನು ಮಗುಚಿ ನನಗೆ ಕೊಡ ಬೇಕೆನಲು; ಆ ಗರುಡನು—ಒಂದು ನಿಮಿತ್ತದಿಂದ ಈ ಅಮೃತವನ್ನು ತೆಕ್ಕೊಂಡು ಹೋಗುವದೇ ಹೊರ್ತಾಗಿ, ಒಬ್ಬರಿಗೆ ಪಾನವನ್ನು ಮಾಡಿಸ ಬೇಕೆಂದು ಇಛ್ಛೆ ಇಲ್ಲ. ಅದನ್ನು ಒಂದು ಪ್ರದೇಶದಲ್ಲಿ ಇರಿಸಿದ ಮೇಲೆ ನೀನು ಎತ್ತಿ ಕೊಂಡು ಹೋಗುವದು ನಿನಗೆ ಸಮ್ಮತವೇ? ಎನಲು; ದೇವೇಂದ್ರನು ಸಂತೋಷ ಪಟ್ಟು, ನೀನು ಅಮೃತವನ್ನು ಕೆಳಗೆ ಇರಿಸಿದಲ್ಲಿ ನಾನು ಅದನ್ನು ಎತ್ತಿ ಕೊಂಡು ಹೋಗಲುಳ್ಳವನು ಎಂದು ನುಡಿದು, ಗರುಡನ ಸಂಗಡ ಬರಲು; ಗರುಡನು ಅತಿ ತ್ವರೆಯಿಂದ ತನ್ನ ತಾಯಿಯ ಸನ್ನಿಧಿಗೆ ಬಂದು,—ಅಮ್ಮಾ, ಅಮೃತವನ್ನು ತಂದೆನು. ಇನ್ನೇನು ಮಾಡ ಬೇಕೆನಲು; ಅವಳು ಪರಮ ಸಂತೋಷ ಯುಕ್ತಳಾಗಿ—ಇದನ್ನು ಆ ಸರ್ಪಗಳಿಗೆ ಒಪ್ಪಿಸೆನಲು; ಅವನು ಸರ್ಪಗಳ ಬಳಿಗೆ ಬಂದು—ಎಲೈ, ಸರ್ಪಗಳಿರಾ, ಅಮೃತವನ್ನು ತಂದಿದ್ದೇನೆ. ಅದನ್ನು ದರ್ಭೆಯ ಮೇಲಿರಿಸುತ್ತೇನೆ. ನೀವು ಸ್ನಾನವನ್ನು ಮಾಡಿ, ಅದನ್ನು ಭಕ್ಷಿಸ ಬಹುದೆನಲು; ಆ ಸರ್ಪಗಳು ಅತಿ ಸಂತೋಷದಿಂದ,—ಎಲೈ, ಗರುಡನೇ, ನಿನ್ನ ತಾಯಿಯ ದಾಸ್ಯವು ಇಂದಿಗೆ ತೀರಿತು. ಸ್ವಸ್ಥನಾಗಿ ಹೋಗೆಂದು ಹೇಳಿ, ಸ್ನಾನಕ್ಕೆ ಹೋಗಲು; ಆ ಸಮಯವನ್ನು ನಿರೀಕ್ಷಿಸಿ ಕೊಂಡಿದ್ದ ಇಂದ್ರನು ಆ ಅಮೃತ ಕಲಶವನ್ನು ತೆಗೆದು ಕೊಂಡು, ಅಮರಾವತಿಗೆ ಹೋದನು. ಇತ್ತಲಾ ಸರ್ಪಗಳು ಸ್ನಾನವನ್ನು ಮಾಡಿ, ಬಂದು, ಅಮೃತ ಕಲಶವನ್ನು ಕಾಣದೆ, ಗರುಡನು ಮೋಸ ಮಾಡಿದನೆಂದು ಖೇದಗೊಂಡು, ಆ ಕಲಶವನ್ನು ಇಟ್ಟಿದ್ದ ದರ್ಭೆಗಳನ್ನು ನೆಕ್ಕಲು; ಆ ದರ್ಭೆಗಳ ಅರುಗುಗಳು ಅವುಗಳ ನಾಲಿಗೆಯನ್ನು ಇಭ್ಭಾಗಾ ಮಾಡಿದವು. ಅಂದಿನಿಂದ ಸರ್ಪಗಳಿಗೆ ದ್ವಿಜಿಹ್ವೆಗಳೆಂದು ಹೆಸರಾಯಿತು. ಅನಂತರದಲ್ಲಿ ಗರುಡನು ಪಕ್ಷಿರಾಜನಾಗಿ, ಸರ್ಪಗಳನ್ನು ಭಕ್ಷಿಸುತ್ತಾ, ಆ ಪವಿತ್ರವಾದ ಅರಣ್ಯದಲ್ಲಿ ಮಾತೃ ಶುಶ್ರೂಷೆಯನ್ನು ಮಾಡಿ ಕೊಂಡಿರುತ್ತಿದ್ದನು.

### 57. The Story of Dushyanta.

### ೫೭. ದುಶ್ಯಂತೋಪಾಖ್ಯಾನ.

ಪೌರ ವಂಶೋದ್ಧಾರಕನಾದ ದುಶ್ಯಂತ ಮಹಾರಾಯನು ಅಸಮಾನ ಶೌರ್ಯವುಳ್ಳವನಾಗಿ, ಚತುಸ್ಸಮುದ್ರ ಮುದ್ರಿತವಾದ ಭೂಮಂಡಲವಷ್ಟನ್ನು ತನ್ನ ಸ್ವಾಧೀನಾ ಮಾಡಿ ಕೊಂಡು, ನಾಲ್ಕನೇ ಭಾಗವನ್ನು ತಾನು ಅನುಭವಿಸುತ್ತಾ,

ಸಮುದ್ರ ತೀರದ ದೇಶಗಳನ್ನೂ, ಮ್ಲೇಂಛ ದೇಶಗಳನ್ನೂ, ಇವೇ ಮೊದಲಾದ ಸಮಸ್ತ ದೇಶಗಳನ್ನೂ, ಆ ದೇಶಗಳ ಪ್ರಜೆಗಳನ್ನೂ ಎಚ್ಚರವಾಗಿ ಪಾಲಿಸುತ್ತಾ ಇರುವಾಗ, ಸಮಸ್ತ ಜನರು ವರ್ಣ ಸಂಕರಾದಿ ಪಾಪ ಕೃತ್ಯಗಳನ್ನು ಮಾಡದೆ, ಧರ್ಮದಲ್ಲಿಯೇ ನಿರತರಾಗಿದ್ದರು. ಮತ್ತು ಆತನ ದೇಶದಲ್ಲಿ ಚೋರ ವ್ಯಾಘ್ರಾದಿಗಳ ಭಯವೂ, ಹಸಿವು, ಬಾಯಾರಿಕೆ ಮೊದಲಾದ ಉಪದ್ರಗಳೂ ಇರಲಿಲ್ಲ. ಪರ್ಜನ್ಯನು ತಿಂಗಳಿಗೆ ಮೂರು ಸಾರಿ ವರ್ಷಿಸುವದರಿಂದ, ಆತನ ದೇಶಗಳಲ್ಲಿ ಸಕಲವಾದ ಪೈರುಗಳು ಬೆಳೆದು, ಧಾನ್ಯಗಳೆಲ್ಲಾ ಅಘ್ಘವಾಗಿ ಇದ್ದವು. ಆ ರಾಜಕುಮಾರನು ಯೌವನದಲ್ಲಿ ಗರಡೀ ಸಾಧಕವನ್ನು ಮಾಡಿ, ಮಂದರ ಪರ್ವತವನ್ನಾದರೂ ಎತ್ತುವಷ್ಟು ಭುಜ ಬಲವನ್ನು ಸಂಪಾದಿಸಿ, ಧನುರ್ಯುದ್ಧದಲ್ಲಿಯೂ, ಗದಾ ಯುದ್ಧದಲ್ಲಿಯೂ, ಮುಷ್ಟಿ ಯುದ್ಧದಲ್ಲಿಯೂ, ಇನ್ನು ನಾನಾ ವಿಧಗಳಾದ ಆಯುಧ ಯುದ್ಧಗಳಲ್ಲಿಯೂ, ಸಮರ್ಥನಾಗಿ—ಆನೆ, ಕುದುರೆ, ರಥ ಇವುಗಳನ್ನೇರುವದರಲ್ಲಿ ಚತುರನಾಗಿ—ಬಲದಲ್ಲಿ ವಿಷ್ಣುವಿಗೂ, ಪರಾಕ್ರಮದಲ್ಲಿ ಸೂರ್ಯನಿಗೂ, ಗಾಂಭೀರ್ಯದಲ್ಲಿ ಸಮುದ್ರನಿಗೂ, ಕ್ಷಮೆಯಲ್ಲಿ ಭೂಮಿಗೂ, ಸಮಾನನಾಗಿ—ಯಶೋವಂತನಾಗಿ ಇರುತ್ತಿದ್ದನು.

ಹೀಗಿರುವಲ್ಲಿ, ಒಂದಾನೊಂದು ದಿವಸ ಆ ದುಶ್ಯಂತ ಮಹಾರಾಯನು ವನದಲ್ಲಿರುವ ನಾನಾ ಮೃಗಗಳನ್ನು ಬೇಟೆಯಾಡ ಬೇಕೆಂದೆಣಿಸಿ, ಶತಘ್ನಿ, ಕತ್ತಿ, ಪಟ್ಟಾಕತ್ತಿ, ತೊಡಪು, ಜಮದಾಡಿ, ಬಾಕು, ಸುರಾಯಿ, ಕಬ್ಬಿಣ ಕೋಲು, ಭಿಂಡಿವಾಳ, ಭರಜಿ, ಭಲ್ಲೆ, ಈಟಿ, ಶಿಂಗಾಡಿ, ಮೊದಲಾದ ಆಯುಧಗಳನ್ನು ಹಿಡಿದು, ಜೀರೆ, ಶೀರೆ, ಭಕ್ತರು ಮೊದಲಾದ ಕವಚಗಳನ್ನು ತೊಟ್ಟು, ತೇರುಗಳನ್ನೂ ಆನೆಗಳನ್ನೂ ಕುದುರೆಗಳನ್ನೂ ಏರಿದ ರಾಹುತರೂ, ಕಾಲಾಳುಗಳೂ, ಉಭಯ ಪಾರ್ಶ್ವದಲ್ಲಿ ನಡೆದು ಬರುತ್ತಾ ಇರಲು; ಪಟ್ಣದಿಂದ ಹೊರಟು, ಭಟರ ಸಿಂಹನಾದಗಳಿಂದಲೂ, ಭುಜಗಳ ಚಪ್ಪಾಳೆಗಳಿಂದಲೂ, ರಥ ಚಕ್ರ ಧ್ವನಿಗಳಿಂದಲೂ, ಮದ್ದಾನೆಗಳ ಘೀಂಕಾರಗಳಿಂದಲೂ, ಕುದುರೆಗಳ ಹೇಷಾ ರವಗಳಿಂದಲೂ, ಭೇರಿ ಮೃದಂಗ ದುಂದುಭಿ ಕಹಳಾದಿ ವಾದ್ಯ ರವಗಳಿಂದಲೂ, ದಿಕ್ಕುಗಳು ಒಂದೇ ಪ್ರಕಾರ ಭೋರೆಂದು ಮೊರೆಯುತ್ತಿರಲು; ಆಗ ಹೊರಟು ಬೀದಿಯಲ್ಲಿ ಬರುತ್ತಿರುವ ಆ ರಾಯನನ್ನು ನೋಡ ಬೇಕೆಂದು, ಸಂತೋಷದಿಂದ ಆ ಪಟ್ಣದಲ್ಲಿ ಇರುವ ಸ್ತ್ರೀಯರು ಅತ್ಯುನ್ನತಗಳಾದ ಉಪ್ಪರಿಗೆಗಳನ್ನು ಏರಿ, ಅಂದದಿಂದ ಒಪ್ಪಿ, ದೇವೇಂ

ದನಿಗೆ ಸಮಾನನಾಗಿರುವ ರಾಯನನ್ನು ಕಂಡು—ಈತನ ಪರಾಕ್ರಮವು ಲೋಕಾದ್ಭುತವಾದದ್ದು ಎಂದು ಸ್ತುತಿಸಿ, ಆತನಲ್ಲಿ ಪ್ರೇಮಾತಿಶಯದಿಂದ ಪುಷ್ಪವರ್ಷಗಳನ್ನು ಕರೆಯುತ್ತಿದ್ದರು.

ಆ ಬಳಿಕ ದುಶ್ಯಂತ ರಾಯನು ಬ್ರಾಹ್ಮಣರಿಂದ ಸ್ತುತಿಸಲ್ಪಟ್ಟವನಾಗಿ, ವನಕ್ಕೆ ಹೊರಟು, ಸುವರ್ಣ ಮಯವಾದ ರಥಾರೂಢನಾಗಿ ಹೋಗುತ್ತಾ, ಕೆಲವು ಪ್ರದೇಶಗಳನ್ನು ಕಳೆದು, ಸ್ವಲ್ಪ ದೂರದಲ್ಲಿ ಆಲ, ಬೇಲ, ಕೆಮ್ಮತ್ತಿ, ಕಗ್ಗಲಿ, ಅತ್ತಿ, ಅರಟಾಳ, ಅರಳಿ, ಅಮಟೆ, ಕಕ್ಕೆ, ಎಕ್ಕ, ಬೆಲ್ಲವತ್ತ, ಮಾವು, ಶೀಮಾವು, ಮೊದಲಾದ ಮರಗಳಿಂದ ಶೋಭಿತವಾಗಿ—ಹಳ್ಳ ತಿಟ್ಟುಗಳಿಂದಲೂ, ಕಲ್ಲುಗಳಿಂದಲೂ, ವಿಷಮ ಸ್ಥಳಗಳಿಂದಲೂ, ನಿರ್ಜಲ ಪ್ರದೇಶಗಳಿಂದಲೂ, ಹುಲಿ ಕರಡಿ ಕಾಡ್ಗೋಣ ಕಡವೆ ಮೊದಲಾದ ದುಷ್ಟ ಮೃಗಗಳಿಂದಲೂ ಕೂಡಿರುವ ಒಂದು ಮಹಾರಣ್ಯವನ್ನೋಡಿ, ಚತುರಂಗ ಬಲ ಸಮೇತನಾಗಿ ಆ ವನವನ್ನು ಹೊಕ್ಕು, ಅನೇಕವಾದ ದುಷ್ಟ ಮೃಗಗಳನ್ನು ಕೆಣಕಿ, ಬೇಟೆ ಆಡುತ್ತಾ, ಬಾಣಗಳಿಂದ ಶಾರ್ದೂಲಗಳನ್ನು ಮಥಿಸಿ, ತನ್ನ ಸಮೀಪಕ್ಕೆ ಬರುತ್ತಲಿರುವ ದುಷ್ಟ ಮೃಗಗಳನ್ನು ಕತ್ತಿಯಿಂದ ಕಡಿದು, ಕೆಡಹುತ್ತಾ; ಕೈಗೆ ಶಿಕ್ಕದೆ ಓಡಿ ಹೋಗುತ್ತಲಿರುವ ಮೃಗಗಳನ್ನು ಅಟ್ಟಿ ಕೊಂಡು ಹೋಗಿ, ಕೊಲ್ಲುತ್ತಾ; ಮೃಗಗಳ ಮರ್ಮಗಳನ್ನು ತಿಳಿದು, ಅವುಗಳನ್ನು ಭೇದಿಸುತ್ತಾ, ತೊಡಪು, ಕಬ್ಬಿಣದ ದೊಣ್ಣೆ, ಪಟ್ಟಾ ಕತ್ತಿ, ಒನಿಕೆ, ಭರ್ಜಿ, ಮೊದಲಾದ ನಾನಾ ಆಯುಧಗಳನ್ನು ತೆಗೆದು ಕೊಂಡು, ಮದ್ದಾನೆಗಳನ್ನು ಕೊಲ್ಲುತ್ತಾ, ಮಹಾರಣ್ಯದಲ್ಲಿ ಸಂಚರಿಸಲು; ಈ ಪ್ರಕಾರ ರಾಯನು ಕೆಣಕಿದ್ದರಿಂದ ಗುಂಪಿನಿಂದ ಚೆದರಿ ಹೋಗಿ, ಹಿಂಡಿನಲ್ಲಿ ನಿಲ್ಲದೆ, ಮಹಾ ಭಯದಿಂದ ಹಂಬಲಿಸುತ್ತ, ಹಸಿವು ಬಾಯಾರಿಕೆಗಳಿಂದ ಮೈ ಮರೆತು, ನೀರಿಲ್ಲದೆ ಇರುವ ತೊರೆಗಳನ್ನು ಕಂಡು, ಮೂರ್ಛೆಯಿಂದ ಬೀಳುತ್ತ, ಬೆನ್ನಟ್ಟಿ ಬರುವ ರಾಜ ಭಟರ ಕೈಗೆ ಶಿಕ್ಕಿ, ಅವರಿಂದ ಕೊಲ್ಲಲ್ಪಟ್ಟು, ಅಡವಿಯಲ್ಲಿರುವ ಬೇಡರೂ ಸೋಲಿಗರೂ ಇವರಿಂದ ಭಕ್ಷಣಾರ್ಥವಾಗಿ ಬೆಂಕಿಯಿಂದ ಸುಡಲ್ಪಟ್ಟು, ಇನ್ನು ನಾನಾ ಪ್ರಕಾರದಿಂದ ಕಾಡಿನ ಮೃಗಗಳೆಲ್ಲಾ ನಾಶವಾಗುತ್ತಾ ಬಂದವು. ಮತ್ತು ಆನೇ ಗುಂಪುಗಳು ಭಟರ ಶಸ್ತ್ರಗಳ ಪೆಟ್ಟಿಗೆ ಬಹಳ ಕಂಗೆಟ್ಟು, ಸುಂಡಿಲುಗಳನ್ನು ಸುತ್ತಿ ಕೊಂಡು, ಲದ್ದಿಯನ್ನು ಹಾಕುತ್ತಾ, ಉಚ್ಚೆ ಹುಯ್ದು ಕೊಳ್ಳುತ್ತಾ, ಘಾಯಗಳಿಂದ ನೆತ್ತರುಗಳನ್ನು ಸುರಿಸುತ್ತಾ, ತತ್ತರದಿಂದ ವನದಲ್ಲಿರುವ ಹುಲ್ಲೆ ಮೊದಲಾದ ಮೃಗಗಳನ್ನು ತುಳಿಯುತ್ತಾ, ಛೀಳಿಡುತ್ತಾ, ದಿಕ್ಕು ದಿಕ್ಕಿಗೆ ಓಡಿದವು. ಆ ಬಳಿಕ ದುಶ್ಯಂತ ರಾಯನ ಸೈನ್ಯವೆಂಬ

ಮೇಘದಿಂದ ಬಿಡಲ್ಪಟ್ಟ ನಾನಾ ಪ್ರಕಾರಗಳಾದ ಬಾಣ ವರ್ಷಗಳಿಂದ ಮುಚ್ಚಲ್ಪಟ್ಟ ಕಾಡ್ಗೋಣಗಳು ಸಕಲ ದಿಕ್ಕುಗಳಲ್ಲಿ ತಿರುಗುತ್ತಿರಲು; ಆ ವನವು ವರ್ಷಕಾಲದೋಪಾದಿಯಲ್ಲಿ ಒಪ್ಪುತ್ತಿತ್ತು.

ಆ ಬಳಿಕ ದುಶ್ಯಂತ ರಾಯನು ದುಷ್ಟ ಮೃಗಗಳನ್ನು ಬೇಟೆ ಆಡುತ್ತಾ, ಚತುರಂಗ ಬಲ ಸಮೇತನಾಗಿ ವನದ ದೆಸೆಯಿಂದ ಹೊರಟು, ಪಟ್ಣಕ್ಕೆ ಎರಡು ಗಾವುದ ದೂರದಲ್ಲಿ ಸಿದ್ಧ ಚಾರಣರಿಂದ ಸೇವಿತವಾಗಿರುವ ಒಂದು ವನವನ್ನು ಕಂಡು, ಅದರೊಳಗೆ ಹೊಕ್ಕು, ಅಲ್ಲಿರುವ ನಾನಾ ಮೃಗಗಳನ್ನು ಬೇಟೆ ಆಡುವದಕ್ಕೋಸ್ಕರ ಕುದುರೇ ರಾಹುತರನ್ನೂ, ಕೆಲವು ಪಾಯಿದಳವನ್ನೂ ಕರೆದುಕೊಂಡು, ಬಹಳ ದೂರ ಹೋಗಿ, ಶ್ರಮದಿಂದ ಕಂಗೆಟ್ಟು, ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ, ಆ ವನವನ್ನು ದಾಟಿ, ಒಬ್ಬನೇ ಹೋಗುತ್ತಾ, ಒಂದು ಚೌಳು ಭೂಮಿಯನ್ನು ಕಂಡು, ಅದನ್ನು ಅತಿಕ್ರಮಿಸಿ, ಆ ಬಳಿಕ ಉತ್ತಮರಾದ ತಾಪಸರಿಗೆ ವಾಸಸ್ಥಾನವಾಗಿಯೂ—ಮನಸ್ಸಿಗೆ ಸಂತೋಷಕರವಾಗಿಯೂ—ಸಕಲ ಜನ ಮನೋಹರವಾಗಿಯೂ—ಮಂದ ಮಾರುತ ಸಮೇತವಾಗಿಯೂ—ಪುಷ್ಪಿಸಿ, ಫಲಿಸಿ, ಜಗ್ಗುತ್ತಲಿರುವ ವೃಕ್ಷಗಳಿಂದ ಕೂಡಿರುವಂಥಾದ್ದಾಗಿಯೂ—ಮೃದುವಾದ ಹಸುರಾದ ಹುಲ್ಲುಗಳಿಂದ ರಮಣೀಯವಾಗಿರುವ ಪ್ರದೇಶಗಳುಳ್ಳಂಥಾದ್ದಾಗಿಯೂ—ಕಿವಿಗಳಿಗೆ ಇಂಪಾಗುವ ಹಾಗೆ ಧ್ವನಿ ಮಾಡುವ ಗಿಣಿ, ಗೊರವನ ಹಕ್ಕಿ, ಪಾರಿವಾಳ, ನವಿಲು, ಮೊದಲಾದ ಹಕ್ಕಿಗಳಿಂದ ಕೂಡಿಕೊಂಡಿರುವಂಥಾದ್ದಾಗಿಯೂ—ತಂಪಾದ ನೆರಳುಳ್ಳ ಮಹಾ ವೃಕ್ಷಗಳಿಂದ ತುಂಬಿರುವಂಥಾದ್ದಾಗಿಯೂ—ತುಂಬಿಗಳ ಝೇಂಕಾರದಿಂದ ಮನೋಹರವಾಗಿಯೂ—ಇರುವ ಒಂದು ವನವನ್ನು ಕಂಡು, ಸಂತೋಷ ಪಡುತ್ತಾ, ಅದರೊಳಗೆ ಹೊಕ್ಕು, ನೋಡಲಾಗಿ; ಅಲ್ಲಿರುವ ಸಮಸ್ತ ವೃಕ್ಷಗಳು ಮಂದ ಮಾರುತದಿಂದ ಆತನ ಮೇಲೆ ಪುಷ್ಪಗಳನ್ನು ಉದುರಿಸುತ್ತಾ, ಹೂವು, ಹೀಚು, ಕಾಯಿ, ಹಣ್ಣು, ಇವುಗಳ ಭಾರದಿಂದ ಬೊಗ್ಗಿ, ಜಗ್ಗುತ್ತಾ, ಕೆಲವು ಕೊನೆಗಳಿಂದ ಆಕಾಶವನ್ನು ಮುಟ್ಟುತ್ತಾ, ತಮ್ಮ ಮೇಲೆ ಧ್ವನಿ ಗೈಯುತ್ತಾ, ವಾಸಾ ಮಾಡುತ್ತಲಿರುವ ಶುಕ ಶಾರಿಕಾ ನಿಕರಗಳ ಸಲ್ಲಾಪಗಳೆಂಬ ಮೃದು ಭಾಷಿತಗಳಿಂದ ಬಂದ ಪಥಿಕರ ಯೋಗ ಕ್ಷೇಮವನ್ನು ವಿಚಾರಿಸುತ್ತವೆಯೋ? ಎಂಬ ಹಾಗೆ ಇದ್ದವು. ಮತ್ತು ಬಿಳೀ ಹೂವುಗಳಿಂದ ತುಂಬಿರುವ ಬಳ್ಳಿಗಳು ಆ ಮರಗಳ ಸುತ್ತಲು ಸುತ್ತಿ ಕೊಂಡು ಹಬ್ಬಿ ಇರುವದರಿಂದ, ಬಿಳೀ ವಸ್ತ್ರಗಳನ್ನು ಉಟ್ಟು ಕೊಂಡಿರುವ ಹಾಗೆ ಕಾಣಿಸುತ್ತಾ ಇದ್ದವು.

ಇಂಥ ವನದಲ್ಲಿ ಒಂದು ನದೀ ತೀರದಲ್ಲಿ ಅನೇಕವಾದ ಮೃಗ ಗಣಗಳಿಂದ ಕೂಡಿ ಕೊಂಡು, ಬಹು ವಿಧ ವಿಹಗ ಕೋಲಾಹಲ ಭರಿತವಾಗಿ ಪ್ರಜ್ವಲಿಸುತ್ತಲಿರುವ ಯಜ್ಞೇಶ್ವರನುಳ್ಳದ್ದಾಗಿ—ವಾಲಖಿಲ್ಯರೇ ಮೊದಲಾದ ಮಹಾ ಋಷಿಗಳ ವಾಸಕ್ಕೆ ಯೋಗ್ಯವಾಗಿ—ಅಗ್ನಿಹೋತ್ರ ಗೃಹಗಳಿಂದಲೂ, ಪುಷ್ಪ ಶಯ್ಯೆಗಳಿಂದಲೂ, ಮನೋಹರವಾಗಿ ಇರುವ ಒಂದು ದಿವ್ಯಾಶ್ರಮವನ್ನು ಕಂಡು, ಆ ಆಶ್ರಮ ಸಮೀಪದಲ್ಲಿ ಹಂಸ ಚಕ್ರವಾಕ ಮೊದಲಾದ ನಾನಾ ವಿಧ ಜಲಪಕ್ಷಿಗಳೊಡನೆ ಕೂಡಿ, ಸಕಲ ಮೃಗಗಳ ಸಂಚಾರಕ್ಕೆ ಯೋಗ್ಯಗಳಾದ ತಡಿಗಳುಳ್ಳಂಥಾದ್ದಾಗಿ—ದೇವಲೋಕಕ್ಕೆ ಸಮಾನವಾದ ಪುಣ್ಯಾಶ್ರಮಕ್ಕೆ ಭೂಷಣವಾಗಿ—ಸಕಲ ಪ್ರಾಣಿ ಸಮೂಹಕ್ಕೆ ತಾಯೋಪಾದಿಯಲ್ಲಿ ಇರುವಂಥಾದ್ದಾಗಿ—ಚಕ್ರವಾಕ ಪಕ್ಷಿಗಳು ಸಂಚರಿಸುತ್ತಲಿರುವ ಪುಳಿನ ರಾಶಿಗಳಿಂದ ಶೋಭಿತವಾಗಿ—ನೊರೆಯಿಂದ ಕೂಡಿದಂಥಾದ್ದಾಗಿ—ಸ್ನಾನಗೈದು, ವೇದವನ್ನು ಪಠಿಸುತ್ತಲಿರುವ ಧೃತ ವ್ರತರಾದ ಮುನಿ ಕುಮಾರರ ಗಂಭೀರ ಘೋಷದಿಂದ ರಂಜಿತವಾಗಿ—ಪ್ರವಹಿಸುತ್ತಲಿರುವ ಮಾಲಿನಿ ಎಂಬ ಪುಣ್ಯ ನದಿಯನ್ನು ಕಂಡು, ಅದರ ತೀರದಲ್ಲಿ ಸಕಲ ಮುನಿ ಜನ ಸೇವ್ಯವಾಗಿರುವ ಕಾಶ್ಯಪಾಶ್ರಮದ ಸಮೀಪದಲ್ಲಿರುವ ಪ್ರದೇಶಗಳಲ್ಲೆಲ್ಲಾ ಸಂಚರಿಸಿ, ಆ ರಾಯನು ಆ ಆಶ್ರಮವನ್ನು ಪ್ರವೇಶಿಸಿ, ಆ ಮಹರ್ಷಿಯನ್ನು ಸೇವಿಸುವದಕ್ಕೋಸ್ಕರ ಇಚ್ಛೈಸಿ, ರಥ ಗಜ ತುರಗ ಪದಾತಿಗಳೆಲ್ಲಾ ಸಂಗಡ ಬಂದು ನಿಲ್ಲಲು; ಆ ಸೈನ್ಯವನ್ನೆಲ್ಲಾ ಆ ಆಶ್ರಮದ ಹೊರಗಿನ ಬಯಲಲ್ಲಿ ನಿಲ್ಲಿಸಿ ಬಿಟ್ಟು, ಛತ್ರ ಚಾಮರಾದಿ ರಾಜ ಚಿಹ್ನೆಗಳನ್ನೆಲ್ಲಾ ಬಿಟ್ಟು ಬಿಟ್ಟು, ಮಂತ್ರಿಗಳೊಡನೆ ಕೂಡಿ ಕೊಂಡು, ಸೇನಾಪತಿಯನ್ನು ಕರೆದು—ಎಲೈ, ಸೇನಾಧಿಪನೇ, ನಾವು ತಪೋಧನರಾದ ಮುನೀಶ್ವರರ ಆಶ್ರಮಕ್ಕೆ ಹೋಗಿ, ಅವರ ದರ್ಶನವನ್ನು ಮಾಡಿ ಕೊಂಡು, ತಿರಿಗಿ ಬರುವ ಪರ್ಯಂತರಕ್ಕೂ ಸಕಲ ಸೇನೆಯನ್ನು ಇಲ್ಲೇ ಇರಿಸಿ ಕೊಂಡು ಇರು ಎಂದು ಹೇಳಿ, ಬ್ರಹ್ಮ ಲೋಕಕ್ಕೆ ಸಮಾನವಾದ ಆ ಆಶ್ರಮವನ್ನು ಪ್ರವೇಶಿಸಿ, ಅದರ ಮಹತ್ವವನ್ನು ನೋಡಿ, ಬಹಳ ಸಂತೋಷ ಪಡುತ್ತಾ ಇದ್ದನು. ಹ್ಯಾಗಂದರೆ—

ಆ ಆಶ್ರಮದಲ್ಲಿ ವೇದ ವೇದಾಂಗ ಪಾರಂಗತರಾಗಿ, ನ್ಯಾಯ ತತ್ವಾರ್ಥ ವಿಜ್ಞಾನ ಸಂಪನ್ನರಾದ ಕೆಲವು ಬ್ರಾಹ್ಮಣ ಶ್ರೇಷ್ಠರು, ಪದ ಕ್ರಮ ಸಮೇತವಾಗಿ, ವೇದ ಪಠಿಸುವ ಘೋಷವು ಆ ರಾಯನ ಕಿವಿಗಳಿಗೆ ಇಂಪಾಗಿತ್ತು. ಕೆಲವು ಕಡೆಯಲ್ಲಿ ಯಜುರ್ವೇದ ಪಠನವೂ; ಕೆಲವು ಕಡೆಯಲ್ಲಿ ಸಾಮ ವೇದ ಗಾನವೂ;

ಇನ್ನು ಕೆಲವು ಸ್ಥಳದಲ್ಲಿ ಅಥರ್ವಣ ವೇದ ಪಾಠವೂ; ಮತ್ತು ಕೆಲವು ಬಳಿಯಲ್ಲಿ ಶಬ್ದ ಶಾಸ್ತ್ರೋಪನ್ಯಾಸಾ ಮಾಡುವ ರೀತಿಯೂ; ಕೊಂಚ ಕಡೆಯಲ್ಲಿ ಯಾಗ ಪ್ರಯೋಗವನ್ನು ತಿಳುಹಿಸುವಂಥ ಅಂದವೂ; ಇವೇ ಮೊದಲಾದ ನೇತ್ರಾನಂದಕರಗಳಾದ ಪವಿತ್ರ ಸ್ಥಳಗಳನ್ನು ನೋಡುತ್ತಾ, ವಿಶದವಾಗಿ, ವಿಜನವಾಗಿ, ಪವಿತ್ರವಾಗಿರುವ ಕಾಶ್ಯಪನ ಪರ್ಣಶಾಲೆಯನ್ನು ಹೊಕ್ಕು, ಮಂತ್ರಿ ಪುರೋಹಿತರನ್ನು ಬಾಗಿಲಲ್ಲಿಯೇ ನಿಲ್ಲಿಸಿ ಬಿಟ್ಟು, ಒಳಗೆ ಹೋಗಿ, ನೋಡಿ, ಅಲ್ಲಿ ಒಬ್ಬರನ್ನೂ ಕಾಣದೆ—ಈ ಆಶ್ರಮದಲ್ಲಿರುವವರು ಯಾರು ಎಂದು ವನದಲ್ಲಿ ಪ್ರತಿಧ್ವನಿ ಹುಟ್ಟುವ ಹಾಗೆ ಘಟ್ಟಿಯಾಗಿ ಕೂಗಿ ಎಚ್ಚರಿಸಲು; ಆ ಧ್ವನಿಯನ್ನು ಕೇಳಿ, ಕಾರ್ಮುಗಿಲ ದೆಶೆಯಿಂದ ಹೊರಟು ಬರುವ ಮಿಂಚು ಬಳ್ಳಿಯೋಪಾದಿಯಲ್ಲಿ ಹೊಳೆಯುತ್ತಲಿರುವಂಥ—ಪ್ರತ್ಯಕ್ಷವಾಗಿ ಬಂದ ಮಹಾ ಲಕ್ಷ್ಮಿಯೋಪಾದಿಯಲ್ಲಿ ರೂಪು ಲಾವಣ್ಯ ಸಂಪನ್ನೆಯಾಗಿರುವಂಥ ಒಬ್ಬ ಕನ್ನಿಕೆಯು ಆ ಆಶ್ರಮದ ಒಳಗಿನಿಂದ ಹೊರಟು ಬಂದು, ಅಭ್ಯಾಗತನಾದ ಆ ಮಹಾ ರಾಯನನ್ನು ಕಂಡು, ಆಶ್ಚರ್ಯ ಪಡುತ್ತಾ, ತಾವರೇ ಎಸಳುಗಳೋಪಾದಿಯಲ್ಲಿ ನೀಟವಾದ ನೇತ್ರ ಯುಗ್ಮವನ್ನೂ, ವಿಶಾಲವಾದ ವಕ್ಷಸ್ಥಳವನ್ನೂ, ಸಿಂಹ ಸ್ಕಂಧ ಸಮಾನವಾದ ಭುಜ ಮೂಲವನ್ನೂ, ಆಜಾನು ದೀರ್ಘಗಳಾದ ಬಾಹುಗಳನ್ನೂ, ಇವೇ ಮೊದಲಾದ ರಾಜ ಲಕ್ಷಣಗಳನ್ನು ನೋಡಿ, ಮೃದು ಮಧುರ ಭಾಷೆಗಳಿಂದ ಕುಶಲ ಪ್ರಶ್ನೆಯನ್ನು ಮಾಡಿ, ಸಮುಚಿತವಾದ ಪೀಠದಲ್ಲಿ ಕುಳ್ಳಿರಿಸಿ, ಅರ್ಘ್ಯ ಪಾದ್ಯಾಚಮನಗಳನ್ನು ಕೊಟ್ಟು, ನಾಚಿಕೆಯಿಂದ ಕೊಂಚವಾಗಿ ಮುಖವನ್ನು ಬಾಗಿಸಿ, ಸನ್ಮಾನದಿಂದ ತುಷ್ಟನಾದ ಆ ರಾಯನ ಎದುರಿಗೆ ನಿಂತು ಕೊಂಡು, ತನ್ನ ಮುಖದ ಮುಗುಳು ನಗೆಯ ಸೊಬಗಿನಿಂದ ದಿಕ್ಕುಗಳನ್ನು ಬೆಳಗಿಸುತ್ತಾ,—ಎಲೈ, ಮಹಾನುಭಾವನೇ, ನೀನು ಯಾರು? ಯಾವ ನಿಮಿತ್ತದಿಂದ ಈ ಆಶ್ರಮಕ್ಕೆ ಬಂದೆ? ನಾವು ಮಾಡ ತಕ್ಕಂಥ ಕಾರ್ಯವೇನು? ಇದಷ್ಟನ್ನು ತಿಳುಹಿಸಬೇಕೆನಲು; ಆ ರಾಜನು ಸಕಲ ಶುಭ ಲಕ್ಷಣಗಳಿಂದ ಕೂಡಿ, ಸದಾಚಾರ ಸಂಪನ್ನೆಯಾಗಿ, ಮಹಾ ಲಕ್ಷ್ಮಿಯೋಪಾದಿಯಲ್ಲಿ ಒಪ್ಪುತ್ತಾ, ಮಂಜು ಭಾಷಿಣಿಯಾದ ಆ ಕನ್ನಿಕೆಯನ್ನು ಕುರಿತು ಇಂತೆಂದನು—ಎಲೈ, ರಾಜೀವ ಲೋಚನೆಯೇ, ನಾನು ಮಹಾತ್ಮನಾದ ಇಲಲನ ಮಗನಾದ ದುಶ್ಯಂತ ರಾಯನು, ಎನಲು; ಆ ಶಕುಂತಳೆಯು—ಸಕಲ ರಾಜ ಪೂಜಿತನಾದ ನಿನ್ನಂಥ ಅರಸಿಗೆ ನಾವು ಉಪಚರಿಸ ತಕ್ಕದ್ದೇನು ಇಧೆ? ನಾವು ಕೊಡುವ ಕಂದ ಮೂಲ

ಫಲಗಳನ್ನು ಪರಿಗ್ರಹಿಸಿ, ನಮ್ಮಿಂದ ಆಗ ತಕ್ಕ ಕಾರ್ಯವನ್ನು ನಿರೂಪಿಸ ಬೇಕೆನಲು; ದುಶ್ಯಂತನು,–ಎಲೈ, ರಾಜೀವ ಲೋಚನೆಯೇ, ನಾನು ಮಹಾನುಭಾವರಾದ ಕಣ್ವ ಮುನೀಶ್ವರರನ್ನು ಸೇವಿಸುವದಕ್ಕೆ ಇಲ್ಲಿಗೆ ಬಂದೆನು. ಆ ಮಹಾತ್ಮರೆಲ್ಲಿದ್ದಾರೆ? ಎನಲು; ಆ ಕನ್ನಿಕೆಯು, ಕಣ್ವನು ಕಂದ ಮೂಲ ಫಲಗಳನ್ನು ತರುವದಕ್ಕೆ ಆಶ್ರಮದಿಂದ ಹೊರಟು, ವನಕ್ಕೆ ಹೋಗಿದ್ದಾನೆ. ಒಂದು ಮುಹೂರ್ತ ಮಾತ್ರ ಇಲ್ಲಿ ಇದ್ದರೆ, ಅವರ ದರ್ಶನ ಮಾಡಿ ಕೊಂಡು ಹೋಗ ಬಹುದೆನಲು;–

ಆ ದುಶ್ಯಂತನು ಆ ಮಹಾ ಮುನೀಶ್ವರನು ಆಶ್ರಮದಲ್ಲಿ ಇಲ್ಲದೆ ಇರುವದರಿಂದ ಶಕುಂತಳೆ ಉಪಚರಿಸುವ ಮಾತುಗಳಿಗೆ ಸಂತೋಷ ಪಟ್ಟು, ರೂಪು, ಯೌವನ ಸಂಪನ್ನೆಯಾದ, ವಿನಯಾನ್ವಿತೆಯಾದ ಅವಳನ್ನು ನೋಡಿ,–ನೀನು ಯಾರು? ಯಾರ ಮಗಳು? ನೀನು ಈ ತಪೋ ವನಕ್ಕೆ ಬಂದು ಇರುವದಕ್ಕೆ ಕಾರಣವೇನು? ನಿನ್ನನ್ನು ನೋಡಿದ ಮಾತ್ರದಿಂದಲೇ ನನ್ನ ಮನಸ್ಸು ಮನ್ಮಥ ಬಾಣದಿಂದ ಪೀಡಿತವಾಗಿದೆ. ನಾನು ಒಂದು ರಹಸ್ಯವನ್ನು ಕೇಳುತ್ತೇನೆ; ಮರೆ ಮಾಜದೆ ಹೇಳ ಬೇಕು. ನಾನು ರಾಜರ್ಷಿಯಾದ ಪುರು ವಂಶದಲ್ಲಿ ಹುಟ್ಟಿದವನು. ನನ್ನ ಮನಸ್ಸು ರಾಜ ಕನ್ನಿಕೆಯಲ್ಲಿ ತಗಲುವದೇ ಹೊರತಾಗಿ, ಮತ್ತೊಂದು ಕನ್ನಿಕೆಯಲ್ಲಿ ತಗಲುವದು ಇಲ್ಲ. ಆದರೆ ನಿನ್ನಲ್ಲಿ ತಗಲಿ ಇರುವದರಿಂದ ನೀನು ನಿಶ್ಚಯವಾಗಿ ಕ್ಷತ್ರಿಯ ಕನ್ನಿಕೆಯಾಗಿ ತೋರುತ್ತೀ. ಇದಲ್ಲದೆ ನಿನ್ನನ್ನು ಮದುವೆ ಆಗುವದಕ್ಕೆ ನನ್ನ ಮನಸ್ಸು ಬಯಸುತ್ತದೆ. ನೀನು ನನ್ನನ್ನು ಮದುವೆ ಆಗ ಬೇಕು. ಹಾಗೆ ಮದುವೆಯಾದರೆ, ಚತುಸ್ಸಮುದ್ರ ಸುತ್ತುವ ಭೂಮಂಡಲವಷ್ಟೂ ನಿನ್ನ ವಶವಾಗುತ್ತದೆ. ನಿನ್ನ ಮನಸ್ಸಿನಲ್ಲಿ ಮತ್ತೊಂದನ್ನು ಎಣಿಸದೆ, ಅವಶ್ಯವಾಗಿ ನನ್ನನ್ನು ಮದಿವೆಯಾಗ ಬೇಕೆನಲು; ಆ ಕನ್ಯಾ ರತ್ನವು ಮಧುರ ಭಾಷೆಗಳಿಂದ ಆತನನ್ನು ಕುರಿತು ಇಂತೆಂದಿತು–ಕೇಳೈ, ರಾಯನೇ, ನೀನು ಸಕಲ ಧರ್ಮಗಳನ್ನು ತಿಳಿದಿರುವಂಥವನು. ನಾನು ಕಣ್ವ ಮುನೀಶ್ವರನ ಮಗಳಾದ್ದರಿಂದ, ನನ್ನ ತಂದೆ ಇರುವಾಗಲೇ, ನನ್ನ ಸ್ವತಂತ್ರದಿಂದ ಹೀಗೆ ಮಾಡ ಬಾರದಲ್ಲ! ನನ್ನ ತಂದೆಯನ್ನು ಕೇಳಿ, ಅವರ ಅಪ್ಪಣೆ ಆದ ಮೇಲೆ ಮದುವೆಯಾಗುವದೇ ಹೊರತಾಗಿ, ಹೀಗೆ ಕಾಮಾತುರತ್ವದಿಂದ ಪದರಾಡುವದು ಉಚಿತವಲ್ಲ, ಎನಲು; ದುಶ್ಯಂತನು–ಎಲೈ, ಶಕುಂತಳೆಯೇ, ನನ್ನ ಮನಸ್ಸಿನಲ್ಲಿ ಒಂದು ಸಂಶಯ ಉಂಟು; ಏನಂದರೆ, ಲೋಕ ಪೂಜಿತನಾಗಿ ಮಹಾನುಭಾವನಾದ ಕಣ್ವ ಮಹಾ ಮುನೀಶ್ವರನು ಜಿತೇಂದ್ರಿಯ

ನಾದ್ದರಿಂದ, ಆತನ ಮನೋ ಧರ್ಮವು ಚಲಿಸಿದರೂ, ದೃಢ ವ್ರತನಾದ ಆತನು ಚಲಿಸನು. ಆತನಿಗೆ ನೀನು ಯಾವ ರೀತಿಯಿಂದ ಮಗಳಾದೆ? ನನಗೆ ತಿಳುಹಿಸ ಬೇಕೆನಲು; ಶಕುಂತಳೆ ಇಂತೆಂದಳು—ಎಲೈ, ರಾಯನೇ, ಕೇಳು. ಲೋಕ ದಲ್ಲಿ ಯಾರಾದರೂ ತಮ್ಮ ರೀತಿ ಒಂದು ಪ್ರಕಾರ, ಹೇಳಿ ಕೊಳ್ಳುವದು ಬೇರೊಂದು ಪ್ರಕಾರವಾದರೆ, ಆತ್ಮವಧಾ ದೋಷ ಸಂಘಟಿಸುತ್ತದೆ. ಆದ್ದ ರಿಂದ ನನ್ನ ಸ್ಥಿತಿಯನ್ನು ಯಥಾರ್ಥವಾಗಿ ಹೇಳುತ್ತೇನೆ.

ಒಂದು ದಿವಸ ಒಬ್ಬ ಮುನೀಶ್ವರನು ಬಂದು, ಕಣ್ವನಿಂದ ಪೂಜಿತನಾಗಿ, ಆತನನ್ನು ಕುರಿತು ನೀನು ಕೇಳಿದ ರೀತಿಯಲ್ಲಿ ಪ್ರಶ್ನೆ ಮಾಡಲು; ನನ್ನ ತಂದೆ ಯು ನಾನು ಕೇಳುವ ಹಾಗೆ ಆತನನ್ನು ಕುರಿತು ಇಂತೆಂದನು—ಎಲೈ, ಭಾರ್ಗ ವ ಮುನಿಯೇ, ನನಗೆ ಪರಮ ಮಿತ್ರನಾದ ವಿಶ್ವಾಮಿತ್ರನು ಘೋರವಾದ ತಪ ಸ್ಸನ್ನು ಮಾಡುತ್ತಿರಲು; ಆ ತಪಸ್ಸಿಗೆ ಇಂದ್ರನು ಭಯ ಪಟ್ಟು, ಆತನ ತಪೋ ಬಲವನ್ನು ಕೆಡಿಸ ಬೇಕೆಂದು, ಮೇನಕಿ ಎಂಬ ಅಪ್ಸರ ಸ್ತ್ರೀಯನ್ನು ಕರೆದು— ನೀನು ಸಕಲ ರೂಪು ಸಾಂದರ್ಯ ಯುಕ್ತಳಾದ್ದರಿಂದ, ನನ್ನ ಅಪ್ಪಣೆಯ ಮೇರೆ ಗೆ ವಿಶ್ವಾಮಿತ್ರನ ತಪಸ್ಸನ್ನೂ ಬ್ರಹ್ಮಚರ್ಯ ವ್ರತವನ್ನೂ ಕೆಡಿಸಿ, ನನಗೆ ಹಿತವ ನ್ನುಂಟು ಮಾಡ ಬೇಕೆನಲು; ಆ ಮೇನಕಿಯು ಇಂದ್ರನನ್ನು ನೋಡಿ—ಎಲೈ, ಇಂದ್ರನೇ, ಆ ವಿಶ್ವಾಮಿತ್ರನ ಕೋಪಕ್ಕೆ ನೀವೇ ಭಯ ಪಡುವಾಗ, ಅಂಥಾ ಜಿತೇಂದ್ರಿಯನ ಎದುರಿಗೆ ನಿಲ್ಲುವದಕ್ಕೆ ನಾನೆಷ್ಟು ಮಾತ್ರದವಳು? ಆತನು ಸಾ ಮಾನ್ಯ ಪುರುಷನಲ್ಲ. ಆತನು ಬ್ರಹ್ಮ ಸೃಷ್ಟಿಗೆ ಬದಲಾಗಿ ತನ್ನ ಮನಸ್ಸಿಗೆ ಬಂ ದದೆಲ್ಲಾ ಸೃಷ್ಟಿಸ ಬಲ್ಲನು. ಇಂಥ ಅದ್ಭುತ ಮಹಿಮೆಯುಳ್ಳ ಆತನ ಎದುರಿಗೆ ನಿಂತು, ಹ್ಯಾಗೆ ಜೀವಿಸಲಿ? ಆದರೂ ನಿನ್ನ ಮಾತು ಮೀರ ಕೂಡದ್ದಾದ ಕಾರ ಣ, ನಾನು ಹೋಗಿ, ಸೌಖ್ಯದಿಂದ ಹಿಂತಿರಿಗಿ ಬರುವ ಹಾಗೆ ನನ್ನ ಸಹಾಯ ಕ್ಕೆ ಮನ್ಮಥನನ್ನೂ ಮಂದ ಮಾರುತನನ್ನೂ ಕಳುಹಿಸ ಬೇಕೆನಲು; ಆ ಇಂ ದ್ರನು ಹಾಗೆ ಅವರನ್ನು ಸಂಗಡ ಕಳುಹಿಸಲು; ಆ ಮೇನಕಿಯು ಅವರಿಬ್ಬರ ಸಹಾಯದಿಂದ ವಿಶ್ವಾಮಿತ್ರನ ಆಶ್ರಮದ ಬಳಿಗೆ ಬಂದು, ತಪಸ್ಸಿನಿಂದ ಕೃಶ ನಾಗಿರುವ ಆತನನ್ನು ಕಂಡು, ನಮಸ್ಕರಿಸಿ, ನಾನಾ ವಿಧ ಶೃಂಗಾರ ಚೇಷ್ಟೆಗ ಳನ್ನು ತೋರಿಸುತ್ತಾ, ಉಪಚರಿಸುತ್ತಿರಲು; ಆ ವಿಶ್ವಾಮಿತ್ರನು ಇವಳ ರೂಪು ಲಾವಣ್ಯಗಳನ್ನು ನೋಡಿ, ಮೋಹಿತನಾದನು. ಹೀಗೆ ಮೇನಕಿಯು ಗರ್ಭ ಧರಿ ಸಿ, ಈ ಶಕುಂತಳೆಯನ್ನು ಹೆತ್ತು, ತನ್ನ ಒಡೆಯನ ಕೆಲಸ ಕೈ ಸೇರಿತೆಂದು ತಿಳಿ ದು, ಆ ಶಿಶುವನ್ನು ಹಿಮವತ್ಪರ್ವತದ ಸಮೀಪದಲ್ಲಿ ಹರಿಯುವ ಮಾಲಿನೀ ನದೀ

ತೀರದಲ್ಲಿರಿಸಿ, ಶುಭವಾಗಲಿ ಎಂದು ಹೇಳಿ, ಅಮರಾವತಿ ಪಟ್ಣಕ್ಕೆ ಹೊರಟು ಹೋದಳು. ಆಗ ನಾನು ಒಂದಾನೊಂದು ದಿವಸ ಸ್ನಾನಾರ್ಥವಾಗಿ ಆ ಮಾಲಿನೀ ನದಿಗೆ ಹೋಗಲು; ಅಲ್ಲಿ ಅಳುತ್ತಿರುವ ಶಿಶುವನ್ನು ನೋಡಿ, ನನ್ನ ದಿವ್ಯ ದೃಷ್ಟಿಯಿಂದ ಅದರ ವೃತ್ತಾಂತವನ್ನು ತಿಳಿದು, ನನ್ನಾಶ್ರಮಕ್ಕೆ ಎತ್ತಿ ಕೊಂಡು ಬಂದು, ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವಿನಂತೆಯೇ ಸಾಕುತ್ತಾ, ಮೊದಲು ಕಾಡಿನಲ್ಲಿ ಶಕುಂತಗಳು ಆ ಶಿಶುವನ್ನು ಪೋಷಿಸಿದ ಕಾರಣ, ಅವಳಿಗೆ ಶಕುಂತಳೆ ಎಂದು ಹೆಸರಿಟ್ಟೆನು ಎಂದು ಹೇಳಲೂ; ಆ ಋಷಿಯು ಕಣ್ವನ ಅಪ್ಪಣೆಯನ್ನು ಹೊಂದಿ, ತನ್ನಾಶ್ರಮಕ್ಕೆ ಹೊರಟು ಹೋದನು.

ಎಲೈ, ರಾಯನೇ, ಇದೀಗ ನನ್ನ ಜನ್ಮದ ರೀತಿಯು ಎಂದು ಹೇಳಿದ ಶಕುಂತಳೆಯ ಮಾತನ್ನು ಕೇಳಿ, ದುಶ್ಯಂತ ಮಹಾ ರಾಯನು ಬಹಳ ಸಂತುಷ್ಟನಾಗಿ—ಎಲೈ, ಕನ್ನಿಕೆಯೇ, ನೀನು ಕ್ಷತ್ರಿಯನ ಮಗಳಾದದ್ದು ನಿಶ್ಚಯವಾಯಿತು. ಇನ್ನು ನನಗೆ ಹೆಂಡತಿಯಾಗಿ, ನನ್ನ ಮನೋರಥವನ್ನು ಸಲ್ಲಿಸ ಬೇಕೆನಲು; ಶಕುಂತಳೆಯು—ಎಲೈ, ರಾಯನೇ, ನನ್ನ ತಂದೆ ವನದಿಂದ ಬರುವ ವರಿಗೂ ನೀನಿಲ್ಲಿದ್ದರೆ, ಆತನೇ ನನ್ನನ್ನು ನಿನಗೆ ಮದುವೆ ಮಾಡಿ ಕೊಡುತ್ತಾನೆ. ಕನ್ನಿಕೆಗೆ ತಂದೆಯೇ ಗುರುವಾದ್ದರಿಂದ, ಆತನು ಅವಳನ್ನು ಯಾರಿಗೆ ಕೊಡುತ್ತಾನೋ ಅವನೇ ಅವಳಿಗೆ ಗಂಡನು. ಸ್ತ್ರೀಯರಿಗೆ ಬಾಲ್ಯದಲ್ಲಿ ತಂದೆಯೂ, ಯೌವನದಲ್ಲಿ ಗಂಡನೂ, ಮುಪ್ಪಿನಲ್ಲಿ ಮಗನೂ ರಕ್ಷಕರಾದ್ದರಿಂದ, ಅವರಿಗೆ ಸ್ವಾತಂತ್ರ್ಯವಿಲ್ಲ. ಹೀಗಿರುವಲ್ಲಿ ತಂದೆಯ ಅನುಮತಿ ಇಲ್ಲದೆ ಧರ್ಮಜ್ಞನಾದ ನಿನ್ನನ್ನು ಧರ್ಮವಿರುದ್ಧವಾಗಿ ಹ್ಯಾಗೆ ಮದುವೆಯಾಗಲಿ? ಎಂದು ಹೇಳಿದ ಶಕುಂತಳೆಯನ್ನು ಕುರಿತು ರಾಯನು—ಎಲೈ, ಶಕುಂತಳೆಯೇ, ಈ ಕಾರ್ಯಕ್ಕೆ ನಿನ್ನ ತಂದೆ ಕೋಪಿಸನು. ತನ್ನ ಶರೀರಕ್ಕೆ ತಾನೇ ಬಾಧ್ಯಳಾದ್ದರಿಂದ, ತನ್ನನ್ನು ತಾನೇ ದಾನಾ ಮಾಡುವದು ಧರ್ಮ ವಿಹಿತವು. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚಗಳೆಂದು ವಿವಾಹಗಳು ಎಂಟು ತೆರನಾಗಿರುವವು. ಈ ವಿವಾಹಗಳಲ್ಲಿ ಮೊದಲು ಹೇಳಿದ ನಾಲ್ಕು ಬ್ರಾಹ್ಮಣರಿಗೆ ಪ್ರಶಸ್ತವಾಗಿವೆ. ಕ್ಷತ್ರಿಯರಿಗೆ ಮೊದಲು ಹೇಳಿದ ಆರು, ವೈಶ್ಯ ಶೂದ್ರರಿಗೆ ಆಸುರವು ಯುಕ್ತವು. ಬ್ರಾಹ್ಮ ದೈವ ಆರ್ಷ ಪ್ರಾಜಾಪತ್ಯಗಳೆಂಬ ಬ್ರಾಹ್ಮರಿಗೆ ಉಚಿತವಾದ ನಾಲ್ಕು ವಿವಾಹಗಳೊಳಗೆ ಯಾವದಾದರೂ ಒಂದು, ಗಾಂಧರ್ವ ರಾಕ್ಷಸ ವಿವಾಹಗಳೆರಡು, ಅಂತೂ ಈ ಆರು ವಿವಾಹಗಳು ಕ್ಷತ್ರಿಯರಿಗೆ ಯೋಗ್ಯವಾಗಿರುವವು. ಒಂದು

ವೇಳೆ ಕ್ಷತ್ರಿಯನು ರಾಕ್ಷಸ ವಿವಾಹವನ್ನು ಸಹಾ ಮಾಡಿ ಕೊಳ್ಳ ಬಹುದೆಂದು,
ಸ್ವಾಯಂಭೂ ಎಂಬ ಮನುವು ಹೇಳಿದ್ದಾನೆ. ಆದ್ದರಿಂದ ನಿನ್ನಲ್ಲೇ ತಗ
ಲಿರುವ ನನ್ನನ್ನು ಗಾಂಧರ್ವ ವಿವಾಹದಿಂದ ಮದುವೆಯಾಗು, ಎನಲು; ಆ
ಶಕುಂತಳೆಯು—ಎಲೈ, ರಾಯನೇ, ತಂದೆಯು ಅಪ್ಪಣೆ ಇಲ್ಲದೆ ಮದುವೆ
ಯಾಗುವದು ಧರ್ಮವಿರುದ್ಧವಲ್ಲವೆಂದು ನಿನಗೆ ತೋರಿದರೆ, ನಾನೊಂದು ಸಂಕೇ
ತವನ್ನು ಮಾಡುತ್ತೇನೆ; ಏನಂದರೆ, ನಿನ್ನ ರಾಜ್ಯಾಭಿಷೇಕವನ್ನು ನನ್ನ ಹೊಟ್ಟೆ
ಯಲ್ಲಿ ಹುಟ್ಟುವ ಮಗನಿಗೆ ನೀನು ಮಾಡ ಬೇಕು. ಇದು ನಿನಗೆ ಸಮ್ಮತಿ
ಯಾದರೆ, ನೀನು ಹೇಳಿದ ಹಾಗಾಗ ಬಹುದು, ಎನಲು; ರಾಯನು—ಹಾಗೆ
ಆಗಲೆಂದು ಪ್ರತಿಜ್ಞೆಯನ್ನು ಮಾಡಿ ಕೊಟ್ಟು, ಅವಳು ಕೋರಿದ ಮೇರೆಗೆ
ತನ್ನ ಪುರೋಹಿತನನ್ನು ಕರಿಸಿ, ಸಾಂಗವಾಗಿ ಗಾಂಧರ್ವ ವಿವಾಹದಿಂದ ಆ
ಶಕುಂತಳೆಯನ್ನು ವರಿಸಿ, ಅವಳೊಡನೆ ಅಭಿಷ್ಟ ಭೋಗಗಳನ್ನು ಪಡೆದು,
ತಿರಿಗಿ ತನ್ನ ಪಟ್ಣಕ್ಕೆ ಹೋಗ ಬೇಕೆಂದು ಆಲೋಚಿಸಿ, ಆ ಶಕುಂತಳೆಯನ್ನು
ಕುರಿತು—ಎಲೈ, ಪ್ರಿಯಳೇ, ನಾನು ಪಟ್ಣಕ್ಕೆ ಹೋಗಿ, ಆನೆ, ಕುದುರೆ, ರಥ,
ಪದಾತಿಗಳನ್ನೂ, ನನ್ನ ಬಿರುದಾವಳಿಗಳನ್ನೂ, ಓಲಗ, ತಮಟೆ, ಭೇರಿ,
ಮೃದಂಗ, ಕಹಳೆ ಇವೇ ಮೊದಲಾದ ವಾದ್ಯಗಳನ್ನೂ, ಗಾಯಕ ನರ್ತಕಿಯ
ರನ್ನೂ, ದಾಸ ದಾಸೀ ಜನರನ್ನೂ, ಆಂದೋಳಿಕಗಳನ್ನೂ, ಇವೇ ಮುಂತಾದ
ಸಂಭ್ರಮದೊಡನೆ ನಿನ್ನನ್ನು ಕರೇ ಕಳುಹಿಸಿ ಕೊಳ್ಳುತ್ತೇನೆ; ಅಷ್ಟು
ಪರ್ಯಂತರವೂ ನೀನು ಈ ವನದಲ್ಲೇ ಇರು. ಸತ್ಯವಾಗಿ ಹೇಳುತ್ತೇನೆ; ಸಂಶ
ಯ ಪಡ ಬೇಡ, ಎನಲು; ಶಕುಂತಳೆಯು ಆತನನ್ನು ಪ್ರೇಮದಿಂದ ತಬ್ಬಿ
ಕೊಂಡು, ಆತನಿಗೆ ಪ್ರದಕ್ಷಿಣವನ್ನು ಮಾಡಿ, ಮುಗುಳುನಗೆಯಿಂದ ಮುಖವು
ಪ್ರಕಾಶಿಸುವ ಹಾಗೆ ಎದುರಾಗಿ ನಿಂತು, ಮುಖವನ್ನು ನೋಡಿ, ಪಾದಗಳಿಗೆ
ಅಡ್ಡ ಬಿದ್ದು, ಎದ್ದು, ಕಣ್ಣೀರು ತುಂಬಿ ನಿಲ್ಲಲು; ಆ ದುಶ್ಯಂತರಾಯನು
ತಬ್ಬಿ ಕೊಂಡು, ಗಲ್ಲವನ್ನು ಹಿಡಿದು—ಇಷ್ಟು ಯಾತಕ್ಕೆ ಮನಸ್ಸಿನಲ್ಲಿ ಚಿಂತಿಸ
ಬೇಕು? ನನ್ನ ಪುಣ್ಯ ಸಾಕ್ಷಿಯಾಗಿ ನಿನ್ನನ್ನು ಪಟ್ಣಕ್ಕೆ ಕರಿಸುತ್ತೇನೆ ಎಂದು
ಸಂತೈಸಿ, ಅವಳನ್ನು ಅಲ್ಲೇ ಇರಿಸಿ,—ಉಗ್ರ ತಪಸ್ವಿಯಾದ ಕಣ್ವ ಮಹಾ
ಮುನೀಶ್ವರನು ಈ ವೃತ್ತಾಂತವನ್ನು ಕೇಳಿ ಏನು ಮಾಡುವನೋ, ಎಂದು
ಚಿಂತಿಸುತ್ತಾ, ಪಟ್ಣಕ್ಕೆ ಹೋದನು.

ಬಳಿಕ ಶಕುಂತಳೆಯು—ದುಶ್ಯಂತ ಮಹಾ ರಾಯನು ತಾನು ಹೇಳಿದ ಪ್ರಕಾ
ರಕ್ಕೆ ಚತುರಂಗ ಬಲ ಸಮೇತನಾಗಿ—ಬ್ರಾಹ್ಮಣರನ್ನೂ ಸ್ತ್ರೀಜನರನ್ನೂ

ಕೂಡಿ ಕೊಂಡು, ಈ ಹೊತ್ತು ನಾಳೆ ನಾಳಿದ್ದು ಯಾವಾಗಲಾದರೂ ಅವಶ್ಯವು ಬರುವನು ಎಂದು, ಎದುರಾಗಿ ದಾರೀ ನೋಡುತ್ತಾ, ದಿನ ವರುಷ ಮಾಸ ರುತು ಅಯನಗಳನ್ನು ನೋಡಿ, ಬೇಸರ ಪಟ್ಟು, ಸ್ನಾನ ಭೋಜನ ನಿದ್ರೆಗಳನ್ನು ಬಿಟ್ಟು, ಮೂರು ವರುಷಗಳಾಗಲು; ಅವಳು ದಿವ್ಯ ತೇಜೋವಿರಾಜಮಾನನಾಗಿ, ರೂಪು ಲಾವಣ್ಯಗಳುಳ್ಳ ಮಗನನ್ನು ಪಡೆದಳು. ಆ ಕುಮಾರನು ಹುಟ್ಟಿದ ಸಮಯದಲ್ಲಿ ಅಂತರಿಕ್ಷದಿಂದ ಪುಷ್ಪ ವೃಷ್ಟಿ ಆಯಿತು. ಅನೇಕ ಪ್ರಕಾರವಾದ ದೇವದುಂದುಭಿಗಳು ಮೊಳಗಿದವು. ಸಕಲ ಲೋಕ ಮನೋಹರವಾಗಿ ಗಂಧರ್ವರು ಗಾನವನ್ನು ಮಾಡಿದರು. ಕಣ್ವ ಋಷೀಶ್ವರನು ಅತಿ ಸಂತೋಷ ಪಟ್ಟು, ಅಲ್ಲಿ ಇರುವ ಮಹಾ ಋಷಿಗಳನ್ನು ಕರಿಸಿ, ಆ ಕುಮಾರಕನಿಗೆ ಜಾತ ಕರ್ಮ ಮೊದಲಾದ ಉತ್ಸವಗಳನ್ನು ಶಾಸ್ತ್ರೋಕ್ತ ಪ್ರಕಾರವಾಗಿ ನೆರವೇರಿಸಿದನು. ಆ ಕುಮಾರಕನು ದೇವ ಕುಮಾರ ಸಮಾನನಾಗಿ ಆ ಆಶ್ರಮದಲ್ಲಿ ದಿನ ದಿನ ಬೆಳೆದು, ಸಮೀಪದಲ್ಲಿ ಜನರನ್ನು ಪೀಡಿಸುತ್ತಲಿರುವ ಸಿಂಹ, ಹುಲಿ, ಕರಡಿ, ಕಾಡು ಹಂದಿ, ಕಾಡ್ಗೋಣ ಮೊದಲಾದ ಕ್ರೂರ ಜಂತುಗಳನ್ನು ತನ್ನ ಭುಜಬಲದಿಂದ ಹಿಡಿದು, ಕಟ್ಟಿ ಹಾಕಿ, ಏರಿ, ಓಡಿಸುತ್ತಾ, ಆಶ್ರಮಕ್ಕೆ ಉಪದ್ರವನ್ನು ಮಾಡುತ್ತಲಿರುವ ಪಿಶಾಚ ಸಮೂಹಗಳನ್ನೂ ರಾಕ್ಷಸರನ್ನೂ ತನ್ನ ಮುಷ್ಟಿಯ ಪೆಟ್ಟಿನಿಂದ ಕೆಡಹಿ, ಆಶ್ರಮವನ್ನು ನಿಷ್ಕಂಟಕವಾಗಿ ಮಾಡಿದ್ದರಿಂದ, ಕಣ್ವ ಮೊದಲಾದ ಋಷಿಗಳು ಆತನಿಗೆ ಸರ್ವದಮನನೆಂದು ಹೆಸರಿಕ್ಕಿದರು.

ಆ ಬಳಿಕ ದುಶ್ಯಂತನು, ತಾನು ಮಾಡಿದ ಕಾರ್ಯಕ್ಕೆ ಕಣ್ವ ಮುನೀಶ್ವರನು ಕೋಪಿಸಿ ಕೊಂಡು, ಶಪಿಸುವನೆಂದು ಎಣಿಸಿ, ಶಕುಂತಳೆಯಲ್ಲಿ ಅನುರಾಗವಿದ್ದರೂ, ತನ್ನ ಪಟ್ಣಕ್ಕೆ ಕರಿಸುವದಕ್ಕೆ ಭಯ ಪಟ್ಟಿದ್ದನು. ಆ ಬಳಿಕ ಕೆಲವು ಕಾಲವಾಗಲು; ಬಹುಕಾರ್ಯಾಸಕ್ತನಾದ್ದರಿಂದ ಆ ವೃತ್ತಾಂತವನ್ನು ಮರೆತು, ರಾಜ್ಯವನ್ನಾಳುತ್ತಿದ್ದನು.

ಇತ್ತಲು ಶಕುಂತಳೆಯು, ತನ್ನ ಗಂಡನಾದ ದುಶ್ಯಂತ ರಾಯನು ಮಗನು ಸಹಿತವಾಗಿ ತನ್ನನ್ನು ಕರಿಸಿ ಕೊಳ್ಳದೆ ಇರುವದರಿಂದ, ವಿರಹವೇದನೆಯಿಂದ ಬಿಳುಪೇರಿದ ಶರೀರವುಳ್ಳವಳಾಗಿ, ಹಣೆಯಲ್ಲಿ ಜೋಲುತ್ತಿರುವ ಮುಂಗುರುಳುಗಳುಳ್ಳವಳಾಗಿ, ದಿನ ದಿನಕ್ಕೆ ಕೃಶವಾಗಿ, ಮಲಿನವಾದ ವಸ್ತ್ರಗಳನ್ನು ಧರಿಸಿ, ಮುಖ ಕಾಂತಿ ತಪ್ಪಿ, ದೈನ್ಯ ಹೆಚ್ಚಿ, ಚಿಂತಿಸುತ್ತಿರಲು; ಆ ಸರ್ವದಮನನು ಹನ್ನೆರಡು ವರುಷದ ಪ್ರಾಯದವನಾಗಿ, ಮಾನುಷ ಚರಿತ್ರೆಯನ್ನು ಅತಿಕ್ರಮಿಸಿ,

ಯುವ ರಾಜ ಪಟ್ಟಕ್ಕೆ ಯೋಗ್ಯನಾಗಿರುವದನ್ನು ಕಂಡು, ಕಣ್ವ ಮುನೀಶ್ವರನು ಶಕುಂತಳೆಯನ್ನು ನೋಡಿ—ಕೇಳೈ, ಶಕುಂತಳೆಯೇ, ನಿನ್ನ ಗಂಡನಾದ ದುಶ್ಯಂತರಾಯನ ಸಮೀಪಕ್ಕೆ ಹೋಗಿ, ಆತನನ್ನು ಪೂಜಿಸುವದೇ ನಿನಗೆ ಉಚಿತವು. ಆತನು ಇಷ್ಟೊತ್ತಿಗೆ ನಿನ್ನನ್ನು ಕರಿಸಲಿಲ್ಲವೆಂದು ಮನಸ್ಸಿನಲ್ಲಿ ಎಣಿಸಬೇಡ. ಆತನು ನಿನ್ನಿಂದ ಸಂತೋಷ ಪಟ್ಟು, ನಿನ್ನ ಮಗನಿಗೆ ಯುವ ರಾಜ್ಯವನ್ನು ಕೊಡುತ್ತಾನೆ. ಈ ಮಗನನ್ನು ಕರ ಕೊಂಡು, ಗಂಡನ ಸಮೀಪಕ್ಕೆ ಹೋಗು ಎಂಧೇಳಿ, ತನ್ನ ಶಿಷ್ಯರನ್ನು ಕರೆದು—ಸರ್ವ ಲಕ್ಷಣೆಯಾದ ಈ ಶಕುಂತಳೆಯನ್ನು ಮಗನೊಡನೆ ಆ ರಾಯನ ಪಟ್ಣಕ್ಕೆ ಕರ ಕೊಂಡು ಹೋಗಿ, ಬಿಟ್ಟು ಬಿಡಿ; ಸ್ತ್ರೀಯರು ಬಹುಕಾಲ ತಂದೆಯ ಮನೆಯಲ್ಲಿ ಇದ್ದರೆ, ಕೀರ್ತಿ ಚರಿತ್ರ ಧರ್ಮಗಳು ತಪ್ಪುವದರಿಂದ, ತಡವು ಮಾಡದೆ, ಕರ ಕೊಂಡು ಹೋಗಿ, ಎನಲು; ಶಕುಂತಳೆಯು ತಂದೆಯಾದ ಕಣ್ವ ಮುನೀಶ್ವರನಿಗೆ ನಮಸ್ಕಾರವನ್ನು ಮಾಡಿ, ಕೈ ಮುಗಿದು—ಎಲೈ, ಮಹಾನುಭಾವನೇ, ತಂದೆ ಎಂಬ ಸಲಿಗೆಯಿಂದ ಕಲಿತೂ ಕಲಿಯದೆ ಮಾಡಿದ ಕಾರ್ಯಗಳನ್ನೂ, ಅರಿತೂ ಅರಿಯದೆ ಆಡಿದ ಮಾತುಗಳನ್ನೂ ನನ್ನಲ್ಲಿ ಪುತ್ರ ವಾತ್ಸಲ್ಯದಿಂದ ಕ್ಷಮಿಸ ಬೇಕೆನಲು; ಆ ಮಗಳಲ್ಲಿರುವ ಕೃಪಾವಿಶೇಷದಿಂದ ಬದಲು ಮಾತನಾಡುವದಕ್ಕೆ ತೀರದೆ, ತಲೆಯನ್ನು ಬೊಗ್ಗಿಸಿ ಕೊಂಡು, ಲೌಕಿಕ ಮನುಷ್ಯನ ಹಾಗೆ ಕಣ್ಣೀರು ತುಂಬಿ, ಕೆಲವು ಹೊತ್ತಿನ ಮೇಲೆ ಧೈರ್ಯವನ್ನು ತಂದು ಕೊಂಡು, ಉದಕಪಾನಗಳಿಂದ ದಿನಗಳನ್ನುತಳ್ಳುತ್ತಲಿರುವವರು—ವಾಯು ಭಕ್ಷಣೆಯಿಂದ ಕೆಲವು ದಿವಸಗಳು ಕಾಲಕ್ಷೇಪವನ್ನು ಮಾಡುವಂಥಾವರು—ಹಣ್ಣೆಲೆಗಳನ್ನು ಭಕ್ಷಿಸುವಂಥಾವರು—ಕಂದ ಮೂಲಗಳಿಂದ ತೃಪ್ತಿ ಆಗುವಂಥಾವರು—ನಾರು ಶೀರೆಗಳನ್ನು ಉಟ್ಟು, ಕೃಷ್ಣಾಜಿನವನ್ನು ಉತ್ತರೀಯವಾಗಿ ಮಾಡಿ ಕೊಂಡಿರುವಂಥಾವರು—ತಪಸ್ಸಿನಿಂದ ಕೃಶವಾಗಿ, ನರಗಳು ಹೊರಟು ಇರುವಂಥಾವರು—ವ್ರತನಿಷ್ಠರಾಗಿರುವಂಥಾವರು—ಜಟಾಧಾರಿಗಳಾಗಿರುವಂಥಾವರು—ಜುಟ್ಟಿಲ್ಲದೆ ಇರುವಂಥಾವರು—ಇವರು ಮೊದಲಾದ ಮಹಾ ಮುನೀಶ್ವರರನ್ನು ಕರೆದು—ಎಲೈ, ಮಹಾನುಭಾವರುಗಳಿರಾ, ನಮ್ಮ ಶಕುಂತಳೆಯು ಇಲ್ಲೇ ಹುಟ್ಟಿ, ಇಲ್ಲೇ ಬೆಳದು, ಯಾವಾಗಲೂ ನಾನೇ ಸಂರಕ್ಷಿಸಿದ್ದರಿಂದ ಮತ್ತೊಂದೇನೂ ಅರಿತವಳಲ್ಲದೆ ಇರುವದರಿಂದ, ಮಾರ್ಗದಲ್ಲಿ ಶ್ರಮವು ತೋರದೆ ಇರುವ ಹಾಗೆ, ಇಲ್ಲಿಗೆ ಎರಡು ಗಾವುದ ದಾರಿಯಿಂದ ಆಚೆಗೆ ಇರುವ ಪ್ರತಿಷ್ಠಾ ನಗರಕ್ಕೆ ಚಿಕ್ಕ ಚಿಕ್ಕ ಪಯಣಗಳಿಂದ ಕರ ಕೊಂಡು ಹೋಗ ಬೇಕು. ನೀರು ನೆಳಲು ಉಳ್ಳಂಥ, ಭನ ಧಾ

ಸ್ಯಗಳಿಂದ ತುಂಬಿರುವ, ಗಂಗಾ ಯಮುನಾ ಸಂಗಮದಲ್ಲಿ ತೋರುವ ಪ್ರತಿಷ್ಠಾ ಪಟ್ಟಣದಲ್ಲಿ ಸರ್ವದಮನನಿಗೆ ಮುತ್ತಪ್ಪನಾದ ಪುರೂರವನ ಅರಮನೆಯ ಪರ್ಯಂತರಕ್ಕೂ ಹೋಗಿ, ಅಲ್ಲಿ ಸ್ನಾನವನ್ನು ಮಾಡಿ, ಮಂಗಳಗಳಾಚರಿಸಿ, ಕಂದ ಮೂಲ ಫಲಗಳನ್ನು ಭಕ್ಷಿಸಿ, ಅಲ್ಲಿಂದ ಹೊರಟು ಬನ್ನಿ. ಚುರುಕಾಗಿ ಪಯಣವನ್ನು ನಡೆಯ ಬೇಡಿ; ಮಾರ್ಗದಲ್ಲಿ ಶ್ರಮ ತಪ್ಪೀತು, ಎಂದು ನುಡಿಯಲು; ಆ ಋಷಿಗಳು, ಹಾಗೆ ಆಗಲಿ ಎಂದು, ಶಕುಂತಳೆಯನ್ನು ಮಗನು ಸಹಿತವಾಗಿ ಕರ ಕೊಂಡು, ದುಶ್ಯಂತನ ಪಟ್ಟಣವನ್ನು ಕುರಿತು ನಡೆಯುವ ಸಮಯದಲ್ಲಿ ವನಗಳನ್ನೂ ನದಿಗಳನ್ನೂ ಪರ್ವತಗಳನ್ನೂ ತೊರೆಗಳನ್ನೂ ಗುಹೆಗಳನ್ನೂ ಪುಣ್ಯಾಶ್ರಮಗಳನ್ನೂ ನೋಡುತ್ತಾ, ಅಲ್ಲಲ್ಲಿ ನಿಂತು, ಶ್ರಮವನ್ನು ಪರಿಹರಿಸಿ ಕೊಂಡು, ಮೆಲ್ಲ ಮೆಲ್ಲನೆ ಮಧ್ಯಾಹ್ನದ ಸಮಯದಲ್ಲಿ ಪ್ರತಿಷ್ಠಾ ನಗರಕ್ಕೆ ಬಂದು, ಪೂರ್ವದಲ್ಲಿ ದೇವೇಂದ್ರನು ಪುರೂರವ ಮಹಾರಾಯನಿಗೋಸ್ಕರ ನಿರ್ಮಿಸಿದ್ದರಿಂದ, ಸಕಲ ಸೌಭಾಗ್ಯದಿಂದ ಕೂಡಿ, ಅತ್ಯುನ್ನತವಾದ ಅಲಂಗಗಳೂ, ಯಾವಾಗಲೂ ಆಳವು ಕಾಣಿಸದೆ ಇರುವ ಅಗಳುಗಳೂ, ವಿಚಿತ್ರವಾದ ಕೊತ್ತಲಗಳೂ, ಪಿರಂಗಿಗಳೂ, ಬಚ್ಚುಗಳೂ, ಜವರು ಜುಂಗಿಗಳೂ, ಜಂಜಾಲುಗಳೂ, ಮಕರಡಿಬ್ಬಿ ಮೊದಲಾದ ಯಂತ್ರ ವಿಶೇಷಗಳೂ, ಉಳ್ಳ ಕೋಟೆಗಳೂ—ಉಪ್ಪರಿಗೆಗಳೂ, ಸೆಜ್ಜೇ ಮನೆಗಳೂ, ಪಣ್ಯ ವೀಥಿಗಳೂ, ಜಗಲಿಗಳೂ, ಹಜಾರಗಳೂ, ಮಂಟಪಗಳೂ, ಅರವಟ್ಟಿಗೆಗಳೂ, ಸಕಲ ಜನ ಮನೋಹರವಾಗಿ ಅತಿ ವಿಶಾಲವಾದ ರಾಜ ಮಾರ್ಗಗಳೂ, ಕೈಲಾಸ ಶಿಖರಗಳೋಪಾದಿಯಲ್ಲಿ ಅತಿ ಶುಭ್ರವಾಗಿ ಅತ್ಯುನ್ನತವಾದ ಪಟ್ಟದ ಬಾಗಿಲುಗಳೂ, ಹುಲಿ ಮುಖಗಳೂ, ಮೇಲು ಮಿದ್ದೆಗಳೂ, ಹೆಬ್ಬಾಗಿಲುಗಳೂ ಉಳ್ಳಂಥಾದ್ದಾಗಿ, ಸ್ವರ್ಗದಂತಿರುವ ಪಟ್ಟಣವನ್ನೂ, ಆ ಪಟ್ಟಣದ ಸಮೀಪದಲ್ಲಿರುವ ಉದ್ಯಾನ ವನಗಳನ್ನೂ, ಪದ್ಮಶೋಭಿತಗಳಾದ ತಟಾಕಗಳನ್ನೂ, ತಮ್ಮ ತಮ್ಮ ಧರ್ಮಗಳನ್ನು ತಪ್ಪದೆ ಅಗ್ನಿಹೋತ್ರಗಳನ್ನೂ ಯಾಗಗಳನ್ನೂ ಮಾಡುತ್ತಾ, ಧನ ಧಾನ್ಯ ಸಂಪನ್ನರಾಗಿ—ರತ್ನಾಲಂಕಾರ ಭೂಷಿತರಾಗಿ—ದಾನ ಶೀಲರಾಗಿ—ದಯಾಪರರಾಗಿ—ಅಕಾರ್ಯಕ್ಕೆ ಹೋಗದೆ, ಪಾಪಗಳಿಗೆ ಭಯ ಪಟ್ಟು, ಪುಣ್ಯಲೋಕಗಳು ಬೇಕೆಂಬ ಮನಸ್ಸಿನಿಂದ ಸದಾಚಾರ ಸಂಪನ್ನರಾಗಿರುವ ನಾನಾ ಜನಗಳನ್ನು ಕಾಣುತ್ತಾ, ಸಂತೋಷ ಪಟ್ಟರು.

ಆ ಸಮಯದಲ್ಲಿ ದುಶ್ಯಂತ ಮಹಾರಾಯನು ಇಂದ್ರಲೋಕದಂತಿರುವ ಪ್ರತಿಷ್ಠಾ ನಗರ ಮಧ್ಯ ಪ್ರದೇಶದಲ್ಲಿ ದಿವ್ಯ ರತ್ನಮಯವಾದ ದೇವೇಂದ್ರನ ಮನೆ

ಯ ಹಾಗೆ ಒಪ್ಪುತ್ತಲಿರುವ ಅರಮನೆಯಲ್ಲಿ ಮಣಿಗಣ ಖಚಿತವಾದ ಒಂದು ಓಲಗದ ಹಜಾರದಲ್ಲಿ ಉನ್ನತವಾದ ಸಿಂಹಾಸನದಲ್ಲಿ ಕುಳಿತು ಕೊಂಡು, ಸರ್ವಾಲಂಕಾರ ಭೂಷಿತನಾಗಿ, ಬ್ರಾಹ್ಮಣರು ಮೊದಲಾದ ಸಕಲ ವರ್ಣದವರೂ ಮಂತ್ರಿ ಜನಗಳೂ ಮಿಕ್ಕಾದವರೂ ಓಲಗಿಸಲು; ಸೂತ ಮಾಗಧರು ಜಯ ಜಯ ಧ್ವನಿಗಳಿಂದ ಹೊಗಳಲು; ಕಾರ್ಯಾರ್ಥಿಗಳಾಗಿ ಬಂದ ದೇಶ ದೇಶದ ನಿಯೋಗಿಗಳ ಕಾರ್ಯಗಳನ್ನು ವಿಚಾರಿಸುತ್ತಾ, ಒಡ್ಡೋಲಗದಲ್ಲಿ ಇದ್ದು, ಬೇರೆ ಬೇರೆಯಾಗಿ ಅವರವರು ತಮಗೆ ಅಪ್ಪಣೆಯನ್ನು ತೆಗೆದು ಕೊಂಡು, ಮನೆಗಳಿಗೆ ಹೋಗಲು; ಮಿತ ಜನಗಳೊಡನೆ ಇಷ್ಟಾಲಾಪಗಳನ್ನು ಮಾಡುತ್ತಿದ್ದನು.

ಇತ್ತಲಾ ಮುನೀಂದ್ರರು ಶಕುಂತಳೆಯನ್ನು ನೋಡಿ—ಒಳ್ಳೇ ಶಕುನಗಳು ಆಗುತ್ತವೆ; ಈ ಹೊತ್ತು ನೀನು ಮಹಾರಾಯನಿಗೆ ಪಟ್ಟದ ರಾಣಿಯಾಗುತ್ತೀ; ನಿನ್ನ ಮಗನಿಗೆ ಯುವರಾಜ ಪಟ್ಟಾಭಿಷೇಕವಾಗುತ್ತದೆ ಎಂದು ಹೇಳುತ್ತಾ, ಅವಳನ್ನು ಕರ ಕೊಂಡು, ನಾನಾ ಪ್ರಕಾರವಾದ ಧ್ವನಿಗಳಿಂದ ಒಪ್ಪುತ್ತಿರುವ ಆ ಪಟ್ಣವನ್ನು ಹೊಕ್ಕು ಬರುವ ಸಮಯದಲ್ಲಿ, ಆ ಕುಮಾರನ ರೂಪು ರೇಖಾತಿಶಯಗಳನ್ನು ಕಂಡು, ಪೌರ ಜನರು ಆಶ್ಚರ್ಯ ಪಟ್ಟು, ಒಬ್ಬೊಬ್ಬರನ್ನು ಕರೆಯುತ್ತಾ, ಅವರ ಸಮೀಪಕ್ಕೆ ಬಂದು—ಎರಡನೇ ಮಹಾ ಲಕ್ಷ್ಮಿಯು ಹಾಗೂ ಜಯಂತನು ಸಹಿತವಾಗಿ ಬರುವ ಶಚೀ ದೇವಿಯು ತೆರದಿಂದಲೂ ಇವರ ಮುಂದೆ ಬರುವ ಈ ಅಂಗನಾಮಣಿ ಯಾರೋ ತಿಳಿಯದು ಎಂದು, ಮಹಾ ಋಷಿಗಳ ಸಮೀಪಕ್ಕೆ ಬಂದು—ಎಲೈ, ಮಹಾ ಋಷಿಗಳಿರಾ, ನಿಮಗೆ ನಮಸ್ಕಾರ ಮಾಡುತ್ತೇವೆ. ಇಂಥಾ ಪರಮ ಪವಿತ್ರರಾದ ನಿಮ್ಮನ್ನು ಕಂಡದರಿಂದ ನಮ್ಮ ಜನ್ಮಗಳು ಸಫಲವಾದವು ಎಂದು ಸ್ತುತಿಸಿ, ಅಲ್ಲಿ ಕೆಲವರು ಆ ಋಷಿಗಳ ಸಂಗಡಲೇ ಹೋಗಿ, ಕುಮಾರಸ್ವಾಮಿಯು ಹಾಗೆ ಇರುವ ಆ ಕುಮಾರನನ್ನು ಕಂಡು, ಸಂತೋಷ ಪಟ್ಟರು. ಆ ಸರ್ವದಮನನು ಮೊದಲು ಎಂದೂ ಕಾಣದಿರುವ ಆ ಪಟ್ಣದ ಸೌಭಾಗ್ಯಾತಿಶಯವನ್ನು ನೋಡಿ, ತಾನು ದೇವೇಂದ್ರನ ಪಟ್ಣಕ್ಕೆ ಬಂದೆನೋ ಎಂದು, ಸಂತೋಷ ಪಟ್ಟನು. ಮತ್ತು ಆ ಪಟ್ಣದಲ್ಲಿರುವ ಕೆಲವರು ಮೂಢರು, ಕೃಷ್ಣಾಜಿನಗಳನ್ನು ಧರಿಸಿ, ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ, ತಪಸ್ಸಿನಿಂದ ಶರೀರವು ಕೃಶವಾಗಿ, ಕಾಣಿಸುತ್ತಿರುವ ನರಗಳೊಡನೆ ಕೂಡಿರುವ ದೇಹಗಳಲ್ಲಿ ಹೊಂಬಣ್ಣವುಳ್ಳ ನೇತ್ರಗಳನ್ನೂ ಜಡೆಗಳನ್ನೂ ಉದ್ದವಾದ ಹಲ್ಲುಗಳನ್ನೂ ಬೆನ್ನು ಹತ್ತಿರುವ ಹೊಟ್ಟೆಗಳನ್ನೂ ಬಿಟ್ಟ ಮಂಡೆಗಳನ್ನೂ ಎತ್ತಿದ ಕೈಗಳನ್ನೂ ಧರಿಸಿ, ವಿಕಾರವಾದ ವೇಷಗಳೊಡನೆ ಕೂಡಿ ಇ

ರುವ ಆ ಮುನೀಶ್ವರರನ್ನು ಕಂಡು—ಸಾಯಂಕಾಲವಾಗದೆ ಪಿಶಾಚಗಳು ಪಟ್ಟಣಕ್ಕೆ ಬಂದವು, ಕಂಡಿರೇ? ಎಂದು ಹಾಸ್ಯ ಮಾಡಿದರು. ಅಂಥಾ ದುರ್ಜನರ ಮಾತುಗಳನ್ನು ಕೇಳಿ, ಮುನಿಜನಗಳು—ಸಕಲವನ್ನು ಬಿಟ್ಟ ನಾವು ಯಾತಕ್ಕೆ ಪಟ್ಟಣಕ್ಕೆ ಹೋಗ ಬೇಕು? ಎಂದು ಹೇಳಿ, ಪಟ್ಟಣವನ್ನು ಪ್ರವೇಶಿಸದೆ, ಗಂಗಾ ಯಮುನಾ ಸಂಗಮ ಸ್ಥಳಕ್ಕೆ ತಿರಿಗಿ ಬಂದರು.

ಆ ಮೇಲೆ ಶಕುಂತಳೆಯು, ಮಗನು ಸಹಿತವಾಗಿ, ಪಟ್ಟಣದ ಬೀದಿಯಲ್ಲಿ ಹೋಗುತ್ತಿರುವಾಗ, ಆ ಪಟ್ಟಣದ ಜನಗಳು ಅವರನ್ನು ಕಂಡು—ಈ ಸ್ತ್ರೀರತ್ನವು ಯಾರೋ, ತಿಳಿಯ ಕೂಡದು. ಹಂಸೆಯ ಹಾಗೆ ನಡೆಯೂ, ಕೋಗಿಲೆಯ ಹಾಗೆ ಧ್ವನಿಯೂ, ಚಂದ್ರನ ಹಾಗೆ ಮುಖವೂ, ಮಹಾ ಲಕ್ಷ್ಮಿಗೆ ಸಮಾನವಾದ ಶರೀರ ಕಾಂತಿಯೂ, ಮೊಲ್ಲೇ ಮೊಗ್ಗಿಗೆ ಸಮಾನವಾದ ನಗೆಯ ಕಾಂತಿಯೂ, ತಾವರೇ ಹೂವಿನ ಒಳಗಿರುವ ಎಸಳುಗಳ ಹಾಗೆ ಮೃದುವಾಗಿರುವ ಚರ್ಮವೂ, ಕಮಲ ದಳದ ಹಾಗೆ ಇರುವ ನೇತ್ರಗಳೂ, ಕುಂದಣದ ಹಾಗಿರುವ ಶರೀರದ ಹೊಂಬಣ್ಣವೂ, ಹಿಡಿಯಲ್ಲಿ ಅಡಕವಾಗುವ ನಡುವೂ, ವಕ್ರವಾಗಿ ಕಪ್ಪಾಗಿ ಹಿಮ್ಮಡಿಯಲ್ಲಿ ಬೀಳುವ ಕುರುಳುಗಳೂ, ಚಿಗುರಿನ ಹಾಗೆ ಮೃದುವಾದ ಪಾದಗಳೂ, ಇವು ಮೊದಲಾದ ಸಕಲ ಶರೀರ ಲಕ್ಷಣಗಳುಳ್ಳವಳಾಗಿ, ಕೈಯಲ್ಲಿ ಕಮಲ ಮಾತ್ರವಿಲ್ಲದೆ ಇರುವ ಮಹಾ ಲಕ್ಷ್ಮಿಯ ಹಾಗೆ ತೋರುವಂಥವಳಾಗಿ, ಸ್ವರ್ಗವನ್ನು ಬಿಟ್ಟು ಏನೋ ಒಂದು ಕಾರಣದಿಂದ ಭೂಲೋಕಕ್ಕೆ ಬಂದ ದೇವ ಕನ್ನಿಕೆಯಾಗಿರ ಬೇಕೆಂದು ಎಣಿಸಿ, ಒಬ್ಬೊಬ್ಬರು ಹೇಳಿ ಕೊಂಡರು. ಮತ್ತು ಆ ಕುಮಾರನನ್ನು ಕಂಡು, ಸಿಂಹದ ಹಾಗೆ ಸೊಂಟವೂ, ಕೋರೆ ಹಲ್ಲುಗಳೂ, ಮುಡುಹುಗಳೂ, ಎದೆಯೂ, ಬಲವೂ, ಗಮನವೂ, ಉಳ್ಳ—ಸ್ವಭಾವ ರಕ್ತವಾದ ಚೆಂದುಟಿಯೂ, ದುಂದುಭಿ ಧ್ವನಿಯಂತೆ ಧ್ವನಿಯೂ, ಇವೇ ಮೊದಲಾದ ರಾಜ ಲಕ್ಷಣಗಳುಳ್ಳ ಈ ಕುಮಾರಕನಲ್ಲಿ ರಾಜ ಲಕ್ಷ್ಮಿಯು ತೋರುತ್ತಲಿದೆ. ಈ ಬಾಲಕನು ರೂಪು ಆಕಾರ ಶರೀರ ಕಾಂತಿ ವಿಶೇಷಗಳಿಂದ ತಮ್ಮ ದುಶ್ಯಂತ ರಾಯನನ್ನು ಹೋಲುತ್ತಿದ್ದಾನೆ. ಈತನು ಯಾರ ಕುಮಾರನೋ? ಎಂದು ತಮ್ಮೊಳಗೆ ಹೇಳಿ ಕೊಳ್ಳುತ್ತಿದ್ದರು.

ಹೀಗೆ ಪ್ರೇಮದಿಂದ ನುಡಿಯುವ ಪಟ್ಟಣದ ಜನರ ಪ್ರಿಯ ವಾಕ್ಯಗಳನ್ನು ಕೇಳುತ್ತ, ಶಕುಂತಳೆಯು ಪುತ್ರ ಸಮೇತಳಾಗಿ ಅರಮನೆಯ ಬಾಗಿಲೆಡೆಗೆ ಹೋಗಿ, ಕಾರ್ಯ ಗೌರವದಿಂದ ಮನಸ್ಸಿನಲ್ಲಿ ಚಿಂತೆ ಹೆಚ್ಚಲು; ನಾಚಿಕೆಯಿಂದ

ಮುಖವನ್ನು ಬೊಗ್ಗಿಸಿ ಕೊಂಡು, ತಾನು ದಯೆ ಇಲ್ಲದ ಅರಸಿನ ಬಳಿಗೆ ಹೋಗಿ, ನಿರ್ನಿಮಿತ್ತವಾಗಿ ಏನು ಹೇಳ ಬೇಕೆಂದು ಚಿಂತಿಸುತ್ತಾ, ಹಜಾರದಲ್ಲಿ ನಿಂತು, ತಾನು ಬಂದಿರುವದನ್ನು ಅರಿಕೆ ಮಾಡಿಸಿ, ಅರಸಿನ ಅಪ್ಪಣೆಯಿಂದ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಕುಮಾರನೊಡನೆ ಅರಸನ ಸನ್ನಿಧಿಗೆ ಹೋಗಿ, ಎರಡನೇ ದೇವೇಂದ್ರನೋಪಾದಿಯಲ್ಲಿ ಸಿಂಹಾಸನದ ಮೇಲೆ ಕುಳಿತಿರುವ ರಾಯನನ್ನು ಕಂಡು, ಇಷ್ಟು ಕಾಲಕ್ಕೆ ಈ ರಾಯನ ದರ್ಶನ ಮಾಯಿತು ಎಂದು ಸಂತೋಷ ಪಡುತ್ತಾ, ತನ್ನ ಮಗನನ್ನು ಕುರಿತು—ಎಲೈ, ದೃಢವ್ರತನಾದ ನಿನ್ನ ತಂದೆಗೆ ನಮಸ್ಕರಿಸು ಎಂದು ಕಟ್ಟು ಮಾಡಿ, ನಾಚಿಕೆಯಿಂದ ತಲೆಯನ್ನು ಬೊಗ್ಗಿಸಿ ಕೊಂಡು, ಒಂದು ಕಂಭದ ಮರೆಯಲ್ಲಿ ನಿಂತಿರಲು; ಆ ಬಾಲಕನು ತನ್ನ ತಂದೆಯಾದ ಮಹಾ ರಾಯನಿಗೆ ನಮಸ್ಕಾರವನ್ನು ಮಾಡಿ, ಕೈ ಕಟ್ಟಿ ಕೊಂಡು ನಿಂತಿರಲು; ದುಶ್ಯಂತ ರಾಯನು ಶಕುಂತಳೆಯನ್ನು ನೋಡಿ—ಮಗನೊಡನೆ ನೀನು ಇಲ್ಲಿಗೆ ಬಂದ ಕಾರ್ಯವೇನು? ಹೇಳಿದರೆ, ಆ ಕಾರ್ಯವನ್ನು ನಾನು ಮಾಡಿ ಕೊಟ್ಟೇನು, ಎನಲು; ಶಕುಂತಳೆಯು—ಎಲೈ, ಮಹಾರಾಯನೇ, ಪೂರ್ವದಲ್ಲಿ ನೀನು ಬೇಟೇ ವಿನೋದದಿಂದ ವನದಲ್ಲಿ ತಿರುಗುತ್ತಾ, ಕಣ್ವಾಶ್ರಮಕ್ಕೆ ಬಂದ ಸಮಯದಲ್ಲಿ ತನ್ನಲ್ಲಿ ಅನುಗ್ರಹದಿಂದ ಮದುವೆ ಮಾಡಿ ಕೊಳ್ಳುವಾಗ ಏನು ಸಂಕೇತವನ್ನು ಮಾಡಿದ್ದಿಯೋ, ಆ ಪ್ರತಿಜ್ಞೆಯನ್ನು ಸ್ಮರಿಸಿ, ಈ ಪ್ರಕಾರ ಮಾಡು. ಈತನು ನಿನ್ನಿಂದ ನನ್ನಲ್ಲಿ ಆದ ಮಗನು. ಈತನಿಗೆ ಯುವರಾಜ ಪಟ್ಟವನ್ನು ಕಟ್ಟಬೇಕೆನಲು; ದುಶ್ಯಂತನು ಆ ಮಾತನ್ನು ಕೇಳಿ, ಸಂತೋಷ ಪಟ್ಟರೂ, ತಾನು ಅರಿಯದವನ ಹಾಗೆ ಶಕುಂತಳೆಯನ್ನು ನೋಡಿ—ನಾನು ನಿನ್ನನ್ನು ಎಂದೂ ನೋಡಲಿಲ್ಲ, ಮದುವೆಯಾಗಲೂ ಇಲ್ಲ. ಹೀಗೆ ಧರ್ಮವನ್ನು ತಪ್ಪಿ, ಪರಿಗ್ರಹಿಸುವಂಥವನಲ್ಲ. ಇಂಥಾ ವ್ಯರ್ಥವಾದ ಮಾತುಗಳನ್ನು ನುಡಿಯ ಬೇಡ. ಸುಮ್ಮನೇ ಇರ ಬೇಕಾದರೆ, ಇರು; ಹೋಗ ಬೇಕಾದರೆ, ಹೋಗು, ಎನಲು; ಶಕುಂತಳೆಯು ಆ ರಾಯನ ಮಾತುಗಳನ್ನು ಕೇಳಿ, ಅಧಿಕವಾದ ಲಜ್ಜೆಯಿಂದಲೂ, ದುಃಖದಿಂದಲೂ ಒಂದು ಘಳಿಗೆ ಮೈಮರದು, ತಿರಿಗಿ ಧೈರ್ಯ ಹಿಡಿದು, ಕೋಪಾವೇಶದಿಂದ ಕೆಂಪಾದ ಕಣ್ಣುಗಳುಳ್ಳವಳಾಗಿ, ತುಟಿಗಳನ್ನಲ್ಲಾಡಿಸುತ್ತಾ, ಆ ರಾಯನನ್ನು ವಕ್ರ ದೃಷ್ಟಿಗಳಿಂದ ಬಿರ ಬಿರನೆ ನೋಡುತ್ತಾ, ಕೋಪದಿಂದ ಹುಟ್ಟಿರುವ ತೇಜೋ ವಿಶೇಷವನ್ನು ತನ್ನ ಧೈರ್ಯದಿಂದ ತಡೆದು, ಘಳಿಗೆ ಮಾತ್ರ ಆಲೋಚಿಸಿ, ತಿರಿಗಿ ರಾಯನನ್ನು ನೋಡಿ—ಎಲೈ, ರಾಯನೇ,

ನೀನು ತಿಳಿದರೂ ತಿಳಿಯದವನ ಹಾಗೆ ಯಾಕೆ ಹೀಗೆ ಮಾತಾಡುತ್ತಿದ್ದೀ? ಇದಕ್ಕೆ ಸಾಕ್ಷಿಯಾದ ನಿನ್ನ ಮನಸ್ಸನ್ನು ಯಾಕೆ ತಿರಸ್ಕರಿಸುತ್ತೀ? ಸಕಲ ಧರ್ಮಗಳನ್ನು ತಿಳಿದಿರುವಂಥಾ ನೀನು ಯಾತಕ್ಕೆ ಮೊದಲು ಹೇಳಿ, ಈಗ ಸಟೆ ಆಡುತ್ತೀ? ಮತ್ತು ಪತಿವ್ರತೆಯಾದ ನನ್ನನ್ನು—ಕಾಮುಕಿಯಾಗಿ ತನಗೆ ತಾನೇ ಬಯಸಿ ಬಂದಳು ಎಂದು ಉಪೇಕ್ಷೆ ಮಾಡ ಬೇಡ. ಬಹುಮಾನ ಪೂರ್ವಕವಾಗಿ ರಕ್ಷಿಸ ತಕ್ಕಂಥಾ ನನ್ನನ್ನು ಬಹುಮಾನವನ್ನು ಮಾಡದೆ, ಉಪೇ ಕ್ಷೆಯನ್ನು ಮಾಡಲಾಗದು. ನೀನು ತುಚ್ಛ ಮನುಷ್ಯನ ಹಾಗೆ ಈ ತುಂಬಿದ ಸಭೆಯಲ್ಲಿ ಇಂಥಾ ನೀಚ ಮಾತುಗಳನ್ನು ಆಡುವದು ಉಚಿತವಲ್ಲ. ವಿವೇಕಿ ಗಳಾದ ಮನುಷ್ಯರು, ಕೋಪ ಬಂದರೂ, ತಮ್ಮ ಹೆಂಡತಿಗಳನ್ನು ಧಿಕ್ಕರಿಸ ಬಾರದು. ತಮ್ಮ ಹೆಂಡತಿಗಳನ್ನೂ ಮಕ್ಕಳನ್ನೂ ತಬ್ಬಿ ಕೊಂಡು, ಅತ್ಯಂತ ಸಂತೋಷ ಪಡ ಬೇಕು. ಎಂಥಾವರಾಗಲಿ, ಮಹಾ ಬ್ರಹ್ಮಜ್ಞಾನಿಗಳಾದರೂ, ಸ್ತ್ರೀಯರಲ್ಲಿಯೇ ಹುಟ್ಟ ಬೇಕು. ಆದ್ದರಿಂದ ಸ್ತ್ರೀಯರು ಪ್ರಸಿದ್ಧರಾಗಿ ರುವರು. ಲೋಕದಲ್ಲಿ ಮಗನಾಗಿರುವವನು ಧೂಳಿಗಳಲ್ಲಿ ಓಡ್ಯಾಡಿ, ಮುದ್ದು ಮುದ್ದಾಗಿ ಬಂದು, ತಂದೆಯ ಶರೀರವನ್ನು ತಬ್ಬಿ ಕೊಂಡರೆ, ಅದರಿಂದ ಬಂದ ಸುಖಕ್ಕೆ ಸ್ವರ್ಗ ಲೋಕದ ಸುಖವಾದರೂ ಸಮಾನವಾಗಲಾರದು. ಹಾಗೆ ಇರುವಲ್ಲಿ ನಿನ್ನಂಥಾ ಮಹಾ ಪುರುಷನು ತಂದೆ ಎಂದು ನೆರೆ ನಂಬಿ, ತನಗೆ ತಾನೇ ಬಂದ ದಿವ್ಯ ಕುಮಾರಕನನ್ನು ಆದರಿಸದೆ ಇರ ಬಹುದೇ? ಇರುವೆ ಮೊದಲಾದ ತಿರ್ಯಗ್ಜಾತಿ ಜಂತುಗಳು ತಮ್ಮ ತಮ್ಮ ಮೊಟ್ಟೆಗಳನ್ನು ಬಿಡದೆ ರಕ್ಷಿಸುತ್ತವೆ. ಕಾಗೆಗಳು ಕೋಗಿಲೆಯ ಮೊಟ್ಟೆಗಳನ್ನು ತಮ್ಮ ಮೊಟ್ಟೆಗಳೆಂದು ಪ್ರೀತಿಯಿಂದ ಕಾಪಾಡುತ್ತವೆ. ಹೀಗಿರುವಲ್ಲಿ ನಿನ್ನಂಥಾ ಪುರು ಷನು ಹೊಟ್ಟೆಯಲ್ಲಿ ಹುಟ್ಟಿ, ಸರ್ವಜ್ಞನಾಗಿರುವ ಪುತ್ರ ರತ್ನವನ್ನು ಉಪೇಕ್ಷೆ ಮಾಡ ಬಹುದೇ? ಇದಲ್ಲದೆ ನೀನು ಮದುವೆಯಾದ ನನ್ನಲ್ಲಿ ಏನು ಅಪ ರಾಧ ಕಂಡು ಬಿಡುತ್ತಿದ್ದೀ? ಚಿಕ್ಕವಳಾಗಿರುವಾಗ ತಾಯಿ ತಂದೆಗಳನ್ನು ತೊರೆದು ಬಂದೆನು. ಈಗ ನೀನು ತೊರೆದರೆ, ನನಗೆ ಗತಿ ಯಾವದು? ನಾನಾ ದರೂ ನನ್ನ ತಂದೆಯ ಆಶ್ರಮಕ್ಕೆ ಹೋದೇನು. ಈ ಬಾಲಕನಾದ ಮಗನನ್ನು ಬಿಡುವದು ಹ್ಯಾಗೆ? ಎಂದು ನುಡಿಯಲು; ದುಶ್ಯಂತನು ಆ ವಾಕ್ಯಗಳನ್ನು ಕೇಳಿ, ಹೀಗಂದನು—ಕೇಳೈ, ಶಕುಂತಳೆಯೇ, ನಿನ್ನನ್ನೂ ನಿನ್ನ ಮಗನನ್ನೂ ನಾನು ಗುರುತರಿಯೆ. ಸಟೆ ಮಾತುಗಳನ್ನಾಡುವ ಸ್ತ್ರೀಯರನ್ನು ಯಾರು ನಂಬುವರು? ಇಂಥ ಸುಳ್ಳು ಮಾತುಗಳನ್ನು ನಾಚಿಕೆ ಇಲ್ಲದೆ ಈ ರಾಜ ಸಭೆ

ಯಲ್ಲಿ ಏನಂತ ಆಡಿದೆ? ಎಲೈ, ದುಷ್ಟ ಸ್ತ್ರೀಯೇ, ಇಂಥ ಅಸತ್ಯವಾದ ಮಾತು
ಗಳನ್ನು ಈ ಸಭೆಯಲ್ಲಿರುವ ಜನರು, ನಾನು ಸಹ, ಕೇಳಲಾರೆವು. ಎಲ್ಲಿಗಾ
ದರೂ ಹೋಗು. ಇಲ್ಲದಿದ್ದರೆ, ಚಿನ್ನ, ಬೆಳ್ಳಿ, ವಸ್ತ್ರಗಳು, ಆಭರಣಗಳು,
ಮುತ್ತಿನ ಹಾರಗಳು, ಹವಳಗಳು, ಇವು ಮೊದಲಾದ ವಸ್ತುಗಳಲ್ಲಿ ಬೇಕಾದ
ದ್ದನ್ನು ತೆಕ್ಕೊಂಡು, ತಡವು ಮಾಡದೆ ನಡೆ! ನಿನ್ನನ್ನು ನೋಡಲಾರೆನು! ಬೇಗ
ಎದ್ದು ಹೋಗು! ಎಂದು ನುಡಿಯಲು; ಶಕುಂತಳೆಯು—ಎಲೈ, ಮಹಾರಾಯನೇ,
ನಿನಗೂ ನನಗೂ, ಸಾಸಿವೆ ಕಾಳಿಗೂ ಮೇರು ಪರ್ವತಕ್ಕೂ ಇರುವಷ್ಟು ಹೆಚ್ಚು
ಕಡಿಮೆ ಉಂಟು. ಹ್ಯಾಗಂದರೆ, ನಾನು ದೇವ ಕನ್ನಿಕೆಯು; ನೀನು ಮನು
ಷ್ಯನು. ಮತ್ತು ಸತ್ಯಕ್ಕೂ ಅಸತ್ಯಕ್ಕೂ ನಿನ್ನ ಮನಸ್ಸೇ ಕಾರಣವು. ನಾನು
ಎಷ್ಟು ಹೇಳಿದರೂ, ನನ್ನ ವಾಕ್ಯವು ಸಟೆ ಎಂದು ದೃಢವಾಗಿ ನಂಬಿರುವ ತುಚ್ಛ
ಮನುಷ್ಯನಾದ ನಿನ್ನಿಂದ ನನಗೇನಾಗ ಬೇಕು? ಇಂಥ ಸಭೆಯಲ್ಲಿ ನನ್ನನ್ನು
ಅವಮಾನ ಮಾಡಿದ್ದರಿಂದ ನಾನು ನಿನ್ನ ಬಳಿಯಲ್ಲಿ ಅರೆ ಘಳಿಗೆ ನಿಲ್ಲಲಾರೆನು.
ನಾನಾದರೆ ಹೋಗುತ್ತೇನೆ. ಇವನು ಖಂಡಿತವಾಗಿಯೂ ನಿನ್ನ ಮಗನು.
ಲೋಕದಲ್ಲಿ ನಡೆ, ನುಡಿ, ಧ್ವನಿ, ಬುದ್ಧಿ, ಬಲ, ಆಚಾರ, ವಿದ್ಯ, ಪರಾ
ಕ್ರಮ, ಧೈರ್ಯ, ಆಕಾರ, ಮನಸ್ಸು, ಸುಳಿಗಳು, ಮೊದಲಾದ ಲಕ್ಷಣಗಳು
ಇಬ್ಬರಿಗೂ ಒಂದೇ ಪ್ರಕಾರವಾಗಿ ಇದ್ದರೆ, ಅವರೇ ತಂದೆ ಮಕ್ಕಳೆನಿಸಿ ಕೊಳ್ಳು
ವರು. ಆದ್ದರಿಂದ ಈ ಬಾಲಕನು ಸಕಲ ಲಕ್ಷಣಗಳಲ್ಲಿಯೂ ನಿನ್ನನ್ನೇ
ಹೋಲುತ್ತಾನೆ. ತಂದೆಯೇ ಎಂದು ಮಾತಾಡಿಸುತ್ತಾ, ನಿಂತು ಕೊಂಡು
ಇದ್ದಾನೆ. ಇಂಥವನನ್ನು ಅಂಗೀಕರಿಸದೆ ಇರ ಬೇಡ. ಇನ್ನು ಮೇಲಾದರೂ
ದುರ್ಬುದ್ಧಿಯನ್ನು ಬಿಟ್ಟು, ಇವನನ್ನು ಮನ್ನಿಸು; ಇಲ್ಲದಿದ್ದರೆ ನಿನ್ನ ತಲೆ
ಸಹಸ್ರ ಹೋಳಾಗುತ್ತಲಿದೆ ಎಂದು, ಕಣ್ಣುಗಳನ್ನು ಕೆಂಪಗೆ ಮಾಡಿ ಕೊಂಡು,
ಆಸ್ಥಾನವನ್ನು ಬಿಟ್ಟು, ವನಕ್ಕೆ ಅಭಿಮುಖಳಾದಳು.

ಆ ಸಮಯದಲ್ಲಿ ಋತ್ವಿಕ್ಪುರೋಹಿತಾಚಾರ್ಯ ಮಂತ್ರಿ ಸಮೇತನಾದ
ದುಶ್ಯಂತ ಮಹಾರಾಯನನ್ನು ಕುರಿತು ಅಶರೀರ ವಾಣಿಯು—ಎಲೈ, ರಾಯನೇ,
ನಿನಗೆ ಈ ಬಾಲಕನು ಪುತ್ರನಹುದು. ಆ ಶಕುಂತಳೆಯು ಹೇಳಿದ
ವುಗಳೆಲ್ಲಾ ಸತ್ಯವು. ಆಕೆಯು ಮಹಾ ಪತಿವ್ರತೆಯು. ಸಾವಿರ ಮಾತು
ಗಳಿಂದ ಪ್ರಯೋಜನವೇನು? ಈ ಬಾಲಕನನ್ನು ಮನಃಪೂರ್ವಕವಾಗಿ ಅಂಗೀ
ಕರಿಸು. ಶಕುಂತಳೆಯನ್ನು ಕರಿಸಿ, ಮನ್ನಿಸು. ನಿನ್ನ ಈ ಮಗನು ಭರ
ತನೆಂಬ ನಾಮದಿಂದ ಪ್ರಸಿದ್ಧನಾಗಿ, ಚಕ್ರವರ್ತಿ ಅನ್ನಿಸಿ ಕೊಂಡು, ನಿನ್ನ

ಕುಲವನ್ನು ಉದ್ಧರಿಸುವನು ಎಂದು ನುಡಿಯಲು; ರಾಯನು ಸಂತುಷ್ಟ ಚಿತ್ತ ನಾಗಿ, ಸಿಂಹಾಸನದಿಂದಿಳಿದು, ಸಭಾಜನರನ್ನು ಕುರಿತು—ಎಲೈ, ಸಾಮಾ ದೀಕರೇ, ಕೇಳಿ! ಈ ಶಕುಂತಳೆಯು ನನ್ನ ಪತ್ನಿ ಎಂದೂ, ಈ ಬಾಲಕನು ನನ್ನ ಮಗನೆಂದೂ, ನಾನು ತಿಳಿದಿದ್ದರೂ, ಲೋಕಾಪವಾದಕ್ಕೋಸ್ಕರ ಭಯ ಪಟ್ಟು, ನನಗೆ ತಿಳಿಯದು ಎಂದು ಹೇಳಿದೆನೇ ಹೊರ್ತು, ಮತ್ತೆ ಬೇರೆ ಅಲ್ಲ ಎಂದು ನುಡಿದು, ಸಕಲ ಜನ ಸಮ್ಮತಿಯಿಂದ ಮಗನನ್ನು ತಬ್ಬಿ ಕೊಂಡು, ಶಿರಸ್ಸನ್ನು ಆಘ್ರಾಣಿಸಿ, ಕುಮಾರನ ಅಂಗ ಸಂಗದಿಂದ ಉಂಟಾದ ಸುಖವನ್ನ ನುಭವಿಸಿ, ಶಕುಂತಳೆಯನ್ನು ಕರಿಸಿ, ಬಹುಮಾನವನ್ನು ಮಾಡಿ, ಸಕಲ ಜನ ಸಮ್ಮತವಾಗಿ ರಾಜ್ಯ ಪರಿಪಾಲನೆಯನ್ನು ಮಾಡಿ ಕೊಂಡು, ಪತ್ನೀ ಪುತ್ರ ರೊಡನೆ ಸುಖದಲ್ಲಿದ್ದನು.

### 58. Kalinga's Policy.

### ೫೮. ಕಳಿಂಗನ ನೀತಿ.

ಧೃತರಾಷ್ಟ್ರ ರಾಯನು ತಾನೂ ತನ್ನ ಮಕ್ಕಳೂ ಹ್ಯಾಗೆ ಬದುಕ ತಕ್ಕದ್ದು ಎಂದು ಯೋಚಿಸುತ್ತಾ, ಶಕುನಿಯು ಮಂತ್ರಿಯಾದ ಕಳಿಂಗನೆಂಬ ಬ್ರಾಹ್ಮಣನ ನ್ನು ಕರತರಸಿ, ಏಕಾಂತದಲ್ಲಿ ಆತನನ್ನು ಕುರಿತು—ಎಲೈ, ಭೂಸುರೋತ್ತಮ ನೇ, ಈ ಪಾಂಡು ಕುಮಾರಕರು ಬಲ ಪರಾಕ್ರಮಗಳಿಂದ ಪ್ರತಿ ದಿನದಲ್ಲಿ ಯೂ ಹೆಚ್ಚಿ ಬರುತ್ತಲಿದ್ದಾರೆ. ಅವರ ಅತಿಶಯವನ್ನು ನಾನು ಸಹಿಸಲಾರೆನು. ನೂರು ಮಂದಿ ಮಕ್ಕಳೊಡನೆ ಕೂಡಿರುವ ನನಗೆ ಹ್ಯಾಗೆ ನಡೆದರೆ ಕ್ಷೇಮ ಬರುತ್ತದೋ, ಆ ಅರ್ಥವನ್ನು ತಿಳುಹಿಸ ಬೇಕೆನಲು; ಆ ಕಳಿಂಗನು ತೀಕ್ಷ್ಣ ವಾದ ನೀತಿ ಶಾಸ್ತ್ರವನ್ನು ಅವಲಂಬಿಸಿ, ಇಂತೆಂದನು;—ಎಲೈ, ಧೃತರಾಷ್ಟ್ರ ರಾಯನೇ, ಕೇಳು. ಲೋಕದಲ್ಲಿ ಅರಸುಗಳಿಗೆ ಬ್ರಾಹ್ಮಣರನ್ನು ಪೂಜಿಸುವ ದೂ, ದುಷ್ಟರನ್ನು ಶಿಕ್ಷಿಸುವದೂ, ಅಪರಾಧವನ್ನು ಮಾಡಿದವರಿಗೆ ಶಾಸ್ತ್ರೋಕ್ತ ವಾಗಿ ದಂಡನೆ ಮಾಡುವದೂ ನಿತ್ಯ ಕರ್ತವ್ಯವಾಗಿ ಇರುವದು. ಹೀಗೆ ಮಾಡಿ ದರೆ, ಇಹ ಪರಗಳಲ್ಲಿ ಸೌಖ್ಯ ಲಭಿಸುವದು.

ಆಮೆಯು ತನ್ನ ಅಂಗಗಳನ್ನು ತಾನು ತಿಳಿಸದ ಹಾಗೆ, ಅರಸು ತನ್ನ ಮರ್ಮವನ್ನು ತಿಳಿಸದೆ, ಪರರ ಮರ್ಮಗಳನ್ನು ತಾನು ತಿಳಿದು ಕೊಂಡು, ತಪ್ಪು ಮಾಡಿದವರನ್ನು ಪಾಲುಮಾರದೆ ಶಿಕ್ಷಿಸುತ್ತಾ ಇದ್ದರೆ, ಅವನಿಗೆ ಸಮಸ್ತ ಜನ ಗಳು ಭಯ ಪಟ್ಟು, ವಿನೀತರಾಗಿ ನಡೆಯುತ್ತಾ ಇರುವರು. ಅಪರಾಧಾ ಮಾಡಿ ದವರನ್ನು ಶಿಕ್ಷಿಸದೆ ಬಿಟ್ಟರೆ, ಅವರದೆಶೆಯಿಂದ ಅವಮಾನವನ್ನು ಹೊಂದಿ,

ಇಹ ಪರಗಳಲ್ಲಿ ಸೌಖ್ಯ ಹೊಂದದೆ ಇರುವನು. ಐಶ್ವರ್ಯಾತಿಶಯದಿಂದ ತನ್ನ
ನ್ನು ಎಣಿಸದೆ ಇರುವಂಥವರನ್ನು ಹಿಡ ತರಿಸಿ, ನಿಗ್ರಹಿಸಿ, ಅವರ ಧನವನ್ನು
ಅನ್ಯರಿಗೆ ಕೊಡಿಸ ಬೇಕು. ಒಂದು ಉದ್ಯೋಗವನ್ನು ನಡಿಸ ಬೇಕಾದರೆ,
ತನಗೆ ಆಪ್ತರಾಗಿಯೂ ಕಾರ್ಯ ಸಾಧನಾ ನಿಪುಣರಾಗಿಯೂ ಇರುವಂಥವರ
ನ್ನು ಬಿಟ್ಟು, ಅನ್ಯರನ್ನು ಆ ಕೆಲಸದಲ್ಲಿ ನಿಯೋಗಿಸಿದರೆ, ಅವರಿಂದ ಆ ಕೆಲ
ಸ ಸಾಧನೆಯಾಗಲಾರದು. ಗ್ರಾಮಗಳಲ್ಲಿಯೂ ಪಟ್ಣಗಳಲ್ಲಿಯೂ ದೇಶಗಳ
ಲ್ಲಿಯೂ ನೇಮಿಸಿ ಇರಿಸಿದ ಜನಗಳು ಧರ್ಮಗಳನ್ನು ಬಿಡದೆ ಜನರಿಗೆ ತೊಂದ
ರೆ ಕೊಡದೆ ಇರುವ ರೀತಿಯನ್ನು ಗೋಪ್ಯವಾಗಿ ಚಾರರ ಮುಖಾಂತ್ರ ತಿಳಿದು,
ಅವರೊಂದು ವೇಳೆ ದುರ್ಮಾರ್ಗ ಪ್ರವರ್ತಕರಾದರೆ, ಅವರನ್ನಾಕ್ಷಣವೇ ಆ ಅಧಿ
ಕಾರದಿಂದ ತಪ್ಪಿಸಿ, ನಿಗ್ರಹಿಸ ಬೇಕು. ಅನ್ಯರ ಛಿದ್ರಗಳನ್ನು ನೋಡುವದೇ
ಹೊರ್ತು ಆಮೆಯ ಹಾಗೆ ತನ್ನ ಛಿದ್ರಗಳನ್ನು ಒಬ್ಬರಿಗೂ ತಿಳಿಸ ಕೂಡದು.

ಒಬ್ಬನನ್ನು ನಿಗ್ರಹಿಸ ಬೇಕಾದರೆ, ಸಮೂಲವಾಗಿ ನಿಗ್ರಹಿಸ ಬೇಕು.
ಸ್ವಲ್ಪ ನಿಗ್ರಹಿಸಿ, ಬಿಟ್ಟು ಬಿಟ್ಟರೆ, ಅರ್ಧ ಮುರಿದ ಮುಳ್ಳಿನೋಪಾದಿಯಲ್ಲಿ
ಬಾರಿ ಬಾರಿಗೂ ಬಾಧಿಸುತ್ತಾ ಇರುವನು. ಶತ್ರುವನ್ನು ಪ್ರಾಣಾಂತವಾಗಿ ನಿಗ್ರ
ಹಿಸಿದರೆ, ಸುಖವಾಗಿ ನಿದ್ದೆ ಹೋಗ ಬಹುದು. ಪೂರ್ವದಲ್ಲಿ ಅಪರಾಧಾ ಮಾಡಿ
ದವರು ಒಬ್ಬಿಬ್ಬರು ಮೂರು ಮಂದಿ, ಹತ್ತು ಮಂದಿ ಶಿಕ್ಕಿದರೂ—ಎಲ್ಲರು
ಶಿಕ್ಕಲಿ ಎಂದು ಸುಮ್ಮನಿರದೆ, ಶಿಕ್ಕಿದವರನ್ನು ಆ ಕ್ಷಣವೇ ಸಂಹರಿಸ ಬೇಕು.
ಸಾವಕಾಶದಿಂದ ಅವರ ಸ್ನೇಹಿತರು ಮೊದಲಾದವರನ್ನು ನಿಗ್ರಹಿಸಿ ಕೊಳ್ಳ
ಬಹುದು. ಬೇರು ಕಡಿದ ವೃಕ್ಷದ ಕೊನೆ ಕೊಂಬುಗಳು ತಮಗೆ ತಾವೇ ಒಣ
ಗಿ ಹೋಗುವ ರೀತಿಗೆ ಪರಪಕ್ಷ ಬಲ ದಿನ ದಿನಕ್ಕೂ ತಾನೇ ಸವೆದು ಹೋಗು
ವದು. ಅಣಿ ತಪ್ಪಿದ ವೇಳೆಯಲ್ಲಿ ಆಲೋಚನೆ ಮಾಡದೆ, ಸಾಹಸವನ್ನಾಗಲಿ
ಸಂಧಿಯನ್ನಾಗಲಿ ಪಲಾಯನವನ್ನಾಗಲಿ, ನಾಚಿಕೆಯ ಕೆಲಸವೆಂದು ಹೇಳದೆ,
ನಡಿಸ ಬೇಕು. ಸಮಸ್ತ ಜನಗಳಿಂದ ಹೊಗಳಿಸಿ ಕೊಳ್ಳುವ ನಿಮಿತ್ಯ ದಾನೋ
ಪಾಯದಿಂದ ಶತ್ರುಗಳನ್ನೂ ಇತರರನ್ನೂ ಸ್ವಾಧೀನಾ ಮಾಡುವದಕ್ಕೋಸ್ಕರ
ಧನ ವ್ರಯವನ್ನು ಮಾಡದೆ, ಸಾಹಸದಿಂದಲೇ ಸಾಧಿಸಿ ಕೊಳ್ಳ ಬೇಕು. ಶತ್ರು
ವಾದವನು ಪರಾಜಿತನಾಗಿ ಓಡಿ ಹೋಗಿ, ಇನ್ಯಾರನ್ನಾದರೂ ಆಶ್ರಯಿಸಿ, ಸಮ
ಯವನ್ನು ಸಾಧಿಸುತ್ತಾ ಇರುವದನ್ನು ತಿಳಿದು, ಎಂಥಾ ಬಲಿಷ್ಠನಾದರೂ ಮೈ
ಮರತಿರಬಾರದು. ತಾನೊಂದು ವೇಳೆ ಪರಾಜಿತನಾದರೆ, ತನಗೆ ಸಮಯ ಶಿಕ್ಕು
ವ ಪರ್ಯಂತರ ಯಜ್ಞಾ ಮಾಡುವವನ ಹಾಗೂ, ಜಟಾಜಿನ ವಲ್ಕಲಗಳನ್ನು ಧರಿಸಿ

ಕೊಂಡು, ಸರ್ವಸಂಗ ಪರಿತ್ಯಾಗಾ ಮಾಡಿದವನ ಹಾಗೂ, ಜನರನ್ನು ವಂಚಿಸುತ್ತಾ, ಸಮಯವನ್ನು ಸಾಧಿಸ ಬೇಕು. ಹೀಗೆ ಜನರನ್ನು ವಂಚಿಸುತ್ತಾ, ಸಮಯ ಶಿಕ್ಕಿದಾಗ, ತೋಳನು ಕುರೀ ಮಂದೆಯಲ್ಲಿ ಹೊಂಚಿ ಬೀಳುವ ಹಾಗೆ ತನ್ನ ಶತ್ರುವಿನ ಮೇಲೆ ಬಿದ್ದು, ಸಾಹಸವನ್ನು ಮಾಡ ಬೇಕು.

ಜನರು ಹಣ್ಣು ಕಾಯಿಗಳು ತುಂಬಿರುವ ಮರದ ಕೊನೆಯನ್ನು ಕೊಕ್ಕೆಯಿಂದ ಬೊಗ್ಗಿಸಿ, ಪಕ್ವಾಪಕ್ವವಾದವುಗಳನ್ನು ವಿಚಾರಿಸುವ ತೆರದಿಂದ ಶತ್ರುಗಳ ಒಳ ಹೊಕ್ಕು, ಬಲಾಬಲಗಳನ್ನು ವಿಚಾರಿಸಿ, ಅಬಲನಾಗಿ ಇರುವಾಗ, ಆತನನ್ನು ಕೊಲ್ಲ ಬೇಕು. ಉಪೇಕ್ಷೆಯನ್ನು ಮಾಡ ಕೂಡದು. ಮತ್ತು ತನಗೆ ಶತ್ರುವಾದವನು ತನಗೆ ಅಣಿಯಾಗದಿದ್ದರೆ, ಆತನನ್ನು ಅನುಸರಿಸಿ ಕೊಂಡು, ಸಮಯ ಬಂದಾಗ ತುಂಬಿದ ಗಡಿಗೆಯನ್ನು ಎತ್ತಿ ಹಾಕಿ ಚೂರು ಚೂರಾಗಿ ಒಡೆದು ಹಾಕುವ ಹಾಗೆ, ಶತ್ರುವನ್ನು ನಿಶ್ಶೇಷವಾಗಿ ಕೊಂದು ಹಾಕ ಬೇಕು. ಶತ್ರುವು ತನ್ನ ಕೈಗೆ ಶಿಕ್ಕಿದಾಗ, ಅವನು ಎಷ್ಟು ಪ್ರಿಯ ವಚನಗಳನ್ನು ಆಡಿದಾಗ್ಯೂ, ದಯ ತೋರಿಸದೆ, ಕೊಂದು ಹಾಕ ಬೇಕು.

ಸಾಮದಿಂದಾಗಲಿ, ದಂಡದಿಂದಾಗಲಿ, ದಾನದಿಂದಾಗಲಿ, ಭೇದದಿಂದಾಗಲಿ, ವಿಷ ಪ್ರಯೋಗಾದಿ ಕಪಟ ಕೃತ್ಯಗಳಿಂದಾಗಲಿ, ತನಗೆ ದಾಯಾದಿಗಳಾದವರನ್ನು ಕೊಂದು ಹಾಕ ಬೇಕೇ ಹೊರತಾಗಿ, ಅವರನ್ನು ನಿಲ್ಲಿಸ ಕೂಡದು ಎಂದು, ಹೇಳಿದ ಕಳಿಂಗನ ಮಾತನ್ನು ಕೇಳಿ—ಧೃತರಾಷ್ಟ್ರನು ಈ ಚತುರೋಪಾಯಗಳಿಂದ ಶತ್ರುಗಳನ್ನು ಜಯಿಸುವದು ಹ್ಯಾಗೆ? ಅದರ ರೀತಿಯನ್ನು ವಿಶದವಾಗಿ ತಿಳಿಯ ಪಡಿಸ ಬೇಕೆಂದು, ಕೇಳಿ ಕೊಳ್ಳಲು; ಆ ಕಳಿಂಗನು ಮತ್ತು ಹೇಳಿದನು—

ಎಲೈ, ಧೃತರಾಷ್ಟ್ರನೇ, ಈ ಅರ್ಥಕ್ಕೆ ಅನುಕೂಲವಾದ ಒಂದು ಇತಿಹಾಸ ಉಂಟು. ಅದನ್ನು ತಿಳಿಸುತ್ತಲಿದ್ದೇನೆ. ಒಂದು ವನದಲ್ಲಿ ಒಂದು ನರಿಯು ವಾಸಾ ಮಾಡಿ ಕೊಂಡು ಇರುವದು. ಒಂದು ಹುಲಿಯೂ, ಒಂದು ತೋಳವೂ, ಒಂದು ಕೀರವೂ, ಒಂದು ಹೆಗ್ಗಣವೂ, ಆ ನರಿಯೊಡನೆ ಸ್ನೇಹವನ್ನು ಮಾಡಿ ಕೊಂಡು ಇರುವವು. ಈ ಐದು ಜಂತುಗಳು ಒಂದು ದಿವಸದಲ್ಲಿ ಒಂದು ಸ್ಥೂಲ ಕಾಯವಾದ ಮೃಗವನ್ನು ನೋಡಿ, ಅದನ್ನು ಹಿಡಿದು ಕೊಲ್ಲ ಯತ್ನಾ ಮಾಡಿದರೂ, ಶಕ್ಯವಾಗದ್ದರಿಂದ ಆಲೋಚನೆಯನ್ನು ಮಾಡುತ್ತಿರಲು; ನರಿಯು ಹುಲಿ ಮೊದಲಾದ ಜಂತುಗಳನ್ನು ನೋಡಿ—ಈ ವನದಲ್ಲಿರುವ ಮೃಗವು ಯೌವನವೂ, ವೇಗವೂ, ಬಲವೂ, ಸೂಕ್ಷ್ಮತ್ವವೂ, ಉಳ್ಳದ್ದಾದ ಕಾರಣ, ನಾವು ಎಷ್ಟು ಪ್ರಯತ್ನಾ ಮಾಡಿದರೂ, ನಮ್ಮ ಕೈಗೆ ಶಿಕ್ಕದೆ ಓಡುತ್ತದೆ. ಇದು

ಒಂದು ಪ್ರದೇಶದಲ್ಲಿ ನಿದ್ದೆ ಹೋಗುವ ಸಮಯದಲ್ಲಿ, ಹೆಗ್ಗಣವು ಅದರ ಕಾಲುಗಳನ್ನು ತನ್ನ ಹಲ್ಲುಗಳಿಂದ ಕಡಿಯ ಬೇಕು. ಕಾಲುಗಳನ್ನು ಕಡಿದ ಮೇಲೆ, ಹೆಬ್ಬುಲಿಯು ಕೊಲ್ಲ ಬೇಕು. ಕೊಂದ ಮೇಲೆ ಅದಷ್ಟನ್ನೂ ನಾವೆಲ್ಲರು ಕೂಡಿ ಭಕ್ಷಿಸ ಬೇಕು ಎನಲು; ಹಾಗೆ ಆಗಲಿ ಎಂದು, ಹೆಗ್ಗಣವು ಆ ಮೃಗವು ನಿದ್ದೆ ಹೋಗುವ ಸಮಯದಲ್ಲಿ ಅದರ ಕಾಲುಗಳನ್ನು ಕಡಿಯಲು; ಹೆಬ್ಬುಲಿಯು ಅದನ್ನು ಕೊಲ್ಲಲು; ಆ ನರಿಯು ವ್ಯಾಘ್ರಾದಿಗಳನ್ನು ಕುರಿತು—ನೀವು ಸ್ನಾನವನ್ನು ಮಾಡಿ ಬನ್ನಿ; ಅಷ್ಟು ಪರ್ಯಂತರವು ನಾನು ಈ ಮೃಗವನ್ನು ಸಂರಕ್ಷಿಸಿ ಕೊಂಡಿರುತ್ತೇನೆ ಎನಲು; ಆ ಹುಲಿ ಮೊದಲಾದ ಜಂತುಗಳು, ಹಾಗೆ ಆಗಲೆಂದು, ನದೀ ತೀರಕ್ಕೆ ಹೋಗಲು; ಹುಲಿಯು ಮುಂಚಿತವಾಗಿ ಸ್ನಾನಾ ಮಾಡಿ ಬರಲು; ನರಿಯು ಮನಸ್ಸಿನಲ್ಲಿ ಖೇದವನ್ನು ತಂದು ಕೊಂಡು, ಚಿಂತಿಸುತ್ತಲಿರಲು; ಆ ಹುಲಿಯು ನರಿಯನ್ನು ನೋಡಿ—ಎಲೈ, ನರಿಯೇ, ನೀನು ಬುದ್ಧಿ ಸಂಪನ್ನನಾಗಿದ್ದರೂ, ಇಷ್ಟೇತಕ್ಕೆ ಚಿಂತಿಸುತ್ತಲಿದ್ದೀ? ನಾವೀ ಮೃಗವನ್ನು ಭಕ್ಷಿಸಿ ಕೊಂಡು, ಸುಖವಾಗಿರುವ ಎನಲು; ಆ ನರಿಯು—ಎಲೈ, ಹುಲಿರಾಯನೇ, ಹೆಗ್ಗಣವು ನಿನ್ನನ್ನು ದೂಷಿಸಿದ ವಿವರವನ್ನು ಹೇಳುತ್ತೇನೆ; ಕೇಳು. ಏನಂದರೆ—ನಾನು ಆ ಮೃಗದ ಕಾಲುಗಳನ್ನು ಕಡಿಯಲು, ಅದು ಸತ್ತು ಹೋಗಿ ಹೆಬ್ಬುಲಿಗೆ ಜೀವನವಾಯಿತಲ್ಲದೆ, ಈ ಹುಲಿಯ ಸಾಮರ್ಥ್ಯವೇನು? ಬರೀ ಹೆಮ್ಮೆ ಯಾತಕ್ಕೆ? ಎಂದು, ಇನ್ನು ಬಹು ಪ್ರಕಾರವಾಗಿ ದೂಷಿಸಿತು. ನಾನು ನಿನ್ನನ್ನು ದೂಷಿಸಿದ್ದೇ ನನ್ನನ್ನು ದೂಷಿಸಿದ ಹಾಗೆ ಎಣಿಸಿ, ಈ ಮಾಂಸವನ್ನು ಮುಟ್ಟಲೊಲ್ಲೆನು, ಎನಲು; ಹುಲಿಯು—ಎಲೈ, ನರಿಯೇ, ನೀನು ಪರಮ ಮಿತ್ರನಾದ್ದರಿಂದ ನಾನು ಈ ಮಾಂಸವನ್ನು ಭಕ್ಷಿಸುವದಕ್ಕೆ ಮೊದಲೇ ಇದನ್ನು ನನಗೆ ತಿಳುಹಿಸಿದೆ; ಒಳ್ಳೇದಾಯಿತು. ನಾನು ಬೇಕೆಂದರೆ ವನದಲ್ಲಿ ಎಷ್ಟು ಮೃಗಗಳಿಲ್ಲ? ಅವನ್ನು ಕೊಂದು, ಭಕ್ಷಿಸುವೆನೇ ಹೊರತಾಗಿ, ಇದನ್ನು ನಾನು ಮುಟ್ಟುವದಿಲ್ಲ ಎಂದು ಹೇಳಿ, ಯಥೇಚ್ಛವಾಗಿ ಹೊರಟು ಹೋಯಿತು. ಅನಂತರ ಹೆಗ್ಗಣವು ಬರಲು; ನರಿಯು ಅದನ್ನು ನೋಡಿ—ಎಲೈ, ಹೆಗ್ಗಣವೇ, ಆ ಕೀರವು ನನ್ನ ಸಂಗಡ—ಈ ಮೃಗ ಮಾಂಸವು ಕಠಿಣವಾದ್ದರಿಂದ ನನಗೆ ರುಚಿಸದು. ಆದರೆ ಹೆಗ್ಗಣದ ಮಾಂಸವು ಮೃದುವಾದ್ದರಿಂದ ನೀನು ಸಮ್ಮತಿಸಿದರೆ, ಅದನ್ನು ಭಕ್ಷಿಸುತ್ತೇನೆ ಎಂದು ಹೇಳಿತು, ಎನಲು; ಹೆಗ್ಗಣವು ಆ ಮಾತನ್ನು ಕೇಳಿ, ಭಯ ಪಟ್ಟು, ಬಿಲವನ್ನು ಹೊಕ್ಕೊಂಡಿತು. ತೋಳವು ಬಂದ ಮೇಲೆ, ನರಿಯು ಅದನ್ನು ಕುರಿತು—ಎಲೈ, ತೋಳನೇ,

ಹೆಬ್ಬುಲಿಯು ಕುಟುಂಬ ಸಮೇತವಾಗಿ ಬರುತ್ತದೆ; ನಮಗೆ ಸೌಖ್ಯವನ್ನು ಮಾಡುವ ರೀತಿ ತೋರುವದಿಲ್ಲ. ನಿನಗೆ ತೋರಿದ ರೀತಿಗೆ ನಡೆದುಕೋ ಎನಲು; ತೋಳವು ಭಯ ಪಟ್ಟು, ಯಥೇಷ್ಟವಾಗಿ ಹೋಗಲು; ಆ ನರಿಯು ಕೀರ ಬಂದ ಮೇಲೆ—ಎಲೈ, ಕೀರನೇ, ನನ್ನ ಬಾಹು ಬಲದಿಂದ ಹುಲಿ ಮೊದಲಾದ ಸಮಸ್ತ ಜಂತುಗಳು ಓಡಿ ಹೋದವು. ನೀನು ಸಮರ್ಥನಾದರೆ ನನ್ನೊಡನೆ ಯುದ್ಧವನ್ನು ಮಾಡಿ, ಜಯಿಸಿ, ಈ ಮಾಂಸವನ್ನು ಭಕ್ಷಿಸು ಎನಲು; ಆ ಕೀರವು—ಹುಲಿಯೂ ತೋಳವೂ ಬುದ್ಧಿಯುಳ್ಳ ಹೆಗ್ಗಣವೂ ನಿನಗೆ ಭಯ ಪಟ್ಟು, ಓಡಿ ಹೋದ್ದರಿಂದ ನೀನು ವೀರಾಗ್ರೇಸರನು; ನಿನ್ನೊಡನೆ ಹೋರುವ ದಕ್ಕೆ ನಾನು ಸಮರ್ಥನಲ್ಲ ಎಂದು ಹೇಳಿ, ಓಡಿ ಹೋಯಿತು. ಈ ಪ್ರಕಾರ ತನ್ನ ಉಪಾಯ ಬಲದಿಂದ ಆ ಮೃಗಗಳನ್ನೆಲ್ಲಾ ದಾಟಿಸಿ, ನರಿಯು ತಾನೊಂದೇ ಆ ಮೃಗ ಮಾಂಸವನ್ನು ಭಕ್ಷಿಸಿತು.

ಅರಸಾದವನು ಭಯಗ್ರಸ್ತನಾದವನಿಗೆ ಭಯವನ್ನು ತೋರಿಸುತ್ತಾ, ಶೂರ ನಾದವನಿಗೆ ಕೈ ಮುಗಿಯುತ್ತಾ, ಲುಬ್ಧನಾದವನಿಗೆ—ಹಣ ಕೊಡುತ್ತೇನೆಂದು ಆಶೆ ತೋರಿಸುತ್ತಾ, ಸಮಾನ ಬಲಶಾಲಿಯೊಡನೆ ಸ್ನೇಹವನ್ನು ಬಳಸುತ್ತಾ, ತನ್ನ ಅರ್ಥಕ್ಕೆ ದ್ರೋಹವನ್ನು ಎಣಿಸಿದವನು ಮಗನಾದರೂ, ಸ್ನೇಹಿತನಾದರೂ, ಅಣ್ಣನಾದರೂ, ತಮ್ಮನಾದರೂ, ತಂದೆಯಾದರೂ, ಗುರುವಾದರೂ, ಅವನನ್ನು ಮುಖಾ ನೋಡದೆ, ಸಂಹರಿಸ ಬೇಕು.

ಶತ್ರುವಿನೊಡನೆ ಸಂಧಿ ಮಾಡುವಾಗ, ಆಣೆಯನ್ನು ಇಟ್ಟು ಕೊಂಡಾದರೂ ನಂಬಿಗೆಯನ್ನು ಕೊಟ್ಟಾದರೂ, ಆತನನ್ನು ಕೊಂದು ಹಾಕ ಬೇಕು. ಅದರಿಂದ ದೋಷವಿಲ್ಲ ಎಂದು, ಭಾರ್ಗವನು ಹೇಳಿ ಇದ್ದಾನೆ. ತನಗೆ ಭಯ ಬರು ವ ಪರ್ಯಂತರವೂ ಭಯ ಪಟ್ಟಿರುವವನೋಪಾದಿಯಲ್ಲಿ ಇದ್ದು ಕೊಂಡು, ಭಯ ಬಂದಾಗ ನಿರ್ಭೀತನ ಹಾಗೆ ಕಾಣಿಸ ಬೇಕು. ಶತ್ರುವಿಗೆ ಆಪತ್ತು ಬಂದಾಗ ದಯೆಯಿಂದ ಬಿಟ್ಟು ಬಿಟ್ಟರೆ, ಆತನು ಮೃತ್ಯು ಪ್ರಾಯನಾಗುವನು.

ಮನಸ್ಸಿನಲ್ಲಿ ಕೋಪವಿದ್ದರೂ, ಸ್ನೇಹಿತನೋಪಾದಿಯಲ್ಲಿ ನಗುತ್ತಾ, ನಗು ತ್ತಾ, ಮಾತಾಡುತ್ತಾ, ತನ್ನ ಕೋಪವು ಪರರಿಗೆ ತಿಳಿಯದ ಹಾಗೆ ಇರ ಬೇಕು. ಕೊಲ್ಲುವದಕ್ಕೆ ಎಣಿಸುವಾಗಲೂ, ಕೊಲ್ಲುವಾಗಲೂ, ಕೊಂದ ಮೇಲೆಯೂ, ಕ್ಲೇಶದಿಂದ ತಪಿಸುವವನೋಪಾದಿಯಲ್ಲಿ ಪ್ರಿಯವಾಗಿಯೇ ಮಾತಾಡುತ್ತಿರ ಬೇಕು. ಶತ್ರುವಾದವನಿಗೆ ಒಳ್ಳೇ ಮಾತುಗಳನ್ನಾಡಿ, ಬೇಕಾದ ವಸ್ತುಗಳನ್ನು ಕೊಟ್ಟು, ಉಪಚಾರಗಳನ್ನು ಮಾಡಿ, ನಂಬಿಗೆಯನ್ನು ಕೊಟ್ಟು, ಸ್ವಲ್ಪ ಅಣಿ

ತಪ್ಪಿದ ವೇಳೆಯಲ್ಲಿ ಅವನನ್ನು ಕೊಂದು ಹಾಕ ಬೇಕು. ಎಷ್ಟು ದ್ವೇಷ ಮನಸ್ಸಿನಲ್ಲಿದ್ದರೂ ಧರ್ಮ ಮಾರ್ಗವನ್ನೇ ಅನುಸರಿಸಿ, ನಟಿಸುತ್ತಾ ಇದ್ದರೆ, ಕಪ್ಪು ಮೇಘಗಳು ಸೂರ್ಯನ ಪ್ರಕಾಶದಿಂದ ಮರೆಯಾಗುವಂತೆ ಆತನ ದೋಷಗಳು ಮರೆಯಾಗಿ ಹೋಗುವವು. ಕೊಲ್ಲ ತಕ್ಕಂಥ ಶತ್ರುವು ಏನಾದರೂ ಒಂದು ವಿಧದಿಂದ ತಪ್ಪಿಸಿ ಕೊಂಡರೆ, ಅವನ ಮನೆಗೆ ಬೆಂಕಿಯನ್ನು ಹಾಕಿಯಾದರೂ, ಯಾರಾದರೂ ಭಿಕ್ಷುಕರ ಮುಖಾಂತ್ರದಿಂದ ವಿಷವನ್ನು ಹಾಕಿಸಿಯಾದರೂ, ಅಗತ್ಯವಾಗಿ ಕೊಂದು ಹಾಕ ಬೇಕು. ಶತ್ರುವು ಏನಾದರೂ ಒಂದು ದುರಾಲೋಚನೆಯಿಂದ ತನ್ನ ಬಳಿಗೆ ಬಂದರೆ, ಅವನಿಗೆ ಪ್ರತ್ಯುತ್ಥಾನಾಭಿ ವಂದನೆಗಳನ್ನು ಮಾಡಿ, ಬೇಕಾದ ವಸ್ತುಗಳನ್ನು ಕೊಟ್ಟು, ಸ್ನೇಹ ಭಾವದ ನಂಬಿಕೆಯನ್ನು ಉಂಟು ಮಾಡಿ, ಸಮಯವರಿತು ಕೊಂದು ಹಾಕ ಬೇಕು.

ವಿಶ್ವಾಸಯೋಗ್ಯನಾಗಿರುವಂಥವನಲ್ಲಿಯೂ ತಾನು ಪೂರ್ಣ ವಿಶ್ವಾಸವಿಡ ಕೂಡದು. ವಿಶ್ವಾಸ ಯೋಗ್ಯನಲ್ಲದವನನ್ನು ಹತ್ರಕ್ಕೆ ಶೇರಿಸ ಕೂಡದು. ಯಾವ ರಹಸ್ಯವಾದರೂ ತಾನೊಬ್ಬನೇ ವಿಚಾರಿಸಿ ನಡಿಸ ಬೇಕೇ ಹೊರತು, ಮತ್ತೊಬ್ಬರನ್ನು ಶೇರಿಸ ಕೂಡದು. ಒಬ್ಬರಲ್ಲಿಯೂ ವಿಶ್ವಾಸವಿಡದೆ ಹೋದರೆ, ತನ್ನ ಕಾರ್ಯ ಕೈ ಕೂಡುವದು. ಹ್ಯಾಗೆಂದರೆ, ಸ್ವರಾಷ್ಟ್ರದಲ್ಲಾದರೂ, ಪರರಾಷ್ಟ್ರದಲ್ಲಾದರೂ, ಬದಲು ವೇಷವನ್ನು ಧರಿಸಿ ಕೊಂಡು, ಜೋಗಿ, ಜಂಗಮ, ದಾಸೈಯ್ಯಾ, ಇವರ ಹಾಗೆ ತೋರ್ಪಡಿಸುವ ಬುದ್ಧಿವಂತರಾದ ಗೂಢಚಾರರನ್ನು ನೇಮಿಸಿ, ಉದ್ಯಾನ ವನಗಳಲ್ಲಿಯೂ, ಜಗತೀ ಕಟ್ಟೆಗಳಲ್ಲಿಯೂ, ದೇವಾಲಯಗಳಲ್ಲಿಯೂ, ಅರವಟ್ಟಿಗೆಗಳಲ್ಲಿಯೂ, ಬಾಹ್ಯ ಪ್ರದೇಶಗಳಲ್ಲಿಯೂ, ಹಜಾರಗಳಲ್ಲಿಯೂ, ಬ್ರಾಹ್ಮಣರ ಮನೆಗಳಲ್ಲಿಯೂ, ಜೂಜಾಡುವ ಸ್ಥಳಗಳಲ್ಲಿಯೂ, ಪರ್ವತ ವನ ಪ್ರದೇಶಗಳಲ್ಲಿಯೂ, ಜಾತ್ರೆಗಳಲ್ಲಿಯೂ, ಪುಣ್ಯ ನದೀ ತೀರಗಳಲ್ಲಿಯೂ, ಮಂತ್ರಿಗಳಲ್ಲಿಯೂ, ಪುರೋಹಿತರಲ್ಲಿಯೂ, ಸರ್ವಾಧಿಕಾರಿಗಳಲ್ಲಿಯೂ, ದಳಪತಿಗಳಲ್ಲಿಯೂ, ಬಾಗಲು ಕಾಯುವವರಲ್ಲಿಯೂ, ಅಂತಃಪುರ ಸಂಚಾರಿಗಳಲ್ಲಿಯೂ, ಶೆರೇ ಮನೇ ಅಧಿಕಾರಿಗಳಲ್ಲಿಯೂ, ಬೊಕ್ಕಸದ ಗುರಿಕಾರರಲ್ಲಿಯೂ, ಧರ್ಮಾನುಸಾರವಾಗಿ ನಡೆಯುವ ವಿದ್ವಾಂಸರ ಸಮೂಹದಲ್ಲಿಯೂ ಅವಸರದವರಲ್ಲಿಯೂ, ಚಾವಡಿ ಅಧಿಕಾರಿಗಳಲ್ಲಿಯೂ, ತಳವಾರರಲ್ಲಿಯೂ, ದುರ್ಗದ ಠಾಣೇದವರಲ್ಲಿಯೂ, ಉಕ್ಕಡದವರಲ್ಲಿಯೂ, ಇನ್ನು ಇವೇ ಮುಂತಾದ ಸ್ಥಳಗಳಲ್ಲಿ ನಡೆಯುವ ಸ್ವರಾಷ್ಟ್ರ ಪರರಾಷ್ಟ್ರ ವಿಚಾರಗಳನ್ನು ತಿಳಿಯ ಬೇಕು. ತನಗಿಂತ ಬಲಿಷ್ಠನಾದವನು ತನ್ನಿಂದ ಧನವನ್ನೇ

ನಾದರೂ ಅಪೇಕ್ಷಿಸಿದರೆ, ವೃಕ್ಷವು ಪುಷ್ಪಿಸಿ, ಫಲಾಶೆಯನ್ನು ತೋರಿಸುತ್ತಾ, ಫಲಿಸದೆ ಇರುವ ಹಾಗೂ—ಫಲಿಸಿದರೂ ಹತ್ತುವದಕ್ಕಾಗದೆ ಇರುವ ಹಾಗೂ—ಹತ್ತಿದರೂ ಕಾಯಾಗಿರುವ ಹಾಗೂ—ಒಂದು ವೇಳೆ ಹಣ್ಣಾಗಿದ್ದರೂ, ಭಕ್ಷಿಸಿದರೆ ಜೀರ್ಣಕ್ಕೆ ಬಾರದೆ ಇರುವ ಹಾಗೂ—ಆ ಶತ್ರುವಿಗೆ ಕೈ ಮುಗಿದು, ವಿನಯುವನ್ನು ನಟಿಸುತ್ತಾ, ಆತನನ್ನು ಕೊಲ್ಲುವ ಸಮಯ ಬರುವ ಪರ್ಯಂತರವೂ, ಹಣಾ ಕೊಡುತ್ತೇನೆಂದು ಭಾಷೆಯನ್ನು ಮಾಡಿ ಕೊಟ್ಟು, ಒಂದು ವೇಳೆ ಹಣವಿಲ್ಲದೆ ಹೋದರೆ, ಇದ್ದಷ್ಟು ಕೊಡುವವನ ಹಾಗೆ ಒಳ್ಳೇ ಮಾತುಗಳನ್ನಾಡುತ್ತಾ, ತನಗೆ ಹಣ ಕೈ ಶೇರಿದ ಮೇಲೆ, ಪ್ರಭುತ್ವದ ಮೋಡಿಯಿಂದ ಆತನು ಬಂದು ಕೇಳುವದಕ್ಕೆ ಸಮಯ ಕೊಡದೆ, ಸಮಯುವನ್ನು ಸಾಧಿಸಿ, ಕೇಳಿದರೆ, ಕೊಟ್ಟು ಬಿಡುವವನ ಹಾಗೆ ಅಭಿನೈಸಿ, ಕೊಡದೆ, ಕಾಲಹರಣಾ ಮಾಡುತ್ತಾ, ಆತನನ್ನು ಕಡೆಗೂ ವಂಚಿಸ ಬೇಕು.

ಧರ್ಮಾರ್ಥ ಕಾಮುಗಳಲ್ಲಿ ಒಂದೊಂದೇ ಆಚರಿಸಿದರೆ, ಪರಸ್ಪರ ವಿರೋಧ ಬರುವದರಿಂದ ಮೂರು ಸಮವಾಗಿಯೇ ಆಚರಿಸ ಬೇಕು. ಪುರುಷಾರ್ಥವನ್ನು ಬಯುಸುವಂಥ ಅರಸು ಗರ್ವವನ್ನು ಬಿಟ್ಟು, ಈರ್ಷ್ಯಾಸೂಯೆಗಳಿಲ್ಲದೆ ಪ್ರಿಯ ವಚನಗಳನ್ನೇ ಆಡುತ್ತಾ, ಶುದ್ಧಾಂತಃಕರಣನಾಗಿ, ಬ್ರಾಹ್ಮಣರೊಡನೆ ಆಲೋಚನೆಯನ್ನು ಮಾಡಿ, ಪುಣ್ಯ ಕರ್ಮವಾಗಲಿ ಪಾಪ ಕರ್ಮವಾಗಲಿ ಮಾಡಿ, ಐಶ್ವರ್ಯವನ್ನು ಹೊಂದಿ, ಆ ಮೇಲೆ ಪಾಪ ನಿವಾರಣಾರ್ಥವಾಗಿ ಧರ್ಮವನ್ನು ಮಾಡ ಬೇಕು. ಯಾರಿಗಾದರೂ ಅಶ್ರೇಯಸ್ಸನ್ನು ತನ್ನ ಕಾರ್ಯಕ್ಕೋಸ್ಕರ ಮಾಡಿದರೆ, ಆ ಮೇಲೆ ಅವರ ಬಳಿಗೆ ಹೋಗಿ, ಬಹಳ ಪಶ್ಚಾತ್ತಾಪ ಪಟ್ಟು—ಕ್ಷಮಿಸ ಬೇಕೆಂದು, ಸಮಾಧಾನಾ ಮಾಡ ಬೇಕು. ಮೂಢನಾದವನಿಗೆ ಆಶೆಯನ್ನು ಹುಟ್ಟಿಸಿ, ತನ್ನ ಸ್ವಾಧೀನಾ ಮಾಡಿ ಕೊಳ್ಳ ಬೇಕು. ಬುದ್ಧಿವಂತನಾದವನನ್ನು ಸಮಯೋಚಿತ ದಾನಗಳಿಂದ ವಶಾ ಮಾಡಿ ಕೊಳ್ಳ ಬೇಕು. ಶತ್ರುವಿನೊಡನೆ ಸಮಾಧಾನಾ ಮಾಡಿ ಕೊಂಡೆನಲ್ಲಾ ಎಂದು ಮೈ ಮರತಿರುವ ಪುರುಷನು ವೃಕ್ಷದ ಕೊನೆಯನ್ನು ಹಿಡಿದು ಕೊಂಡು, ನಿದ್ರೆ ಮಾಡುವವನ ಹಾಗೆ ನಷ್ಟವಾಗುವನು.

ಮತ್ತು ಮಂತ್ರಾಲೋಚನೆಯನ್ನು ಮಾಡುವಂಥವನು ಸಾಧಾಗ್ರದಲ್ಲಾದರೂ, ಮೇಲ್ಮಚ್ಚಿನ ಮೇಲಾದರೂ, ನಿರ್ಜನವಾದ ವನದಲ್ಲಾದರೂ, ಪರ್ವತಾಗ್ರದಲ್ಲಾದರೂ, ತನ್ನ ಮುಖ್ಯರಾದ ಆಪ್ತರೊಡನೆ ಕೂಡಿ ಕೊಂಡು, ಆ ಸ್ಥಳಗಳಲ್ಲಿ ಚಿಕ್ಕ ಮಕ್ಕಳು, ಮೂಗರು, ಗಿಣಿ, ಗೊರಗ, ಇವು ಮೊದಲಾದವನ್ನೆಲ್ಲಾ

ಹೊರಡಿಸಿ ಬಿಟ್ಟು, ನಾಲ್ಕು ದಿಕ್ಕುಗಳನ್ನು ನೋಡಿ, ಆಲೋಚನೆಯನ್ನು ಮಾಡ ಬೇಕು. ಆಲೋಚನೆಗೆ ಇಬ್ಬರೇ ಹೊರತು, ಆರು ಕಿವಿಯಾದರೆ ಕಾರ್ಯ ಕೆಡುವದು. ಶತ್ರುಗಳ ಬಲವು ಬರದಿಂದ ಬಡವಾಗಿರುವ ಕಾಲದಲ್ಲಿಯೂ, ವ್ಯಾಧಿಯಿಂದ ಪೀಡಿತವಾಗಿರುವ ಸಮಯದಲ್ಲಿಯೂ, ಗ್ರಹಾದಿಗಳಿಂದ ತೊಂದರೆ ಪಡುತ್ತಿರುವ ವೇಳೆಯಲ್ಲಿಯೂ, ದೂರ ಪ್ರಯಾಣದಿಂದ ಕಂಗೆಟ್ಟಿರುವ ವೇಳೆಯಲ್ಲಿಯೂ, ಆ ಶತ್ರುವನ್ನೂ ಆತನ ಬಲವನ್ನೂ ಹೋಗಿ ಸಂಹರಿಸ ಬೇಕು. ಶೀಘ್ರವಾಗಿ ಆಗ ತಕ್ಕಂಥ ಕಾರ್ಯವನ್ನು ತನ್ನ ಬುದ್ಧಿಯಿಂದಲೇ ಗ್ರಹಿಸಿ ನಡಿಸ ಬೇಕು. ವಿಳಂಬವಾಗಿ ಆಗುವಂಥ ಕಾರ್ಯಕ್ಕೆ ಭಯ ಬಂದು ತಟ್ಟಿದರೆ, ತಾನು ಭಯ ಪಡದವನೋಪಾದಿಯಲ್ಲಿ ಪ್ರತಿ ಕ್ರಿಯೆಯನ್ನು ಮಾಡ ಬೇಕು. ಭಯ ಬಂದಾಗ ಧೀರನಾಗಿ ನಿರ್ವಹಿಸ ಬೇಕು. ಬುದ್ಧಿಮೋಸದಿಂದ ಮೀರಿ ಹೋದ ಕಾರ್ಯಕ್ಕೆ ಯೋಚಿಸದೆ, ಮುಂದೆ ಬರುವಂಥ ಕಾರ್ಯವನ್ನು ಮೋಸ ಬೀಳದ ಹಾಗೆ ನಡಿಸ ಬೇಕು. ಅಜ್ಞಾನದಿಂದ ಶತ್ರುವನ್ನು ಉಪೇಕ್ಷಿಸಿ, ನಿಗ್ರಹಿಸದಿದ್ದರೆ, ಕಾಡಿನಲ್ಲಿ ಬಿದ್ದ ಸಣ್ಣ ಕಿಡಿಯೋಪಾದಿಯಲ್ಲಿ ಆ ಶತ್ರು ಪ್ರಬಲನಾಗಿ, ಬಹು ಅನರ್ಥಕ್ಕೆ ಹೇತುವಾಗುವನು.

ತನಗಿಂತ ಅಧಿಕನಾಗಿರುವ ಶತ್ರುವಿನೊಡನೆ ಸಂಧಿ ಮಾಡಿ ಕೊಳ್ಳುವಾಗ, ಆತನಿಗೆ—ಬೇಕಾದಷ್ಟು ದ್ರವ್ಯವನ್ನು ಕೊಡುತ್ತೇನೆಂದು ಆಶೆಯನ್ನು ತೋರಿಸಿ, ಅದು ಕೊಡುವದಕ್ಕೆ ಬಹು ಕಾಲ ಗಡುಬ ಕಟ್ಟಿ ಕೊಳ್ಳ ಬೇಕು. ಆ ಗಡುಬ ಸಮೀಪಿಸಿದರೆ, ಅದಕ್ಕೊಂದು ವಿಘ್ನವನ್ನು ಕಲ್ಪಿಸ ಬೇಕು. ಆ ವಿಘ್ನಕ್ಕೆ ಒಂದು ನಿಮಿತ್ತವನ್ನು ಕಲ್ಪಿಸ ಬೇಕು. ಆ ನಿಮಿತ್ತಕ್ಕೆ ಒಂದು ಆವಶ್ಯಕತ್ವವನ್ನು ಉಂಟು ಮಾಡ ಬೇಕು. ಉಕ್ಕಿನಿಂದ ಮಾಡಲ್ಪಟ್ಟಿದ್ದಾಗಿಯೂ, ಸಾಣೆಯಿಂದ ಹರತವಾಗಿಯೂ, ಒರೆಯಲ್ಲಿ ಮರೆಯಾಗಿಯೂ, ಇರುವ ಕತ್ತಿಯು ಸರ್ವಾಂಗ ರೋಮಗಳನ್ನು ಹ್ಯಾಗೆ ಕತ್ತರಿಸುತ್ತಲಿದೆಯೋ, ಹಾಗೆಯೇ ಶತ್ರುವಿನ ಸಮಯವನ್ನು ಸಾಧಿಸಿ ಕೊಂಡು, ಕರ್ಕಶ ಹೃದಯನಾಗಿ, ದಯಾ ರಹಿತನಾಗಿ, ಒಬ್ಬರಿಗೂ ತನ್ನ ಹೃದಯವನ್ನು ತಿಳಿಸದೆ ಇರುತ್ತಾ, ಹೊಂಚಿ ಕೊಂಡಿದ್ದು, ಕೊಂದು ಹಾಕ ಬೇಕು. ಆದ್ದರಿಂದ, ಎಲೈ, ಧೃತರಾಷ್ಟ್ರರಾಯನೇ, ಪಾಂಡವರು ಬಲಪರಾಕ್ರಮ ಶಾಲಿಗಳಾಗಿಯೂ, ದಾಯಾದಿಗಳಾಗಿಯೂ ಇರುವದರಿಂದ ಅವರ ಭಯ ತಪ್ಪಿಸಿ ಕೊಳ್ಳುವಂಥ ಕೃತ್ಯವನ್ನು ಮಾಡಿದರೆ, ನೀನು ಸುಖಿಯಾಗಿ ನಿನ್ನ ಮಕ್ಕಳೊಡನೆ ಸುಖವಾಗಿ ಬದುಕುತ್ತೀ ಎಂದು ಹೇಳಿ, ಕಳಿಂಗನು ತನ್ನ ಮನೆಗೆ ಹೊರಟು ಹೋದನು.

## 59. Duryodhana attempts the destruction of the Pandus by burning them in a lac built house. They escape.

### ೫೯. ದುರ್ಯೋಧನನು ಅರಗಿನ ಮನೆಯಲ್ಲಿ ಪಾಂಡವರನ್ನು ಸುಡ ಪ್ರಯತ್ನ ಮಾಡಲು, ಅವರು ತಪ್ಪಿಸಿ ಕೊಂಡು ಹೋದ ಕಥೆ.

ಆ ಬಳಿಕ ಕರ್ಣ್ಣನೂ, ದುಶ್ಶಾಸನನೂ, ಶಕುನಿಯೂ, ಕೌರವನೂ, ಇವರೆಲ್ಲರು ಕಳಿಂಗನ ನೀತಿಯನ್ನು ವಿಸ್ತಾರವಾಗಿ ಕೇಳಿದ ಧೃತರಾಷ್ಟ್ರನ ಬಳಿಗೆ ಬಂದು,—ಎಲೈ, ರಾಯನೇ, ಈ ಪಾಂಡವರು ಅತ್ಯಂತ ಬಲಶಾಲಿಗಳಾದ್ದರಿಂದ ಇವರನ್ನು ಏನಾದರೂ ಒಂದು ಉಪಾಯದಿಂದ ಕೊಲ್ಲ ಬೇಕೆನಲು; ಆ ರಾಯನು,—ಎಲೈ, ಕೌರವಾದಿಗಳಿರಾ, ಆ ಪಾಂಡವರು ನಿಮಗೆ ಏನು ಅಪಕಾರ ಮಾಡಿದ್ದಾರೆ? ಅವರ ತಂದೆಯಾದ ಪಾಂಡು ರಾಯನು ತಾನು ಮಹಾ ಬಲ ಪರಾಕ್ರಮಶಾಲಿಯಾದರೂ, ಜಾತ್ಯಂಧನಾದ ನನಗೆ ಪಟ್ಟವನ್ನು ಕಟ್ಟಿ, ತಾನು ನನಗೆ ಸಹಾಯ ಮಾಡಿ ಕೊಂಡಿದ್ದು, ಪರಲೋಕ ಗತನಾದನು. ಆತ ಮಾಡಿದ ಉಪಕಾರವನ್ನು ನಾನೆಂದಿಗೆ ಮರತೇನು? ನಾನು ಪಾಂಡವರಲ್ಲಿ ಲೇಶವೂ ದ್ವೇಷ ಎಣಿಸ ತಕ್ಕವನಲ್ಲ. ನಿಮ್ಮ ಮನ ಬಂದಂತೆ ನಡಿಸ ಬಹುದು ಎನಲು; ಅದಕ್ಕವರು,—ಎಲೈ, ರಾಯನೇ, ಈಗ ವಾರಣಾವತ ಪಟ್ಣದಲ್ಲಿ ಮಹಾ ದೇವನ ಉತ್ಸವ ನಡೆಯುತ್ತದೆ. ಆ ಉತ್ಸವದ ಸೇವೆಗೆಂದು ಆ ಪಾಂಡವರನ್ನು ಅಲ್ಲಿಗೆ ಕಳುಹಿಸಿದರೆ, ಅವರು ಹಾಗೆ ಹೊರಟು ಹೋದರೆ, ನಮ್ಮ ಕೆಲಸ ಕೈಗೂಡುವದೆಂದು ಹೇಳಲು; ಆ ರಾಯನು ಪಾಂಡವರನ್ನು ಕರೇ ಕಳುಹಿಸಿ,—ಎಲೈ, ಮಕ್ಕಳಿರಾ, ಈಗ ನೀವು ಸಕಲ ಶಾಸ್ತ್ರಜ್ಞರಾಗಿಯೂ, ಅಸ್ತ್ರ ವಿದ್ಯಾ ಪ್ರವೀಣರಾಗಿಯೂ, ಕಾರ್ಯ ನಿರ್ವಾಹಕರಾಗಿಯೂ ಇದ್ದೀರಿ. ಈಗ ವಾರಣಾವತ ಪಟ್ಣದಲ್ಲಿ ಮಹಾ ದೇವೋತ್ಸವ ಅತಿ ಸಂಭ್ರಮದಿಂದ ನಡೆಯ ಬೇಕಾಗಿ ಇದೆ. ಆದ್ದರಿಂದ ನೀವೆಲ್ಲರು ಅಲ್ಲಿಗೆ ಹೋಗಿ, ಆ ಪುರ ಜನಗಳನ್ನು ದಾನ ಮಾನಾದಿಗಳಿಂದ ತೃಪ್ತಿ ಪಡಿಸಿ, ಖ್ಯಾತಿಯನ್ನು ಪಡೆದು, ನಿಮ್ಮ ಇಷ್ಟವಿದ್ದರೆ, ಅಲ್ಲಿ ಕೆಲವು ದಿವಸಗಳು ಇರ ಬಹುದು. ಇಷ್ಟರ ಮೇಲೆ ನಿಮ್ಮ ಮಾನಸ್ಸು ಬಂದಂತೆ ಮಾಡ ಬಹುದು ಎನಲು; ಆ ಅಂಥ ನೃಪತಿಯ ಅಭಿಪ್ರಾಯವನ್ನು ತಿಳಿದು, ಧರ್ಮರಾಯನು ತನಗಿನ್ನ್ಯಾರೂ ಸಹಾಯಕರಿಲ್ಲದ ಕಾರಣ, ಹಸ್ತಿನಾವತೀ ಪಟ್ಣವನ್ನು ಬಿಟ್ಟು ಹೋಗುವದಕ್ಕೆ ಸಮ್ಮತಿಸಿ, ಭೀಷ್ಮಾದಿಗಳೆಡೆಗೆ ಹೋಗಿ,—ನಾವು ತಂದೆಯ ಅಪ್ಪಣೆಯ ಪ್ರಕಾರ ವಾರಣಾವತ ಪಟ್ಣಕ್ಕೆ ಹೋಗುತ್ತೇವೆ. ನಮ್ಮನ್ನು ಹರಸಿ ಕಳುಹಿಸ ಬೇಕೆಂದು, ನಮಸ್ಕಾರಾ ಮಾಡಲು;

ಅವರೆಲ್ಲರು ಪಾಂಡವರನ್ನು ಬಿಟ್ಟಿರುವದಕ್ಕೆ ಮನಸ್ಸು ಒಡಂಬಡದೆ, ಕಂಬನಿಗಳನ್ನು ತುಂಬುತ್ತಾ, ಅವರನ್ನು ದಾರಿ ಕಳುಹಿಸುವದಕ್ಕೆ ಅವರ ಸಂಗಡಲೇ ಹೊರಟರು. ಮತ್ತು ಪೌರಜನಗಳೆಲ್ಲಾ ಪಾಂಡವರ ಮೇಲಣ ಪ್ರೀತಿಯಿಂದ ಅವರ ಹಿಂದೆ ಹೊರಟರು. ಹೀಗೆ ಪಾಂಡವರು ಹಸ್ತಿನಾವತೀ ಪಟ್ಣವನ್ನು ಬಿಟ್ಟು, ತಮ್ಮ ಹಿಂದೆ ಬರುವ ಪೌರಜನಗಳನ್ನೆಲ್ಲಾ ಹಿಂತಿರಿಗಿ ಹೋಗುವಂತೆ ಬೇಡಿ ಕೊಳ್ಳುತ್ತಿದ್ದರು.

ಇತ್ತಲಾ ಕ್ರೂರ ಕರ್ಮಿಗಳಾದ ಕೌರವರು ಕುಂತೀ ಸಮೇತರಾದ ಪಾಂಡವರನ್ನು ದಹಿಸ ಬೇಕೆಂದು ಆಲೋಚನೆಯನ್ನು ಮಾಡಿ, ಪುರೋಚನನೆಂಬ ತನ್ನ ಆಪ್ತ ಮಂತ್ರಿಯನ್ನು ಕರ ತರಿಸಿ, ಕೌರವನು ಅವನ ಹಸ್ತವನ್ನು ತನ್ನ ದಕ್ಷಿಣ ಹಸ್ತದಿಂದ ಹಿಡಿದು ಕೊಂಡು,—ಎಲೈ, ಆಪ್ತನೇ, ಸಕಲ ರತ್ನ ಸಮೃದ್ಧವಾದ ಈ ಭೂಮಂಡಲವಷ್ಟೂ ನನ್ನ ಸ್ವಾಧೀನವಾಗುವ ಹಾಗೆ ನೀನು ಮಾಡಬೇಕು. ನನಗೆ ನಿನಗಿಂತ ಮತ್ತೊಬ್ಬ ಆಪ್ತನಿಲ್ಲ. ಆದ್ದರಿಂದ ಪಾಂಡವರ ನಾಶಾರ್ಥವಾಗಿ ಒಂದು ಉಪಾಯವನ್ನು ಹೇಳುತ್ತೇನೆ; ಏನಂದರೆ, ಈಗ ಪಾಂಡವರು ವಾರಣಾವತ ಪಟ್ಣಕ್ಕೆ ಹೊರಟಿದ್ದಾರೆ. ನೀನು ಹೇಸರ ಕತ್ತೆಗಳನ್ನು ಕಟ್ಟಿರುವ ರಥವನ್ನು ಏರಿ ಕೊಂಡು, ಅವರಿಗಿಂತ ಮುಂಚಿತವಾಗಿ ಅಲ್ಲಿಗೆ ಹೋಗಿ, ಅವರು ಅಲ್ಲಿ ವಾಸ ಮಾಡುವದಕ್ಕೆ ಅಣಿಯಾಗಿರುವ ಹಾಗೆ, ಗರಡಿಗಳಿಂದಲೂ, ಆಯುಧಶಾಲೆಗಳಿಂದಲೂ ಚತುಶ್ಶಾಲೆಗಳಿಂದಲೂ ಒಪ್ಪುತ್ತಾ, ಚೌಕವಾಗಿರುವ ಒಂದು ಅರಮನೆಯನ್ನು ಕಟ್ಟಿಸಿ, ಸಿದ್ಧಾ ಮಾಡಿ ಕೊಂಡಿರು. ಆ ಅರಮನೆಯ ಗೋಡೆಗಳಿಗೆಲ್ಲಾ ಸಣಬು, ಸಜ್ಜರಸ, ಮಂಜೇ ಹುಲ್ಲು, ತಂಡೇ ಹುಲ್ಲು, ಮೇಣ, ತುಪ್ಪ, ಅರಗು, ಎಣ್ಣೆ ಮೊದಲಾದ ದ್ರವ್ಯಗಳನ್ನು ಮಣ್ಣಿನ ಜೊತೆಯಲ್ಲಿ ಕಲಿಸಿ, ಮಣ್ಣುಗಾಜು ಮಾಡಿಸ ಬೇಕು. ಸಣಬೂ, ಬಿದಿರಿನ ಚಾಪೆಗಳೂ, ಮರದ ದಬ್ಬೆಗಳೂ, ಇವುಗಳಿಂದ ಯಂತ್ರಗಳನ್ನು ಮಾಡಿಸಿ, ಬಹಳ ಕಡೆಗಳಲ್ಲಿ ಇಡಿಸು. ಆ ಪಾಂಡವರು ಮೆಚ್ಚುವ ಹಾಗೆ, ಓಲಗದ ಚಾವಡಿಯನ್ನೂ, ಹಜಾರವನ್ನೂ, ಮೇಲ್ಮಾಳಿಗೆಯನ್ನೂ, ಸ್ನಾನ ಗೃಹವನ್ನೂ, ಭೋಜನ ಶಾಲೆಯನ್ನೂ, ಕೂರುವ ಕೊಠಡಿಯನ್ನೂ, ನರ್ತನ ಗೃಹವನ್ನೂ, ಶಯ್ಯಾಗೃಹವನ್ನೂ, ಕನ್ನಡಿಗಳಿಂದ ಮಾಡಿಸು. ಹೀಗೆ ಮಾಡಿಸಿ, ಕಾದು ಕೊಂಡಿದ್ದು, ಆ ಪಾಂಡವರು ಅಲ್ಲಿಗೆ ಬಂದ ಮೇಲೆ, ಅವರಿಗೇನೂ ಕೊರತೆ ಆಗದಂತೆ ಉಪಚರಿಸುತ್ತಾ ಇದ್ದು, ನಾನು ಹೇಳುವ ಸಂಕೇತ ದಿವಸದಲ್ಲಿ, ಅವರು ರಾತ್ರೆ ಭೋಜನಾ ಮಾಡಿ, ಸುಖ ನಿದ್ರೆ ಮಾಡುತ್ತಾ ಇರುವದನ್ನು ನೋಡಿ ಕೊಂಡಿದ್ದು,

ಅರ್ಧ ರಾತ್ರಿಯು ವೇಳೆಯಲ್ಲಿ ಆ ಮನೆಗೆ ಬೆಂಕಿಯನ್ನು ಹಚ್ಚಿಸ ಬೇಕು. ಅವರು ಆ ಮನೆಯಲ್ಲಿ ಬೆಂದು ಹೋದರೆ, ದೈವ ವಶದಿಂದ ಬೆಂದು ಹೋದ ರೆಂದು ಜನರೆಲ್ಲರು ಹೇಳಿ ಕೊಳ್ಳುತ್ತಾರೇ ಹೊರ್ತು, ನಮ್ಮನ್ನು ಒಬ್ಬರೂ ದೂಷಿಸರು. ಆದ್ದರಿಂದ ನೀನೀಕಾರ್ಯವನ್ನು ಒಂದು ಪಿಳ್ಳೆಗೂ ಗೋಚರವಾ ಗದಂತೆ ನಡಿಸು; ಹೋಗೆಂದು, ವೀಳಯವನ್ನು ಕೊಟ್ಟು ಕಳುಹಿಸಲು; ಆ ಪುರೋಚನನು ಅದೇ ಮೇರೆಗೆ ಮಾಡಿ, ಕಾದು ಕೊಂಡಿದ್ದನು.

ಇತ್ತಲೀ ಪಾಂಡವರು ತಮ್ಮ ಹಿಂದೆ ಬರುವ ಭೀಷ್ಮಾದಿಗಳನ್ನೂ ಪುರಜನ ರನ್ನೂ ಹಿಂತಿರಿಗಿ ಹೋಗುವ ಹಾಗೆ ಬೇಡಿ ಕೊಳ್ಳುತ್ತಿರಲು; ಅವರೆಲ್ಲರು ಬಹು ವ್ಯಸನಾಕ್ರಾಂತರಾಗಿ, ಕಂಬನಿಗಳನ್ನು ತುಂಬುತ್ತಾ, ಆ ಪಾಂಡವರನ್ನು ಹರಸಿ, ಹಿಂತಿರಿಗಿ, ಹಸ್ತಿನಾವತೀ ಪಟ್ಟಣಕ್ಕೆ ಹೋದರು. ಆದರೆ ಈ ಕೌರವಾದಿಗಳು ಮಾಡಿದ ದುರಾಲೋಚನೆಯನ್ನು ತಿಳಿದ ವಿದುರನು ಆ ಪಾಂಡವರ ಮೇಲಣ ಮೋಹದಿಂದ ಅವರಿಗೆ ಉಂಟಾಗುವ ಆಪತ್ತು ನಾಶವಾಗಿ ಹೋಗುವ ಹಾಗೆ ತಕ್ಕ ತೋಡನ್ನು ಮಾಡಿ, ಈ ವಿವರವನ್ನು ಧರ್ಮರಾಯನಿಗೆ ತಿಳಿಸ ಬೇಕೆಂದು ಇನ್ನು ಸ್ವಲ್ಪ ದೂರ ಅವರ ಸಂಗಡ ಬಂದು, ಅಲ್ಲಿ ಮತ್ತೊಬ್ಬರಿಗೂ ತಿಳಿ ಯದ ಹಾಗೆ ಧರ್ಮರಾಯನನ್ನು ಕುರಿತು ಮ್ಲೇಂಛ ಭಾಷೆಯಲ್ಲಿ ಗೂಢಾರ್ಥವಾಗಿ ಹೇಳಿದನು; ಏನಂದರೆ—ಎಲೈ, ಧರ್ಮರಾಯನೇ, ನೀನು ಸಕಲ ಭಾಷೆಗಳನ್ನು ತಿಳಿದಂಥವನು. ಲೋಕದಲ್ಲಿ ಪೂರ್ವೋತ್ತರ ವೃತ್ತಾಂತಗಳನ್ನು ವಿಚಾರಿಸಿ, ಬುದ್ಧಿ ಬಲದಿಂದ ನಡೆಯುತ್ತಲಿರುವಂಥ ಪುರುಷನು ಸ್ವಸಂರಕ್ಷಣ ರೂಪ ಧರ್ಮ ವನ್ನೂ, ಬಂಧು ಜನ ವಿರೋಧವನ್ನೂ ತಿಳಿದು, ತನಗೆ ಶತ್ರುಗಳಿಂದ ಬರುವ ಆಪತ್ತುಗಳನ್ನು ತಪ್ಪಿಸಿ ಕೊಳ್ಳುವದನ್ನೇ ಹುಡುಕುತ್ತಾ ಇರ ಬೇಕು. ಕಬ್ಬಿಣ ಉಕ್ಕುಗಳಿಂದ ಮಾಡಲ್ಪಡದೆ ಇರುವಂಥಾವಾಗಿದ್ದರೂ, ಅತಿ ತೀಕ್ಷ್ಣವಾಗಿ ಶರೀರವನ್ನು ಖಂಡ ಖಂಡಗಳಾಗಿ ಕೊಯ್ಯುವಂಥ ಶಸ್ತ್ರಾಸ್ತ್ರವು ಇಂಥಾ ದ್ದೆಂದು ತಿಳಿದಿರುವಂಥವನನ್ನು ಶತ್ರುಗಳು ಸಂಹರಿಸಲಾರರು. ಹೊದೆಗಳನ್ನು ಕೆಡಿಸುವಂಥಾದ್ದಾಗಿ—ಶೈತ್ಯವನ್ನು ಹೋಗಲಾಡಿಸುವಂಥಾದ್ದಾಗಿ—ಒಬ್ಬರಿಗೂ ತಿಳಿಯದಂತೆ ಗೋಪ್ಯವಾಗಿ ಒಂದು ಮರದ ಪೊಟ್ರೆಯಲ್ಲಿ ಇರುವ ವಸ್ತುವು ತನಗೆ ಬಾಧಕವನ್ನು ಉಂಟು ಮಾಡದ ಹಾಗೆ ಎಚ್ಚರವಾಗಿ ನಡೆದು ಕೊಳ್ಳುವ ವನು ಬಹು ಕಾಲ ಬದುಕುವನು. ಕಣ್ಣು ಇಲ್ಲದೆ ಇರುವಂಥವನು ಮಾರ್ಗ ವನ್ನೂ ದಿಕ್ಕುಗಳನ್ನೂ ತಿಳಿಯಲಾರನು. ಧೈರ್ಯವಿಲ್ಲದ ಪುರುಷನು ಒಂದು ಕಾರ್ಯವನ್ನೂ ಮಾಡಲಾರದೆ, ಐಶ್ವರ್ಯವಂತನಾಗನು. ಈ ಅರ್ಥವನ್ನು ನೀನು

ತಿಳಿದಿರು. ಮತ್ತು ಪ್ರಾಜ್ಞರಾಗಿರುವಂಥವರು ಲೋಹಾದಿಗಳಿಂದ ನಿರ್ಮಿತವಾದ
ಅಸ್ತ್ರವನ್ನು ಶತ್ರುವಿನಿಂದ ಹೊಂದುವದೇ ಇಲ್ಲ. ಒಂದು ವೇಳೆ ಹೊಂದಿದ
ರೂ, ಮುಳ್ಳು ಹಂದಿಯು ಅಗ್ನಿಯಿಂದ ಒಂದು ಮಾರ್ಗಕ್ಕೆ ಭಯ ತಟ್ಟಿದರೆ,
ಮತ್ತೊಂದು ಮಾರ್ಗದಿಂದ ತಪ್ಪಿಸಿ ಕೊಂಡು ಹೋಗುವ ಹಾಗೆ ಆ ಶಸ್ತ್ರದಿಂ
ದುಂಟಾಗುವ ಅಪಾಯವನ್ನು ತಪ್ಪಿಸಿ ಕೊಳ್ಳುವರು. ಹಗಲಿನಲ್ಲಿ ಸಂಚಾರದಿಂ
ದಲೂ, ರಾತ್ರಿಯಲ್ಲಿ ನಕ್ಷತ್ರಗಳಿಂದಲೂ, ಮಾರ್ಗವನ್ನು ತಿಳಿಯ ಬೇಕು. ತನ್ನ
ನಿಮಿತ್ತವಾಗಿ ಪಂಚೇಂದ್ರಿಯಗಳನ್ನು ನಿಗ್ರಹಿಸಿದರೇ ಹೊರ್ತು, ಸ್ವಸಂರಕ್ಷಣೆ
ಆಗುವದಿಲ್ಲವೆಂದು ಹೇಳಿದ ವಿದುರನ ಮಾತನ್ನು ಕೇಳಿ, ಧರ್ಮರಾಯನು—ನೀನು
ಹೇಳಿದ್ದಕ್ಕೆಲ್ಲಾ ಅರ್ಥವಾಯಿತು ಎನಲು; ವಿದುರನು ಅವರೆಲ್ಲರನ್ನು ಹರಸಿ,
ತಾನು ಹಿಂತಿರುಗಿ, ಪಟ್ಣಕ್ಕೆ ಬಂದನು.

ಇತ್ತಲಾ ಧರ್ಮರಾಯಾದಿಗಳು ವಾರಣಾವತ ಪಟ್ಣವನ್ನು ಕುರಿತು ತೆರಳು
ತ್ತಿರಲು; ಕುಂತಿಯು—ಎಲೈ, ಧರ್ಮಜನೇ, ವಿದುರನು ಹೇಳಿದ ಸಂಕೇತವು
ನಾವು ಕೇಳತಕ್ಕದ್ದಾಗಿದ್ದರೆ, ನಮಗೆ ತಿಳಿಸು, ಎನಲು; ಆತನು—ಎಲೈ, ತಾಯೇ,
ವಾರಣಾವತ ಪಟ್ಣದಲ್ಲಿ ಕೌರವಾದಿಗಳು ಮಾಡಿಸಿದ ಅರಗಿನ ಮನೆಯಲ್ಲಿ ಅರ್ಧ
ರಾತ್ರಿಯಲ್ಲಿ ಉಂಟಾಗುವ ಬೆಂಕಿಯಿಂದ ನಾವೆಲ್ಲರು ದಹಿಸಲ್ಪಡದ ಹಾಗೆ ಎಚ್ಚ
ರವಾಗಿರ ಬೇಕೆಂತಲೂ; ಆ ಮನೆಗೆ ಬೆಂಕಿ ಹಾಕುವ ಪುರೋಚನನು ನಮ್ಮ
ಆಶ್ರಿತನಾಗಿಯೇ ಇರುತ್ತಾನೆಂತಲೂ; ನಾವು ಹಿಂತಿರಿಗಿ ಹೋಗದೆ, ಆ ಮನೆ
ಯಲ್ಲಿಯೇ ಇದ್ದು ಕೊಂಡು, ಒಂದು ಸುರಂಗವನ್ನು ಮಾಡಿಸಿ ಕೊಂಡು,
ಅದರ ಮೂಲಕವಾಗಿ ಅಗ್ನಿ ಭಯವನ್ನು ತಪ್ಪಿಸಿ ಕೊಳ್ಳ ಬೇಕೆಂತಲೂ; ಉದ
ಯ ಕಾಲದಲ್ಲಿ ಬೇಟೆಯ ನೆವದಿಂದಲೂ, ರಾತ್ರಿ ಕಾಲದಲ್ಲಿ ನಕ್ಷತ್ರ ಮೂಲ
ವಾಗಿಯೂ, ಮಾರ್ಗವನ್ನು ತಿಳಿದು ಕೊಂಡು, ದೇಶಾಂತರಕ್ಕೆ ಹೋಗ ಬೇಕೇ
ಹೊರ್ತಾಗಿ, ಹಿಂತಿರಿಗಿ ಪಟ್ಣಕ್ಕೆ ಬರ ಕೂಡದೆಂತಲೂ; ಭಯ ಪಡದೆ, ಧೈರ್ಯ
ವಾಗಿರ ಬೇಕೆಂತಲೂ; ಅಲ್ಲಿ ಸುರಂಗ ಮಾಡುವದಕ್ಕೆ ನಾನೇ ಒಬ್ಬ ಆಪ್ತನ
ನ್ನು ಕಳುಹಿಸುತ್ತೇನೆಂತಲೂ; ಹೀಗಾದರೆ ನಿಮ್ಮೈವರಿಗೂ ಕೇಡು ಬರಲಾರ
ದೆಂದು ವಿದುರನು ಹೇಳಿ ಹೋದನು, ಎಂದು ಹೇಳಲು; ಕುಂತಿ ಯೋಚನಾಪ
ರಳಾಗಿ—ನಿಮ್ಮ ಮನ ಬಂದಂತೆ ನಡಿಸಿ ಎಂದು ಹೇಳಿದಳು. ಆಗ ಪಾಂಡವರು
ಪಯಣ ಗತಿಯಿಂದ ವಾರಣಾವತಕ್ಕೆ ಬಂದು ಶೇರಿ, ಆ ಪಟ್ಣದ ಮುಖ್ಯಾಧಿಕಾ
ರಿಗಳೇ ಮೊದಲಾದ ಪುರಜನಗಳಿಂದ ಸನ್ಮಾನಹೊಂದಿ, ಅಚ್ಛಿನ್ನ ಭಕ್ತನಂತೆ ನಟ
ಸುತ್ತಲಿರುವ ಪುರೋಚನನು ತೋರಿಸಿದ ಅರಮನೆಯನ್ನು ಪ್ರವೇಶಿಸಿ, ಅಲ್ಲಿ ಸಿದ್ಧ

ವಾಗಿರುವ ಷಡ್ರಸೋಪೇತಾನ್ನವನ್ನುಂಡು, ಬೇಕಾದ ಪಾನೀಯವನ್ನು ಕುಡಿದು, ವಿಶ್ರಮಿಸಿ ಕೊಳ್ಳುತ್ತಾ ಇರುವಾಗ; ಧರ್ಮಜನು ತನ್ನ ತಮ್ಮಂದಿರಿಗೆ ವಿದುರನು ಹೇಳಿದ ಸಂಕೇತಾರ್ಥವನ್ನು ತಿಳಿಸಿ, ಕೆಲವು ಕಾಲ ಸುಖದಿಂದಿರುತ್ತಿರಲು; ಒಂದು ದಿವಸ ವಿದುರನು ಕಳುಹಿಸಿದ ಒಬ್ಬ ಕಾಮಟಿದವನು ಅಂತರಂಗವಾಗಿ ಧರ್ಮರಾಯನನ್ನು ಕಂಡು—ಎಲೈ, ಯಮಜಾತನೇ, ನಾನು ವಿದುರನು ಕಳುಹಿಸಿದ ಕಾಮಟದವನು; ಆತನು ಮಧ್ಯ ದಾರಿಯಲ್ಲಿ ಮ್ಲೇಂಛ ಭಾಷೆಯಲ್ಲಿ ಉಸುರಿದ್ದನ್ನೇ ಗುರುತಾಗಿ ಹೇಳಿ, ನೀವು ತಪ್ಪಿಸಿ ಕೊಂಡು ಹೋಗುವಂತೆ ಒಂದು ಸುರಂಗವನ್ನು ಮಾಡಿ ಬರ ಹೇಳಿದನು, ಎನಲು; ಧರ್ಮರಾಯನು ಆತನಿಗೆ ಬಹುಮಾನವನ್ನು ಕೊಡಲು; ಆ ಕಾಮಟದವನು ರಹಸ್ಯವಾಗಿ ಮೇಲ್ಭಾಗದಲ್ಲಿ ಒಬ್ಬನು ಪ್ರವೇಶಿಸುವ ಹಾಗೆ ಬಾಯಿ ಇಟ್ಟು, ಒಳಗೆ ವಿಸ್ತಾರವಾಗಿ ಹಳ್ಳವನ್ನು ಮಾಡಿ, ಮೇಲು ಬಾಗಲು ಮುಚ್ಚಿ, ಒಬ್ಬರಿಗೂ ಕಾಣಿಸದ ಹಾಗೆ ಮಾಡಿ, ಪುರೋಚನನು ಬೆಂಕಿಯನ್ನು ಹಚ್ಚುವ ದಿವಸವನ್ನು ಆತನಿಗೆ ತಿಳುಹಿಸಿ, ವಿದುರನ ಬಳಿಗೆ ಹೊರಟು ಹೋದನು. ಈ ಪಾಂಡವರು ಈ ಅರ್ಥವನ್ನು ಒಬ್ಬರಿಗೂ ತಿಳಿಸದೆ, ವಂಚಕನಾದ ಪುರೋಚನನನ್ನು ವಂಚಿಸ ಬೇಕೆಂದು ಸಮಯವನ್ನು ನಿರೀಕ್ಷಿಸುತ್ತಾ ಇರುತ್ತಿದ್ದರು. ಇದಲ್ಲದೆ ಆ ಪುರೋಚನನು ಒಬ್ಬ ವ್ಯಾಧ ಸ್ತ್ರೀಯನ್ನು ಆ ಅರಮನೆಯಲ್ಲಿ, ಅಲ್ಲಿ ನಡೆದ ಸಂಗತಿಯನ್ನೆಲ್ಲಾ ತನಗೆ ತಿಳಿಸುವ ಹಾಗೆ ನೇಮಿಸಿ, ಇಟ್ಟಿದ್ದನು.

ಹೀಗೆ ಕೆಲವು ದಿವಸ ಕಳೆದ ಮೇಲೆ, ವಿದುರನು ಹೇಳಿದ್ದ ಸಂಕೇತ ದಿವಸವು ಬರಲು; ಪಾಂಡವರು ಆ ರಾತ್ರಿಯಲ್ಲಿ ಪುರೋಚನ ಸಮೇತವಾಗಿರುವ ಆ ಅರಮನೆಗೆ ಬೆಂಕಿಯನ್ನು ಹಾಕಿ, ತಾವು ಸುರಂಗ ಮಾರ್ಗವಾಗಿ ತಪ್ಪಿಸಿ ಕೊಂಡು ಹೋಗುವದಕ್ಕೆ ಸಿದ್ಧವಾಗಿದ್ದರು. ಆ ರಾತ್ರಿಯಲ್ಲಿ ಕುಂತೀ ದೇವಿಯು ಒಂದು ವ್ರತದ ನಿಮಿತ್ತವಾಗಿ ಆ ಪುರ ಜನಗಳಿಗೆಲ್ಲಾ ಸಮಾರಾಧನೆಯನ್ನು ಮಾಡಿಸಿ, ಭೋಜನಾನಂತರ ದಕ್ಷಿಣೆ ತಾಂಬೂಲಗಳನ್ನು ಕೊಟ್ಟು, ಅವರನ್ನು ಕಳುಹಿಸಿ, ತಾನು ಪುತ್ರ ಸಮೇತಳಾಗಿ ಭೋಜನ ಮಾಡಿ, ಸುಖ ನಿದ್ರೆ ಗೈಯುತ್ತಿದ್ದಳು. ಇದಲ್ಲದೆ ಪುರೋಚನನು ನೇಮಿಸಿದ ಆ ಶಬರ ಸ್ತ್ರೀಯು ಅದೇ ದಿವಸ ರಾತ್ರಿ ಕಾಲ ಪ್ರೇರಿತಳಾಗಿ ತನ್ನ ಐದು ಮಂದಿ ಮಕ್ಕಳನ್ನು ಕರೆದು ಕೊಂಡು, ಜೇನು ಮೊದಲಾದ ಬಲೀಯ ಪದಾರ್ಥಗಳನ್ನು ತಿಂದು, ಮದ್ಯ ಪಾನವನ್ನು ಮಾಡಿ, ಮತ್ತಳಾಗಿ, ಅಲ್ಲಿಯೇ ಗಾಢ ನಿದ್ರೆಯನ್ನು ಮಾಡುತ್ತಿದ್ದಳು. ಇತ್ತಲಾ ಭೀಮನು ಅರ್ಧ ರಾತ್ರಿಯಲ್ಲಿ ಎಲ್ಲರು ಗಾಢ ನಿದ್ರೆಯಲ್ಲಿರುವಾಗ, ಕುಂತಿ

ಮೊದಲಾದ ಐವರನ್ನು ಮೊದಲು ಸುರಂಗ ಮಾರ್ಗದಿಂದ ಕಳುಹಿಸಿ, ತಾನು ದೊಡ್ಡ ಸುಂಟರ ಘಾಳಿ ಬಂದ ವೇಳೆಯಲ್ಲಿ ಮೊದಲು ಪುರೋಚನನು ಮಲಗಿದ್ದ ಮನೆಗೆ ಯಜ್ಞೇಶ್ವರನನ್ನು ತೋರಿಸಿ, ಆ ಮೇಲೆ ತಾವಿದ್ದ ಮನೆಗೆ ಬೆಂಕಿ ಹಚ್ಚಿ, ಸುರಂಗ ಮಾರ್ಗದಿಂದ ತಾಯಿ ಅಣ್ಣ ತಮ್ಮಂದಿರೊಡನೆ ಕಾಡು ಮಾರ್ಗವಾಗಿ ಹೋಗಿ, ನಡೆಯಲಾರದೆ, ಶ್ರಮ ಪಡುವ ಧರ್ಮರಾಯಾದಿಗಳನ್ನು ಭುಜದ ಮೇಲೂ ಕಂಕುಳಲ್ಲಿಯೂ ಇಟ್ಟು ಕೊಂಡು, ವೇಗದಿಂದ ನಡೆಯುತ್ತಾ, ಗಂಗಾ ನದಿಯ ತಡಿಗೆ ಹೋಗಿ, ಅಲ್ಲಿ ವಿದುರನು ಆಜ್ಞಾಪಿಸಿದ ದಾಶರಾಯನಿಂದ ಓಡದಿಂದ ಆ ಗಂಗೆಯನ್ನು ದಾಟಿ, ಇನ್ನೂ ಕೆಲವು ಗಾವುದ ದೂರ ಹೋಗಿ, ಗೊಂಡಾರಣ್ಯದಲ್ಲಿ ಒಂದು ದೊಡ್ಡ ಮರದ ಕೆಳಗೆ ಅವರೆಲ್ಲರನ್ನು ಇಳಿಸಿ, ಅಲ್ಲಿ ನಿದ್ರೆ ಮಾಡುತ್ತಿರುವ ಧರ್ಮರಾಯಾದಿಗಳನ್ನು ಒಬ್ಬನೇ ಧೈರ್ಯವಾಗಿ ಕಾದು ಕೊಂಡು ಇರುತ್ತಿದ್ದನು.

ಅನಂತರದಲ್ಲಿ ಆ ಭೀಮನು ಎಚ್ಚತ್ತಿರುವ ಧರ್ಮರಾಯನನ್ನು ಅಲ್ಲಿ ಎಚ್ಚರವಾಗಿರುವಂತೆ ಹೇಳಿ, ತಾನು ದಾಹ ತೀರ್ಥವನ್ನು ತೆಗೆದು ಕೊಂಡು ಬರ ಬೇಕೆಂದು ಜಲ ಪಕ್ಷಿಗಳ ಸ್ವರವನ್ನೇ ಆಲಿಸಿ ಕೊಂಡು, ನಡೆದು ಹೋಗುತ್ತಿದ್ದನು. ಆಗ ಭೀಮನು ನಡೆದು ಹೋಗುತ್ತಿರಲು; ಅವನು ಹೆಜ್ಜೆ ಇಟ್ಟ ಸ್ಥಳದಲ್ಲಿರುವ ಮಹಾ ವೃಕ್ಷಗಳೆಲ್ಲಾ ಅವನ ತೊಡೆಗಳಿಗೆ ಸೋಂಕಿ, ಸಹ ಮೂಲವಾಗಿ ಮುರಿದು ಬೀಳುತ್ತಿದ್ದವು. ಮತ್ತು ಆತನ ಭುಜ ಬಲದಿಂದ ಹುಟ್ಟಿದ ಚಂಡ ಮಾರುತವು ದಿಕ್ಕುಗಳಲ್ಲಿ ಕಿಕ್ಕಿರಿಸಿ, ಅತಿ ಭಯಂಕರವಾದ ಧ್ವನಿ ಮಾಡುತ್ತಾ, ಬೀಸುವದಕ್ಕೆ ತೊಡಗಿತು. ಹೀಗೆ ಒಂದು ಸರೋವರದ ಬಳಿಗೆ ಹೋಗಿ, ಅಲ್ಲಿ ಸ್ನಾನ ಪಾನಗಳನ್ನು ಮಾಡಿ, ತನ್ನ ಉತ್ತರೀಯದಲ್ಲಿಯೂ ತಾವರೇ ಎಲೆಗಳಲ್ಲಿಯೂ ಉದಕವನ್ನು ಕಟ್ಟಿ ಕೊಂಡು, ಎರಡು ಹರುದಾರಿ ದೂರದಲ್ಲಿರುವ ವಟ ವೃಕ್ಷದ ತಡಿಗೆ ಬಂದು, ಕುಂತಿ ಮೊದಲಾದವರನ್ನೆಬ್ಬಿಸಿ, ಅವರಿಗೆ ಪಾನೀಯವನ್ನು ಕೊಡಲು; ಅವರು ಆ ತಣ್ಣೀರನ್ನು ಕುಡಿದ ಮಾತ್ರದಲ್ಲಿಯೇ ಮಾರ್ಗ ಶ್ರಮ ಪರಿಹಾರವಾಗಿ, ಆ ಮರದ ಬುಡದಲ್ಲಿಯೇ ಗೊರಕೆ ಹಾಕುತ್ತಾ, ನಿದ್ರೆ ಮಾಡುತ್ತಿದ್ದರು. ಆಗ ಭೀಮನು ಅವರನ್ನು ನೋಡಿ, ಶೋಕ ಸಂತಪ್ತ ಹೃದಯನಾಗಿ—ಹಸ್ತಿನಾವತೀ ಪಟ್ಟಣದಲ್ಲಿಯೂ ವಾರಣಾವತೀ ಪಟ್ಟಣದಲ್ಲಿಯೂ, ದಿವ್ಯ ಶಯನಗಳ ಮೇಲೆ ಮಲಗುತ್ತಿದ್ದ ಇವರಿಗೆ ಈ ಮಣ್ಣಿನ ಮೇಲೆ ಹ್ಯಾಗೆ ನಿದ್ರೆ ಬಂತೋ? ವಸುದೇವನಿಗೆ ತಂಗಿಯಾಗಿ—ಕುಂತಿಭೋಜನಿಗೆ ಮಗಳಾಗಿ—ವಿಚಿತ್ರ ವೀರ್ಯನಿಗೆ ಸೊಸೆಯಾಗಿ—ಪಾಂಡುರಾಯನಿಗೆ ಧರ್ಮ ಪತ್ನಿಯಾಗಿ—ಸರ್ವ ಲಕ್ಷಣ

ಸಂಪನ್ನೆಯಾಗಿ—ಪದ್ಮಗರ್ಭ ಸದೃಶ ಕಾಂತಿ ವಿರಾಜಮಾನೆಯಾಗಿ—ಕೋಮ ಲಾಂಗಿಯಾಗಿ—ದಿವ್ಯ ಪರ್ಯಂಕದ ಮೇಲೆ ಮಲಗುವದಕ್ಕೆ ಯೋಗ್ಯಳಾಗಿರುವ ಈ ಕುಂತೀ ದೇವಿಯು ದೇವಾಂಶ ಸಂಭವರಾದ ನಮ್ಮಂಥ ಕುಮಾರರನ್ನು ಪಡದವಳಾದರೂ ಈ ಅರಣ್ಯದಲ್ಲಿ ದಿಕ್ಕಿಲ್ಲದವಳಂತೆ ಸಿದ್ದೆ ಹೋಗುವದನ್ನು ನೋಡ ಬೇಕಾಯಿತು! ಧರ್ಮಪರನಾಗಿಯೂ—ಮಹಾ ಪರಾಕ್ರಮಶಾಲಿಯಾಗಿ ಯೂ—ತ್ರಿಲೋಕಾಧಿಪತ್ಯಕ್ಕೆ ಯೋಗ್ಯನಾಗಿಯೂ ಇರುವ ಈ ಯಮಜಾ ತನು ಈ ಭೂಮಿಯ ಮೇಲೆ ಬಿದ್ದು ಇದ್ದಾನೆ! ನೀಲ ಮೇಘ ಸಮಾನ ಕಾಂತಿ ವಂತನಾಗಿ—ಅಸಮಾನ ಶೌರ್ಯ ಧುರಂಧರನಾದ ಈ ಧನಂಜಯನು ಹೀಗೆ ಭೂಮಿಯ ಮೇಲೆ ಬಿದ್ದು ಇದ್ದಾನೆ! ಕನ್ನೈದಿಲೇ ಪುಷ್ಪದೋಪಾದಿಯಲ್ಲಿ ಕಪ್ಪಾದ ಕಾಂತಿಯುಳ್ಳವರಾಗಿ—ರೂಪು ಸಂಪತ್ತಿನಲ್ಲಿ ಅಶ್ವಿನೀ ದೇವತೆಗಳನ್ನೇ ಅನುಸರಿಸಿರುವಂಥ ಈ ನಕುಲ ಸಹದೇವರು ಈ ನೆಲದ ಮೇಲೆ ಒರಗಿರುವ ದನ್ನು ನೋಡುವದಕ್ಕಿಂತ ಮತ್ತೊಂದು ದುಖ್ಖ ಉಂಟೇ? ಎಂದು ಕೊರ ಗುತ್ತಾ, ನಿರ್ಭೀತನಾಗಿ ಕಾದು ಕೊಂಡಿರುತ್ತಿದ್ದನು.

### 60. The Demon Hidimba slain by Bhima.

### ೬೦. ಹಿಡಿಂಬ ವಧೆ.

ಅನಂತರದಲ್ಲಿ, ಪಾಂಡವರು ಮಲಗಿರುವ ಮರಕ್ಕೆ ಸ್ವಲ್ಪ ದೂರದಲ್ಲಿ ಒಂದು ಮತ್ತೀಮರವನ್ನು ಆಶ್ರೈಸಿ ಕೊಂಡು, ಹಸಿವು ಬಾಯಾರಿಕೆಗಳಿಂದ ಪೀಡಿತ ನಾಗಿರುವಂಥ—ಮಹಾ ಬಲಶಾಲಿಯಾಗಿರುವಂಥ—ಕ್ರೂರಾತ್ಮನಾದಂಥ—ವಿಕಾರ ರೂಪುಳ್ಳಂಥ—ಕರಾಳ ವದನನಾಗಿರುವಂಥ—ಕೊತ್ತಿಗಣ್ಣುಗಳುಳ್ಳಂಥ—ಹಿಡಿಂಬ ನೆಂಬ ರಾಕ್ಷಸನು ಒಂದು ಸಾರಿ ಆಕಳಿಸಿ, ಮೈ ಮುರಿದು ಕೊಂಡು, ಬಿರುಸಾಗಿ ರುವ ತಲೇ ಕೂದಲನ್ನು ಕೆದರಿ ಕೊಂಡು, ಮನುಷ್ಯ ಗಂಧವನ್ನು ಆಘ್ರಾಣಿಸಿ, ಮಾಂಸದ ಮೇಲಣ ಆಶೆಯಿಂದ ತನ್ನ ತಂಗಿಯಾದ ಹಿಡಿಂಬಿಯನ್ನು ನೋಡಿ— ಎಲೈ, ಹಿಡಿಂಬಿಯೇ, ಬಹು ಕಾಲಕ್ಕೆ ಮನಸ್ಸಿಗೆ ಪ್ರಿಯವಾದ ಮನುಷ್ಯ ಮಾಂ ಸದ ಗಂಧವು ಘ್ರಾಳಿಯಿಂದ ತಿಳಿಯ ಬಂದು, ನನ್ನ ಬಾಯಿ ನೀರನ್ನು ಕರಿಸುತ್ತದೆ. ಈಗ ಅತಿ ತೀಕ್ಷ್ಣವಾದ ನನ್ನ ಎಂಟು ಕೋರೆ ದಾಡೆಗಳಿಂದ, ತುಪ್ಪವನ್ನು ಸುರಿಯುವಂಥಾದ್ದಾಗಿಯೂ ಅತಿ ಮೃದುವಾಗಿಯೂ ಇರುವ ಮನುಷ್ಯನ ಖಂಡ ವನ್ನು ಕಚ್ಚಿ, ಹೊಸ ರಕ್ತವನ್ನು ನೊರೆ ಕಟ್ಟುವ ಹಾಗೆ ಹೀರ ಬೇಕು. ಆದ್ದ ರಿಂದ ನೀನು ಶೀಘ್ರವಾಗಿ ಹೋಗಿ, ಆ ಮನುಷ್ಯರನ್ನು ಹುಡುಕಿ, ಸಂಹರಿಸಿ, ನನ್ನ ಬಳಗೆ ತೆಗೆದು ಕೊಂಡು ಬಾ. ನಾವಿಬ್ಬರು ಆ ಮಾಂಸವನ್ನು ಹೊಟ್ಟೇ

ತುಂಬಾ ಉಂಡು, ತೃಪ್ತಿ ಪಟ್ಟು, ಸಂತೋಷದಿಂದ ಕೈ ತಪ್ಪಳೆಗಳನ್ನು ಹಾಕಿಕೊಂಡು, ಸಂಗೀತವನ್ನು ಹಾಡಿ, ನಾಟ್ಯವಾಡೋಣ ಎಂದು ಹೇಳಿ, ಕಳುಹಿಸಲು; ಆ ಹಿಡಿಂಬಿಯು ಪಾಂಡವರಿದ್ದ ತಾವಿಗೆ ವೃಕ್ಷಗಳ ಮೇಲೆ ನಡೆಯುತ್ತಾ ಬಂದು, ಸುಕುಮಾರ ಶರೀರಿಗಳಾಗಿ—ರೂಪು ಸಂಪನ್ನರಾಗಿ—ನೆಲದ ಮೇಲೆ ಮಲಗಿರುವ ಧರ್ಮರಾಯಾದಿಗಳನ್ನೂ ಅವರ ಬಳಿಯಲ್ಲಿ ಯೌವನ ಸಂಪನ್ನನಾಗಿಯೂ—ಆಜಾನು ಬಾಹುವಾಗಿಯೂ—ವಿಶಾಲವಾದ ಎದೆಯುಳ್ಳವನಾಗಿಯೂ—ಅಸಮಾನ ಸೌಂದರ್ಯ ಶಾಲಿಯಾಗಿಯೂ—ಉನ್ನತಾಕಾರವುಳ್ಳವನಾಗಿಯೂ—ಸಿಂಹ ಸ್ಕಂಧನಾಗಿಯೂ—ದಿವ್ಯ ಕಾಂತಿ ಸಂಪನ್ನನಾಗಿಯೂ—ಕಂಬು ಗ್ರೀವನಾಗಿಯೂ—ಕಮಲ ಪತ್ರಾಕ್ಷನಾಗಿಯೂ—ಇರುವ, ಎಚ್ಚರವಾಗಿರುವ ಭೀಮನನ್ನು ನೋಡಿ, ಕಾಮ ಬಾಣ ಪೀಡಿತೆಯಾಗಿ, ಆತನನ್ನು ಮದುವೆ ಆಗ ಬೇಕೆಂದು ಮನಸ್ಸಿನಲ್ಲಿ ಆಲೋಚನೆ ಮಾಡಿ, ಅವಳು ಕಾಮರೂಪಿಯಾದ್ದರಿಂದ ತನ್ನ ರೌದ್ರವಾದ ರಾಕ್ಷಸಾಕಾರವನ್ನು ಬಿಟ್ಟು, ಅತಿ ರಮಣೀಯವಾದ ಮನುಷ್ಯ ಸ್ತ್ರೀರೂಪವನ್ನು ಧರಿಸಿ, ಸರ್ವಾಲಂಕಾರ ಶೋಭಿತೆಯಾಗಿ, ಮಂದ ಗಮನದಿಂದ ಆತನ ಇಂಗಿತಗಳನ್ನೇ ದೃಷ್ಟಿಸಿ ನೋಡುತ್ತಾ, ಆತನ ಸಮೀಪಕ್ಕೆ ಬಂದು ಶೇರಲು; ಭೀಮನು, ಅತಿ ಲಲಿತಾಕೃತಿಯುಳ್ಳವಳಾಗಿ—ಚಂದ್ರಮುಖ ಶೋಭಿತೆಯಾಗಿ—ಕಮಲ ಲೋಚನೆಯಾಗಿ—ಕುಟಿಲವಾದ ಮುಂಗುರುಳುಗಳುಳ್ಳವಳಾಗಿ—ನಸುನಗುತ್ತಾ ತನ್ನ ಸಮೀಪದಲ್ಲಿ ನಿಂತಿರುವವಳನ್ನು ನೋಡಿ, ಆಶ್ಚರ್ಯ ಪಡುತ್ತಿದ್ದನು.

ಆ ಬಳಿಕ ಅವಳು ಉಚಿತ ಪ್ರಕಾರದಿಂದ ಆತನಿಗೆ ತನ್ನ ವಿಲಾಸಗಳನ್ನು ತೋರಿಸಿ, ನಾಚಿಕೆಯಿಂದ ತಲೆಯನ್ನು ಬೊಗ್ಗಿಸಿ, ಮುಖದಲ್ಲಿ ಮುಗುಳು ನಗೆಯನ್ನು ತೋರಿಸುತ್ತಾ, ಇಂತೆಂದಳು—ಎಲೈ, ಮಹಾ ಪುರುಷನೇ, ನೀನ್ಯಾರು? ಎಲ್ಲಿಂದ ಬಂದೆ? ದೇವ ಕುಮಾರಕರೋಪಾದಿಯಲ್ಲಿ ಮಲಗಿರುವ ಈ ಕುಮಾರಕರ್ರ್ಯಾರು? ಸ್ವಂತ ಮನೆಯಲ್ಲಿ ಸುಖದಿಂದ ಮಲಗಿರುವ ಹಾಗೆ ಈ ವಿಷಮವಾದ ವನದಲ್ಲಿ ನಿರ್ಭೀತಳಾಗಿ ಮಲಗಿರುವ ಈ ಮುದುಕಿಯು ನಿನಗೇನಾಗಬೇಕು? ಈ ಮಹಾರಣ್ಯವು ರಾಕ್ಷಸ ಭೂಯಿಷ್ಟವಾದದ್ದೆಂದು ತಿಳಿದು, ಇಲ್ಲಿ ಹ್ಯಾಗಿದ್ದೀರಿ? ಈ ಅರಣ್ಯದಲ್ಲಿ ಹಿಡಿಂಬಕನೆಂಬ ಒಬ್ಬ ರಾಕ್ಷಸನು ಪಾಪಾತ್ಮನಾಗಿ, ದುಷ್ಟ ಸ್ವಭಾವದಿಂದ ಮನುಷ್ಯ ಮಾಂಸವನ್ನು ಬಯಸಿ, ನಿಮ್ಮನ್ನು ಕೊಂದು ತರುವ ಹಾಗೆ ನನ್ನನ್ನು ಇಲ್ಲಿಗೆ ಕಳುಹಿಸಿದನು. ಆದರೆ ನಾನು ನಿನ್ನ ರೂಪಾತಿಶಯಕ್ಕೆ ಮೋಹಿಸಿ, ನಿನ್ನನ್ನು ಗಂಡನಾಗ ವರಿಸಿದ್ದೇನೆ. ಇದು ಸತ್ಯವು.

ನೀನು ನನ್ನ ಮನೋಭೀಷ್ಟವನ್ನು ಸಲ್ಲಿಸಿದರೆ, ನಿಮಗೆ ರಾಕ್ಷಸರಿಂದುಂಟಾಗುವ ಭಯವನ್ನು ತಪ್ಪಿಸುತ್ತೇನೆ. ನೀನೆನ್ನ ವರಿಸುವದಕ್ಕೆ ಸಮ್ಮತಿ ಪಡದಿದ್ದರೆ, ನನ್ನ ಪ್ರಾಣವು ನಿಲ್ಲಲಾರದು, ಎನಲು; ಭೀಮನು,—ಎಲೈ, ಕೋಮಲಾಂಗಿಯೇ, ನೀನು ಹೇಳುವದು ಯುಕ್ತವೇ ಸರಿ. ಆದರೂ ನನಗೆ ಜ್ಯೇಷ್ಠ ಭ್ರಾತೃವಾಗಿರುವ ಈ ಯುಧಿಷ್ಠಿರನು ಕನ್ಯಾ ಪರಿಗ್ರಹ ಮಾಡುವದಕ್ಕಿಂತ ಮುಂಚೆ ನಾನು ಹ್ಯಾಗೆ ನಿನ್ನನ್ನು ವರಿಸಲಿ? ಮತ್ತು ನನಗೆ ಈ ರಾಕ್ಷಸಾದಿಗಳಿಂದ ಲೇಶ ತೊಂದರೆ ಉಂಟಾಗಲಾರದು. ನನ್ನ ಎದುರಿಗೆ ನಿಲ್ಲುವದಕ್ಕೆ ದೇವೇಂದ್ರಾದಿ ದೇವತೆಗಳೇ ಭಯ ಪಡುವಾಗ ಈ ರಾಕ್ಷಸರೆಷ್ಟು ಮಾತ್ರದವರು? ನೀನು ಅಗತ್ಯವಾಗಿ ನಿನ್ನ ಅಣ್ಣನನ್ನು ಕಳುಹಿಸ ಬಹುದು ಎಂದು ಹೇಳಲು; ಆಕೆಯು ಅವನನ್ನು ಬಿಟ್ಟು ಹೋಗಲಾರದೆ, ಅಲ್ಲಿಯೇ ನಿಂತಿದ್ದಳು.

ಹೀಗಿರುವಷ್ಟರಲ್ಲೇ, ರೋಷಾರುಣ ನೇತ್ರಗಳುಳ್ಳವನಾಗಿ—ಮಹಾ ರೌದ್ರಾಕಾರ ಧರನಾಗಿ—ಊರ್ಧ್ವ ಕೇಶವುಳ್ಳವನಾಗಿ—ಕಪ್ಪಾದ ಶರೀರವುಳ್ಳವನಾಗಿ—ದಂಷ್ಟ್ರಾಕರಾಳ ಮುಖವುಳ್ಳವನಾಗಿ—ಸಿಂಹದಂತೆ ರೌದ್ರಕರವಾದ ಘರ್ಜನೆಯುಳ್ಳವನಾಗಿ—ಮಹಾ ಬಲಶಾಲಿಯಾಗಿರುವ ಹಿಡಿಂಬನು, ತನ್ನ ತಂಗಿಯಾದ ಹಿಡಿಂಬಿಯು ತಡ ಮಾಡಿದ್ದರಿಂದ, ಅತಿ ಕೋಪಿಷ್ಠನಾಗಿ, ಹಲ್ಲುಗಳನ್ನು ಕಡಿಯುತ್ತಾ, ಔಡುಗಳನ್ನು ಕಚ್ಚುತ್ತಾ, ಕಣ್ಣುಗಳಲ್ಲಿ ಕೆಂಡವನ್ನು ಕಾರುತ್ತಾ, ಭುಜಯುಗ್ಮವನ್ನು ಅಪ್ಪಳಿಸುತ್ತಾ, ಕಾಲುಗಳಿಂದ ನೆಲವನ್ನು ಬಡಿಯುತ್ತಾ, ಮೇಘದಂತೆ ಘರ್ಜಿಸುತ್ತಾ, ಕೋರೆದಾಡೆಗಳನ್ನು ಮಸೆದು ಕೊಳ್ಳುತ್ತಾ, ಹಶಿವು ಬಾಯಾರಿಕೆಗಳಿಂದ ಪೀಡಿತನಾಗಿ—ನನಗೆ ಆಹಾರ ವಿಘ್ನವನ್ನು ಮಾಡಿದ ದುರಾತ್ಮರ್ಯಾರು? ನನ್ನ ದುರಾಗ್ರಹವನ್ನು ತಿಳಿದಿದ್ದರೂ, ಹಿಡಿಂಬಿಯು ಹಿಂತಿರಿಗಿ ಬಾರದೆ, ತಡವು ಮಾಡುವದಕ್ಕೆ ಕಾರಣವೇನು? ಎಂದು, ಆ ಹಿಡಿಂಬನು ತಾನು ಕೂತಿದ್ದ ಮರದ ಮೇಲಿನಿಂದ ಕೆಳಕ್ಕೆ ಧುಮುಕಿ, ಯುಧಿಷ್ಠಿರಾದಿಗಳು ಇದ್ದೆಡೆಗೆ ಬರುತ್ತಿರಲು; ಅತಿ ಭಯಂಕರನಾಗಿರುವಂಥ ಆತನ ಬರವನ್ನು ನೋಡಿ, ಹಿಡಿಂಬಿಯು ಭೀತಳಾಗಿ, ಭೀಮನನ್ನು ನೋಡಿ—ಎಲೈ, ದುಷ್ಟನಾದ ಹಿಡಿಂಬನು ಬರುತ್ತಾನೆ. ನೀನು ಇವರನ್ನು ಎಬ್ಬಿಸಿದರೆ, ನಾನು ಕಾಮರೂಪಿಯಾದ ಕಾರಣ ಎಲ್ಲಾದರೂ ಹೊತ್ತು ಕೊಂಡು ಹೋಗುತ್ತೇನೆನಲು; ಭೀಮನು,—ಎಲೈ, ರಾಕ್ಷಸಿಯೇ, ಈ ಹುಲು ರಕ್ಕಸನ ಬರವಿಗೆ ಭಯ ಪಟ್ಟು, ಶತ್ರು ಭೀಮನಾದ ನಾನು ಇವರ ನಿದ್ರಾ ಭಂಗವನ್ನು ಮಾಡುವದಿಲ್ಲ. ನಾನು ಮನುಷ್ಯ ಮಾತ್ರದವನೆಂದು ತಿಳಿಯ ಬೇಡ. ಈ ನಿಶಾಚರನು ಜೀವದ ಆಶೆಯನ್ನು

ತ್ಯಜಿಸಿ, ನನ್ನನ್ನು ಕೊಲಲಕ ಬರುತ್ತಾನೆ. ನೀನು ಹೆದರದೆ, ನಿಶ್ಚಿಂತಳಾಗಿರು, ಎನಲು; ಅಷ್ಟರಲ್ಲೇ ಹಿಡಿಂಬನು ಬಂದು, ದೊಡ್ಡ ತುರುಬಿನಲ್ಲಿ ಮುಡಿದಿರುವ ಹೂಸರವನ್ನೂ ಅತಿ ಸೂಕ್ಷ್ಮವಾಗಿ ನೆರಿ ಹಿಡಿದು ಉಟ್ಟಿರುವ ದಿವ್ಯಾಂಬರವನ್ನೂ, ತೊಟ್ಟಿರುವ ಅಂದಿಗೆ, ಪಾಡಗ, ಪಾದಸರ, ಕಿರಿಗಂಟೆ, ಒಡ್ಯಾಣ, ಕೈಸರ, ಕಡಗ, ಚಳಕೆ, ತಾಳೀಪದಕ, ಮುತ್ತಿನಸರ, ಚಿನ್ನದಸರ, ಹರಳೋಲೆ, ಮೂಗುತಿ, ಬಾವುಲಿ, ಮೊದಲಾದ ಆಭರಣಗಳನ್ನೂ, ಪೂರ್ಣ ಚಂದ್ರ ಸಮಾನವಾದ ಮುಖವನ್ನೂ, ಅಂದವಾಗಿರುವ ಹುಬ್ಬುಗಳನ್ನೂ, ಸಂಪಿಗೇ ಮೊಗ್ಗಿನೋಪಾದಿಯಲ್ಲಿರುವ ಮೂಗನ್ನೂ, ಕಂನೈದಿಲೆ ಪುಷ್ಪದ ಎಸಳಿನೋಪಾದಿಯಲ್ಲಿರುವ ನೇತ್ರಗಳನ್ನೂ, ಚಿನ್ನದ ವರ್ಣಕ್ಕೆ ಸಮಾನವಾದ ಶರೀರವನ್ನೂ ಹೊಂದಿ, ಭೀಮನ ಬಳಿಯಲ್ಲಿ ನಲವಿನಿಂದ ನಿಂತಿರುವ ತನ್ನ ತಂಗಿಯನ್ನು ನೋಡಿ, ಇವಳು ಪುರುಷಾಭಿಲಾಷೆಯಿಂದ ಹೀಗೆ ಮಾಡಿದಳೆಂದು ಕೋಪಿಸಿ ಕೊಂಡು—ಎಲೈ, ಹಿಡಿಂಬಿಯೇ, ನನ್ನ ಭೋಜನಕ್ಕೆ ಯಾವವನು ವಿಘ್ನವನ್ನು ಮಾಡಿದನು? ನಾನು ಹಸಿವಿನಿಂದ ಬಾಧೆ ಪಡುವದನ್ನು ಎಣಿಸದೆ, ನೀನು ಯಾರ ಬಲದಿಂದ ಇಲ್ಲಿನಿಂತೆ? ರಾಕ್ಷಸ ಕುಲಕ್ಕೆ ಹೀಗೆ ಅಪಕೀರ್ತಿಯನ್ನುಂಟು ಮಾಡಿದ ನಿನ್ನನ್ನು ಈಗಲೇ ವಧಿಸುತ್ತೇನೆಂದು, ಕೋರೆದಾಡೆಗಳು ಅದರುವ ಹಾಗೆ ದಂತಗಳನ್ನು ನರಿನರಿನೆ ಕಡಿಯುತ್ತಾ, ಅಟ್ಟಹಾಸವನ್ನು ಮಾಡಿ ಕೊಂಡು, ಸಮೀಪಕ್ಕೆ ಬರುವ ರಾಕ್ಷಸನನ್ನು ನೋಡಿ, ಭೀಮನು ತನ್ನ ಅಣ್ಣ ತಮ್ಮಂದಿರಿಗೂ ತಾಯಿಗೂ ನಿದ್ರಾ ಭಂಗವಾಗ ಕೂಡದೆಂದೆಣಿಸಿ,—ಎಲೈ, ರಾಕ್ಷಸಾಧಮನೇ, ನಿಲ್ಲು, ನಿಲ್ಲು, ಎಂದು ಹೇಳಿ, ಆತನ ಎದುರಿಗೆ ಹೋಗಿ, ನಿಂತು,—ಎಲೋ, ಹೇಡಿಯೇ, ತಂಗಿಯನ್ನು ಕೊಲ್ಲುವದಕ್ಕೆ ಅಪೇಕ್ಷಿಸಿದ ನಿನ್ನ ದಿಟ್ಟತನವನ್ನು ಸುಡ ಬೇಕು! ಲೋಕದಲ್ಲಿ ಸ್ತ್ರೀಯರು ಮದನಾಧೀನರಾಗಿ ಪುರುಷರನ್ನು ಬಯಸುವದು ಸಹಜವೇ. ನೀನು ಹೆಂಗಸಿನ ಮೇಲೆ ಕೈ ಮಾಡುವದು ಉಚಿತವಲ್ಲ. ನಿನ್ನಲ್ಲಿ ಬಲವಿದ್ದರೆ, ನನ್ನ ಸಂಗಡ ಯುದ್ಧ ಮಾಡು. ನಾನೊಬ್ಬನೇ ನಿನ್ನನ್ನು ಯಮ ಸನ್ನಿಧಾನಕ್ಕೆ ಕಳುಹಿಸುತ್ತೇನೆ. ಮತ್ತು ನಿನ್ನ ಕರ ಚರಣಾದ್ಯವಯವಗಳೆಲ್ಲವನ್ನು ನಾಯಿ, ನರಿ, ಹದ್ದು ಮುಂತಾದವುಗಳಿಗೆ ಹಂಚಿ ಕೊಟ್ಟು, ಈ ವನವನ್ನು ಅರಾಕ್ಷಸವಾಗಿ ಮಾಡಿ, ಸರ್ವರಿಗೂ ಸಂತೋಷವನ್ನುಂಟು ಮಾಡುತ್ತೇನೆಂದು ಹೇಳಲು;—

ಹಿಡಿಂಬನು,—ಎಲೈ, ನರಾಧಮನೇ, ನಿನ್ನನ್ನು ನೀನೇ ಯಾಕೆ ಹೊಗಳಿ ಕೊಳ್ಳುತ್ತೀ? ಸಾಮರ್ಥ್ಯವಿದ್ದರೆ, ನಿನ್ನ ಭುಜ ಬಲವನ್ನು ತೋರಿಸು. ಮುಂದೆ

ನಿನ್ನನ್ನು ಕೊಂದು, ನಿನ್ನ ರಕ್ತವನ್ನು ಹೀರಿ, ಆ ಮೇಲೆ ಇಲ್ಲಿ ಮಲಗಿರುವವರ ಮಾಂಸವನ್ನು ತಿಂದು, ಅನಂತರ ಈ ದುಷ್ಟಳನ್ನು ಸಂಹರಿಸುತ್ತೇನೆಂದು ಹೇಳಿ, ಯುದ್ಧ ಸನ್ನದ್ಧನಾಗಿ ಕಾಣಿಸಿ ಕೊಳ್ಳಲು; ಭೀಮ ಪರಾಕ್ರಮಶಾಲಿ ಯಾದ ಭೀಮಸೇನನು ಮುಖದಲ್ಲಿ ಮುಗುಳು ನಗೆಯನ್ನು ತೋರಿಸುತ್ತಾ, ಚಾಚಿರುವ ಆ ಹಿಡಿಂಬನ ತೋಳುಗಳನ್ನು ತನ್ನ ಬಾಹು ದಂಡಗಳಿಂದ ಸಿಂಹವು ಕ್ಷುದ್ರ ಮೃಗಗಳನ್ನು ಹಿಡಿದು ಕೊಳ್ಳುವಂತೆ ಘಟ್ಟಿಯಾಗಿ ಹಿಡಿದು ಕೊಳ್ಳಲು; ಆ ರಾಕ್ಷಸನು ಭೀಮನ ಭುಜ ಬಲಕ್ಕೆ ಆಶ್ಚರ್ಯ ಪಟ್ಟು, ರೋಷದಿಂದ ಆತನನ್ನು ಬಿಗಿದಪ್ಪಿ ಕೊಂಡು, ಅಟ್ಟಹಾಸವನ್ನು ಮಾಡಲು; ಭೀಮನು ಇನ್ನು ಕೋಪಿಸಿ ಕೊಂಡು—ರಾಕ್ಷಸನ ಸಿಂಹನಾದದಿಂದ ಇವರಿಗೆ ಎಚ್ಚರವಾದೀತು ಎಂದು ಎಣಿಸಿ, ಆ ರಾಕ್ಷಸನನ್ನು ಆಚೆಗೆ ಎಳ ಕೊಂಡು ಹೋಗಿ, ಮತ್ತೀ, ಮಾವು, ತಾಳೆ, ಹೊಂಗೆ, ಮುಂತಾದ ಮರಗಳಿಂದಲೂ, ಪರ್ವತ ಶಿಖರಗಳಿಂದಲೂ, ಗುಂಡು ಕಲ್ಲುಗಳಿದಲೂ, ಅವನೊಡನೆ ಹೋರಾಡುತ್ತಿರಲು; ಈ ಸಾಮು ಸರಿ ಯಿಲ್ಲವೆಂದೆಣಿಸಿ, ಬಾಹು ಯುದ್ಧವನ್ನು ಮಾಡ ತೊಡಗಿ, ಇಬ್ಬರು ಮದ್ದಾನೆಗಳೋಪಾದಿಯಲ್ಲಿ ರೋಷ ಭೀಷಣಾಕಾರಗಳಿಂದ ಕೂಡಿದವರಾಗಿ, ಸರಿಮಿಗಿಲಾಗಿ ಹತ್ತಿ ಕೊಂಡು, ಮಗುಚಿ, ವಿಂಗಡಿಸುತ್ತಾ, ಭುಜಗಳಿಗೆ ಭುಜಗಳನ್ನು ಆನಿಸಿ, ತಳ್ಳುತ್ತಾ, ಒಳ ಹೊಕ್ಕು, ಒಬ್ಬರನ್ನೊಬ್ಬರು ಎತ್ತಿ ಹಾಕುತ್ತಾ, ಶಿಕ್ಕಿದರೆ ತಿರಿಗಿ ಹಾಕುತ್ತಾ, ಕರ ಕೌಶಲಗಳನ್ನು ತೋರಿಸುತ್ತಾ, ಲಾಗಗಳನ್ನು ಹಾಕಿ, ಪಟ್ಟು ತಪ್ಪಿಸಿ ಕೊಂಡು, ಎಡಗೈಯಿಂದ ಕೊರಳನ್ನು ಒತ್ತಿ, ಹಿಡಿದು, ಮಂಡಿಗೆ ಮಂಡಿಯನ್ನು ತಾಕಿಸಿ, ತಾಡಿಸಿ, ತಲೆ ಕೆಳಗಾಗಿ ತಳ್ಳುತ್ತಾ, ವಾರೆಪಾಟನಲ್ಲಿ ಅಮುಕಿ ಕೊಂಡು, ಹೊಕ್ಕು, ಲಂಘಿಸಿ, ತಳ್ಳುತ್ತಾ, ಚಕ್ರದೋಪಾದಿಯಲ್ಲಿ ಗರಿಗರಿನೆ ತಿರುಗುತ್ತಾ, ತಮ್ಮ ಪಾದಗಳ ಪೆಟ್ಟಿನಿಂದ ಹೊದೆಗಳನ್ನೂ ಮರಗಳನ್ನೂ ಬಳ್ಳಿಗಳನ್ನೂ ಧ್ವಂಸಾ ಮಾಡುತ್ತಾ, ಬಾರಿಬಾರಿಗೂ ಉಲ್ಲಾಸದಿಂದ ಕೈಗಳನ್ನು ಅಪ್ಪಳಿಸುತ್ತಾ, ಕಲ್ಲುಗಳಂತಿರುವ ಮುಷ್ಟಿಗಳಿಂದ ಒಬ್ಬರನ್ನೊಬ್ಬರು ತಿವಿಯುತ್ತಾ, ಅಟ್ಟಹಾಸಗಳಿಂದ ದಿಗಂತರವನ್ನು ಮುಚ್ಚುತ್ತಾ, ಒಬ್ಬರೊಬ್ಬರ ಮೇಲೆ ರೋಷಯುಕ್ತರಾಗಿ ಸೆಣಸಾಡುತ್ತಿರುವ ಸಮಯದಲ್ಲಿ ಮರದ ಕೆಳಗೆ ನಿದ್ರೆ ಹೋಗುತ್ತಾ ಇದ್ದ ಕುಂತಿ, ಧರ್ಮಜಾದಿಗಳು ಎಚ್ಚತ್ತು, ಎದುರಿನಲ್ಲಿ ನಿಂತಿರುವ ಹಿಡಿಂಬಿಯಿಂದ ಸಕಲ ವೃತ್ತಾಂತವನ್ನು ತಿಳಿದು, ಭೀಮನಿಗೆ ಇಂಥ ಕಷ್ಟ ಬಂತೇ? ಎಂದು ಕ್ಲೇಶ ಪಡುತ್ತಿದ್ದರು.

ಆಗ ಅರ್ಜುನನು ಭೀಮನ ಸಮೀಪಕ್ಕೆ ಹೋಗಿ—ಎಲೈ, ಮಹಾತ್ಮನೇ, ನಾವು

ನಿದ್ರೆಯಿಂದ ಈ ವೃತ್ತಾಂತವನ್ನು ತಿಳಿಯದೆ ಹೋದೆವು. ಈಗ ಕುಂತಿ ಧರ್ಮ
ಜರನ್ನು ನಕುಲ ಸಹದೇವರು ನೋಡಿ ಕೊಳ್ಳುತ್ತಿದ್ದಾರೆ. ನಾನು ನಿನಗೆ ಸಹಾಯ
ಮಾಡ ಬಂದೆನು. ನೀನು ಸ್ವಲ್ಪ ಹೊತ್ತು ಸುಮ್ಮನಿರು, ಎನಲು; ಭೀಮನು,—
ಎಲೈ, ತಮ್ಮನೇ, ನನ್ನ ಬಾಹು ಮಧ್ಯದಲ್ಲಿ ಶಿಕ್ಕಿರುವ ಈ ಕಳ್ಳನು ಎಲ್ಲಿಗೆ
ಪ್ರಾಣ ಸಹಿತ ಹೋದಾನು? ನೀನು ಭಯ ಪಡ ಬೇಡ. ಸುಮ್ಮನೆ ನೋಡು
ತ್ತಿರು, ಎನಲು; ಅರ್ಜುನನು,—ಎಲೈ, ಭೀಮನೇ, ನೀನು ನಿನ್ನೆ ರಾತ್ರಿಯಿಂದ
ಇನ್ನೂ ಯುದ್ಧ ಪೂರೈಸಲಿಲ್ಲ. ಪ್ರಾತಃಕಾಲವಾಗುತ್ತಾ ಬಂತು. ಇವನನ್ನು
ಕೊಲ್ಲುವದಕ್ಕೆ ಯಾಕೆ ತಡ ಮಾಡುತ್ತೀ? ಇನ್ನು ಮೇಲೆ ಸಂಧ್ಯಾ ಸಮಯ
ಬರುತ್ತಲಿದೆ. ರೌದ್ರವೆಂಬ ಹೆಸರುಳ್ಳ ಸಮಯದಲ್ಲಿ ರಾಕ್ಷಸರಿಗೆ ಬಲ ಹೆಚ್ಚಾ
ವದೆಂದು, ಲೋಕ ರೂಢಿಯಾಗಿರುವದರಿಂದ, ಈತನ ಸಂಗಡ ವಿನೋದಗಳನ್ನು
ಮಾಡದೆ, ಶೀಘ್ರವಾಗಿ ಕೊಲ್ಲು, ಎನಲು; ಆ ಕ್ಷಣವೇ ಭೀಮನು ತನ್ನ ಭುಜ
ಬಲವನ್ನು ತೋರಿಸುತ್ತಾ, ಆ ರಾಕ್ಷಸನ ತೋಳುಗಳನ್ನು ತನ್ನ ಹಸ್ತದಿಂದ
ಹಿಡಿದು, ನೂರು ಸಾರಿ ಗರಿಗರಿನೆ ತಿರುಗಿಸಿ, ಅವನನ್ನು ಕುರಿತು—ಎಲೈ, ರಾಕ್ಷ
ಸಾಧಮನೇ, ಇಷ್ಟು ಕಾಲವು ಮನುಷ್ಯರಿಗೆ ಹಿಂಸೆಯನ್ನು ಮಾಡುತ್ತಾ, ಮಾಂಸ
ಗಳನ್ನು ಮೆದ್ದು, ಪುಷ್ಟನಾಗಿ, ಭೂಮಿಗೆ ಹೊರೆಯಾಗಿ ಬದುಕಿದ್ದೆ. ಇನ್ನು
ಮೇಲೆ ಸುಮ್ಮನೆ ಸತ್ತು ಹೋಗು. ಈ ವನವು ಈ ಹೊತ್ತು ಮೊದಲ್ಗೊಂಡು
ನಿಷ್ಕಂಟಕವಾಗಿ, ಸಕಲ ಜನ ಸಂಚಾರ ಯೋಗ್ಯವಾಗಿರಲಿ ಎಂದು ಹೇಳಿ, ಅವ
ನನ್ನು ಭೂಮಿಗೆ ಬಡಿದು, ತನ್ನ ಪಾದಗಳಿಂದ ಅವನನ್ನು ಉಜ್ಜುತ್ತಾ, ಕುತ್ತಿ
ಗೆಯನ್ನು ಹಿಡಿದು, ನುಲಿಯಲು; ಆ ಹಿಡಿಂಬನು ಮಳೆಯಲ್ಲಿ ನೆನೆದಿರುವ
ಭೇರಿಯ ಶಬ್ದದಂತೆ ವಿಕಾರ ಧ್ವನಿಯನ್ನು ಮಾಡುತ್ತಾ, ಮರಣವನ್ನೈದಿ
ದನು. ಆಗ ಕುಂತಿ ಧರ್ಮಜಾದಿಗಳೂ ದೇವತೆಗಳೂ ಅತ್ಯಂತ ಹರ್ಷಿತರಾದರು.

ಆ ತರುವಾಯ ಅರ್ಜುನನು—ಈ ವನ ಸಮೀಪದಲ್ಲಿ ಒಂದು ಪಟ್ಣವಿರುವಂತೆ
ಕಾಣಿಸುತ್ತೆ. ಈ ಗದ್ದಲವನ್ನು ಆ ಪಟ್ಣದವರು ತಿಳಿದರೆ, ನಮ್ಮ ವೃತ್ತಾಂತ
ಕೌರವರಿಗೆ ಹ್ಯಾಗಾದರೂ ತಿಳಿಯ ಬರುತ್ತೆ. ಇಲ್ಲಿಂದ ಶೀಘ್ರವಾಗಿ ಹೋಗ
ಬೇಕೆನಲು; ಎಲ್ಲರು ಆ ವನವನ್ನು ಬಿಟ್ಟು, ಮುಂದಕ್ಕೆ ಹೊರಟರು. ಹಿಡಿಂ
ಬಿಯು ಅವರ ಹಿಂಗಡೆಯಲ್ಲಿ ನಡೆದಳು. ಹೀಗೆ ಸ್ವಲ್ಪ ದೂರ ಹೋದ ಮೇಲೆ,
ಆ ಹಿಡಿಂಬಿಯು ಕುಂತಿ ಧರ್ಮರಾಯರಿಗೆ ನಮಸ್ಕರಿಸಿ, ಕೈ ಕಟ್ಟಿ ನಿಂತು
ಕೊಂಡು—ಎಲೈ, ತಾಯೇ, ನಾನು ಭೀಮನನ್ನು ನೋಡಿದ್ದು ಮೊದಲು, ಆತನನ್ನೇ
ವರಿಸಿ ಇದ್ದೇನೆ. ಆತನೆನಗೆ ಪತಿಯಾಗದೆ ಹೋದರೆ, ನನ್ನ ಪ್ರಾಣಗಳು ನಿಲ್ಲ

ಲಾರವು. ಆದ್ದರಿಂದ ನೀವಾತನನ್ನು ಒಡಂಬಡಿಸಿ, ನನಗೆ ಪ್ರಾಣದಾನವನ್ನು ಮಾಡ ಬೇಕು. ನಾನು ದುಷ್ಟ ಸ್ತ್ರೀ ಎಂದು ಎಣಿಸ ಬೇಡಿರಿ! ನಾನು ಸಾಲಕಟಂಕಟಾ ಎಂಬ ಅಪ್ಸರ ಸ್ತ್ರೀಯು; ನಾನು ತ್ರಿಕಾಲಜ್ಞಳು. ನಿಮ್ಮನ್ನು ಧೃತರಾಷ್ಟ್ರನು ವಾರಣಾವತಕ್ಕೆ ಕಳುಹಿಸಿದ್ದನ್ನೂ, ಅರಗಿನ ಮನೆಯಿಂದ ನೀವು ವಿದುರನ ಸಹಾಯದಿಂದ ತಪ್ಪಿಸಿ ಕೊಂಡದ್ದನ್ನೂ, ಇಲ್ಲಿಂದ ಮುಂದೆ ಹೋದರೆ, ಶಾಲಿಹೋತ್ರಾಶ್ರಮದಲ್ಲಿ ನಿಮಗೆ ವೇದವ್ಯಾಸರ ಸಂದರ್ಶನ ಉಂಟಾಗುವದನ್ನೂ, ಅವರ ಅನುಗ್ರಹದಿಂದ ಮುಂದೆ ನಿಮಗಾಗ ತಕ್ಕ ಶುಭವನ್ನೂ ಬಲ್ಲೆನು, ಎಂದು ಹೇಳಲು; ಆ ಕುಂತಿಯು ಧರ್ಮಜನೊಡನೆ—ಇವಳು ದುಷ್ಟ ಸ್ತ್ರೀಯಲ್ಲ. ಭೀಮನು ಪರಿಗ್ರಹಿಸ ಬಹುದೆಂದು ಹೇಳಲು; ಅನಂತರದಲ್ಲಿ ಧರ್ಮಜನು ಭೀಮನನ್ನು ಕರೆದು—ನೀನು ನಮ್ಮಿಬ್ಬರ ಅಪ್ಪಣೆಯ ಪ್ರಕಾರ ಈಕೆಯನ್ನು ಪರಿಗ್ರಹಿಸು ಎಂದು ಆಜ್ಞಾಪಿಸಲು; ಭೀಮನು ಸಮ್ಮತಿಸಿ, ಅವಳನ್ನು ವರಿಸಿದನು. ಹೀಗೆ ಇವರು ಬಹು ದೂರ ನಡೆದು, ಶಾಲಿಹೋತ್ರಾಶ್ರಮಕ್ಕೆ ಬಂದು ಸೇರಿದರು.

### 61. Bhima Slays Demon Bake.

### ೬೧. ಬಕಾಸುರ ಸಂಹಾರ.

ಆ ಬಳಿಕ ಪಾಂಡವರು ಶಾಲಿಹೋತ್ರಾಶ್ರಮದಲ್ಲಿ ಆ ಮಹಾನುಭಾವನ ದೆಸೆಯಿಂದ ಪೂಜಿತರಾಗಿ, ಜಟೆಗಳನ್ನು ಧರಿಸಿ, ನಾರು ಸೀರೆಗಳನ್ನುಟ್ಟು, ಕೃಷ್ಣಾಜಿನವನ್ನು ಹೊದ್ದು ಕೊಂಡು, ತಾಪಸ ವೇಷವನ್ನು ಧರಿಸಿ ಕೊಂಡು, ಬ್ರಾಹ್ಮಣರೋಪಾದಿಯಲ್ಲಿ ವೇದ ವೇದಾಂಗಗಳನ್ನು ಓದುತ್ತಾ, ಉಪನಿಷತ್ಪಾರಾಯಣವನ್ನು ಮಾಡುತ್ತಾ, ನೀತಿಶಾಸ್ತ್ರ ಧರ್ಮಶಾಸ್ತ್ರಗಳನ್ನು ಪಠಿಸುತ್ತಾ, ಶಾಲಿಹೋತ್ರನ ಅಪ್ಪಣೆಯನ್ನು ತೆಗೆದು ಕೊಂಡು, ಆ ವನದಿಂದ ಹೊರಟು ಬರುವ ಮಾರ್ಗದಲ್ಲಿ ದುಷ್ಟ ಮೃಗಗಳನ್ನು ಕೊಲ್ಲುತ್ತಾ, ಅತಿ ತ್ವರಿತದಿಂದ ಮತ್ಸ್ಯ, ತ್ರಿಗರ್ತ, ಪಾಂಚಾಲ ದೇಶಗಳನ್ನೂ ನಾನಾ ಬಿದುರಿನ ಅರಣ್ಯಗಳನ್ನೂ ರಮಣೀಯ್ಯ ವನ ಪ್ರದೇಶಗಳನ್ನೂ ವಿಮಲೋದಕಗಳುಳ್ಳ ಸರೋವರಗಳನ್ನೂ ದಾಟುತ್ತಾ, ಮಾರ್ಗದಲ್ಲಿ ನಡೆಯಲಾರದ ತಮ್ಮ ತಾಯಿಯನ್ನು ಉಪಚರಿಸುತ್ತಾ, ಕೆಲವು ಪ್ರದೇಶಗಳಲ್ಲಿ ಪಚ್ಛನ್ನರಾಗಿ ಹೋಗುತ್ತಾ, ಮಾರ್ಗದಲ್ಲಿ ತಮ್ಮ ಮುತ್ತಪ್ಪನಾದ ವ್ಯಾಸ ಮುನೀಶ್ವರನನ್ನು ಕಂಡು, ಆತನ ಪಾದಗಳಿಗೆ ಕುಂತೀಸಮೇತರಾಗಿ ನಮಸ್ಕರಿಸಿ, ವಿನಯದಿಂದ ನಿಂತಿರಲು; ಆ ವ್ಯಾಸನು,—ಎಲೈ, ಮಹಾತ್ಮರಾ, ಹಿಡಿಂಬವಧೆ ಬಹು ಜನಾನಂದಕರವಾಯಿತು. ಇಲ್ಲಿಗೆ ಸಮೀಪದಲ್ಲಿ ಏಕಚಕ್ರಪುರವೆಂಬೊಂದು ಪಟ್ಟಣವಿದೆ. ಆ ಪಟ್ಟಣವು ರಮಣೀಯವಾಗಿ

ನಿಮಗೆ ವಾಸ ಯೋಗ್ಯವಾಗಿ ಇರುವದು. ಆ ಪಟ್ಣಕ್ಕೆ ನಾನು ಒಂದು ವೇಳೆ ಬರುತ್ತೇನೆ. ನೀವು ಪ್ರಚ್ಛನ್ನ ರೂಪದಿಂದ ಇರಿ ಎಂದು, ಹೇಳಿ ಹೋಗಲು; ಆ ಪಾಂಡವರು ಏಕಚಕ್ರನಗರಕ್ಕೆ ಬಂದು, ಅಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಇಳಿದು ಕೊಂಡು, ಅಲ್ಲಿ ನಾನಾ ಪ್ರಕಾರವಾದ ವನಗಳನ್ನೂ ರಮಣೀಯವಾದ ಭೂ ಪ್ರದೇಶಗಳನ್ನೂ ವಿಮಲೋದಕವುಳ್ಳ ಸರಸ್ಸುಗಳನ್ನೂ ನೋಡುತ್ತಾ, ಕಾಲಹರಣ ಮಾಡುತ್ತಿದ್ದರು. ಮತ್ತು ಭೀಮಾರ್ಜುನ ನಕುಲ ಸಹದೇವರು ಭಿಕ್ಷೆಯನ್ನು ಮಾಡಿ ಕೊಂಡು ಬಂದು, ಆ ಅನ್ನದಿಂದ ಕುಂತಿ ಧರ್ಮರಾಯರನ್ನು ಪೋಷಿಸುತ್ತಾ, ಶಮ ದಮಾದಿ ಸದ್ಗುಣಗಳಿಂದ ಅಲ್ಲಿದ್ದ ಜನರ ಮನೋರಂಜನವನ್ನು ಮಾಡುತ್ತಾ, ಕಾಲಕ್ಷೇಪ ಮಾಡಿ ಕೊಂಡಿದ್ದರು.

ಆ ಪಟ್ಣದ ಜನರು ಈ ಪಾಂಡವರನ್ನು ನೋಡಿ,—ನೋಡ ತಕ್ಕ ಆಕಾರವುಳ್ಳವರಾಗಿಯೂ, ವಿಶುದ್ಧ ಸ್ವಭಾವರಾಗಿಯೂ, ದೇವ ಕುಮಾರ ಸಮಾನರಾಗಿಯೂ, ಸರ್ವ ಲಕ್ಷಣ ಸಂಪನ್ನರಾಗಿಯೂ ಇರುವ ಈ ಕುಮಾರರು ರಾಜ್ಯಾರ್ಹರೇ ಹೊರತಾಗಿ ಭಿಕ್ಷಾ ಯೋಗ್ಯರಲ್ಲ. ಸುಕುಮಾರ ಶರೀರಗಳಾದ ಇವರನ್ನು ನೋಡಿದರೆ, ಏನೋ ಒಂದು ನಿಮಿತ್ತದಿಂದ ಪ್ರಚ್ಛನ್ನರಾಗಿ ಈ ರೀತಿಯಲ್ಲಿದ್ದಾರೆಂದು, ಒಬ್ಬರ ಸಂಗಡಲೊಬ್ಬರು ಹೇಳಿ ಕೊಳ್ಳುತ್ತಾ, ಅವರಿಗೆ ಹೆಚ್ಚಾಗಿ ಭಿಕ್ಷೆಯನ್ನಿಕ್ಕುತ್ತಾ, ಆದರಿಸುತ್ತಿದ್ದರು. ಹೀಗೆ ಭೀಮಾದಿಗಳು ಭಿಕ್ಷೆಯನ್ನು ತಂದು, ತಾಯಿಯ ವಶಕ್ಕೆ ಒಪ್ಪಿಸಲು; ಅವಳು ತಂದ ಅನ್ನದಲ್ಲಿ ಅರ್ಧ ಸರಿಯಾಗಿ ಭೀಮನಿಗೆ ಕೊಟ್ಟು, ಉಳಿದ ಅರ್ಧವನ್ನು ತಾವೈದು ಜನವು ಭುಜಿಸುತ್ತಿದ್ದರು. ಆದರೆ ಭೀಮನು ಮೊದಲು ರಾಜ ಯೋಗ್ಯವಾಗಿ ಷಡ್ರಸೋಪೇತಗಳಾಗಿ ಇರುವ ಅನ್ನವನ್ನು ಅಪರಿಮಿತವಾಗಿ ಭಕ್ಷಿಸಿದವನಾದ್ದರಿಂದ, ಆ ಭಿಕ್ಷಾಶನದಿಂದ ತೃಪ್ತಿಯನ್ನು ಹೊಂದದೆ, ದಿನ ದಿನಕ್ಕೂ ಶರೀರದಲ್ಲಿ ಇರುವ ಕಾಂತಿಯು ತಪ್ಪಿ, ಬಡವಾಗುತ್ತಾ ಬಂದನು. ಅವರೆಲ್ಲರು ತಂದ ಭಿಕ್ಷಾನ್ನದಲ್ಲಿ ಅರ್ಧವು ಉರಿಯುತ್ತಲಿರುವ ಬೆಂಕಿಯಲ್ಲಿ ತುಪ್ಪದ ಹನಿಯೋಪಾದಿಯಲ್ಲಿ ಆತನಿಗೆ ಏನೂ ಆಗದೆ ಇತ್ತು. ಈ ಪ್ರಕಾರದಲ್ಲಿ ಆ ಮಹಾನುಭಾವರು ಕೆಲವು ದಿವಸ ಕಾಲಕ್ಷೇಪ ಮಾಡುತ್ತಿರಲು; ಆ ಭೀಮನು ಒಬ್ಬ ಕುಂಬಾರನಿಗೆ ನೂರು ಸಾರಿ ತರುವ ಮಣ್ಣನ್ನು ಒಂದೇ ಸಾರಿ ತಂದು ಹಾಕಲು; ಆತನು ಇವನಿಗೆ ಒಂದು ದೊಡ್ಡ ಗುಡಾಣವನ್ನು ಮಾಡಿ ಕೊಡಲು; ಭೀಮನು ಅದನ್ನು ಬಲ ಅಂಗೈಯಲ್ಲಿ ಇಟ್ಟು ಕೊಂಡು, ತಾನೊಬ್ಬನೇ ಭಿಕ್ಷಾರ್ಥವಾಗಿ ಹೋಗಲು; ಜನರು ಅವನನ್ನು ನೋಡಿ, ನಗುತ್ತಾ, ಬೇಕಾದ ಭಕ್ಷ್ಯ ಭೋ

ಜ್ಯಗಳನ್ನು ಭಿಕ್ಷೆಯಾಗಿ ಆ ಗುಡಾಣಕ್ಕೆ ತಂದು ಹಾಕುತ್ತಾ ಇದ್ದರು. ಭೀಮನು ಆ ಗುಡಾಣದ ತುಂಬಾ ಭಿಕ್ಷೆಯನ್ನು ತಂದು, ಅದೆಲ್ಲಾ ತಾನೊಬ್ಬನೇ ತಿಂದು—ಈ ಅನ್ನವು ಲೇಶವಾದರೂ ನನ್ನ ಹಸಿವಿಗೆ ಸಾಲದೆಂದು, ನಿತ್ಯವು ತಾಯಿಯ ಸಂಗಡ ಗುಣುಗುಟ್ಟುತ್ತಾ ಇರುತ್ತಿದ್ದನು.

ಹೀಗೆ ಕೆಲವು ದಿವಸಗಳು ಕಳೆದ ತರುವಾಯ, ಒಂದಾನೊಂದು ದಿವಸ ಅವರು ಇಳಿದು ಇದ್ದ ಬ್ರಾಹ್ಮಣನ ಮನೆಯೊಳಗೆ ರೋದನ ಧ್ವನಿ ಕೇಳಿಸಿತು. ಆಗ ಕುಂತೀ ದೇವಿಯು ಆ ಧ್ವನಿಯನ್ನು ಕೇಳಿ, ಕಾರುಣ್ಯ ಭಾವದಿಂದ ಹೃದಯದಲ್ಲಿ ಪಶ್ಚಾತ್ತಾಪ ಪಡುತ್ತಾ, ತನ್ನ ಸಮೀಪದಲ್ಲಿ ಇದ್ದ ಭೀಮಸೇನನನ್ನು ನೋಡಿ—ಎಲೈ, ಕುಮಾರನೇ, ನಾವು ಈ ಬ್ರಾಹ್ಮಣನ ಮನೆಯಲ್ಲಿ ಧೃತರಾಷ್ಟ್ರಾದಿಗಳಿಗೆ ತಿಳಿಯದೆ ಇರುವ ರೀತಿಗೆ, ಕೆಲವು ದಿವಸಗಳು ಇದ್ದೆವು. ಇವರಿಗೆ ಏನು ಉಪಕಾರವನ್ನು ಮಾಡೋಣ ಎಂದು ಯಾವಾಗಲೂ ಚಿಂತಿಸುತ್ತಿದ್ದೇನೆ. ಉಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡ ಬೇಕೆಂದು ಎಣಿಸಿದವನು ಪುರುಷ ಮುಖ್ಯನೆನಿಸಿ ಕೊಳ್ಳುವನು. ಈ ಮನೆಯ ಬ್ರಾಹ್ಮಣನಿಗೆ ಏನೋ ಪ್ರಾಣಾಪತ್ತು ಉಂಟಾಗಿರುವ ಹಾಗೆ ತೋರುತ್ತೆ. ನಾನೇನು ಮಾಡಲಿ? ಎಂದು ಮರುಗುತ್ತಿರಲು; ಭೀಮನು ತಾಯಿಯನ್ನು ಕುರಿತು—ಎಲೈ, ತಾಯೇ, ಇವರಿಗೆ ದುಃಖ ಬರುವದಕ್ಕೆ ಕಾರಣವೇನು? ಅದನ್ನು ಕೇಳಿ, ತಿಳಿದು ಕೊಂಡು ಬಾ. ಎಂಥಾ ದುಷ್ಕರವಾದ ಕಾರ್ಯವಾದರೂ ನಾನು ನಡಿಸುತ್ತೇನೆ, ಎನಲು; ಅಷ್ಟರಲ್ಲೇ ರೋದನ ಧ್ವನಿ ಹೆಚ್ಚುತ್ತಾ ಬರಲು; ಕುಂತಿಯು ಕಟ್ಟಿ ಹಾಕಿದ ಕರುವಿನ ಸಮೀಪಕ್ಕೆ ಬರುವ ಹಸುವಿನ ಹಾಗೆ ವಾತ್ಸಲ್ಯದಿಂದ ಆತನ ಮನೆಯ ಒಳಗೆ ಹೋಗಿ, ಅಲ್ಲಿ ಹೆಂಡತಿ, ಮಗಳು, ಮಗನು, ಇವರ ಸಹಿತ ಪ್ರಲಾಪಿಸುತ್ತಿರುವ ಬ್ರಾಹ್ಮಣನ ಸಮೀಪದಲ್ಲಿ ಕೂತು ಕೊಳ್ಳಲು; ಆ ಬ್ರಾಹ್ಮಣನು—ಅಕಟಕಟಾ! ನಿಸ್ಸಾರವಾಗಿ, ನಿರರ್ಥಕವಾಗಿ, ಸಕಲ ದುಃಖಗಳಿಗೆ ಮೂಲವಾಗಿ, ನಿತ್ಯಪರಾಧೀನವಾಗಿರುವ ನನ್ನ ಬದುಕಿನೋಪಾದಿಯಲ್ಲಿರುವ ಬದುಕು ಯಾರಿಗಾದರೂ ಉಂಟೇ? ಶರೀರ ದುಃಖಗಳನ್ನೂ ಮನೋದುಃಖಗಳನ್ನೂ ಛಳಿ ಬಿಸಲು ಮೊದಲಾದ ದ್ವಂದ್ವ ದುಃಖಗಳನ್ನೂ ನಾನು ಜೀವಂತನಾಗಿರುವದರಿಂದಲ್ಲವೇ ಅನುಭವಿಸ ಬೇಕಾಯಿತು? ಏಕಾಕಿಯಾಗಿ ಇರುವ ಪುರುಷನಿಗೆ ಧರ್ಮಾರ್ಥ ಕಾಮಗಳು ಯಾವಾಗಲೂ ಆಗಲಾರವು. ಅದು ಹಾಗಿರಲಿ; ಹಣದ ಸಂಪಾದನೆಗೆ ಸಾಧನವು ಹಣದ ಆಶೆಯು. ದೈವಾಧೀನದಿಂದ ಹಣವು ಲಭಿಸಿದರೆ, ಅದು ಮತ್ತು ಕ್ಲೇಶ ಕಾರಣವಾಗಿರುವದು. ಹಾಗೆ ಲಬ್ಧವಾದ

ಹಣದಲ್ಲಿ ಮೋಹವು ಹುಟ್ಟಿದರೆ, ಆ ಹಣ ಹೋಗುವ ಕಾಲದಲ್ಲಿ ಆಗುವಂಥ ದುಃಖವು ಅಪರಿಮಿತವಾಗಿರುವದು. ಇಷ್ಟ ವಸ್ತುಗಳಲ್ಲಿ ಯಾರಿಗೆ ಎಷ್ಟು ಪ್ರೀತಿ ಹೆಚ್ಚುವದೋ, ಆತನು ಆ ಪ್ರೀತಿಗೆ ತನ್ನ ಶೋಕವೆಂಬ ದಳಿಯನ್ನು ಎದೆಯಲ್ಲಿ ನೆಟ್ಟು ಕೊಳ್ಳುವನು. ಹೀಗೆ ಸ್ವಲ್ಪ ಸುಖಕ್ಕಾಗಿ ದುಃಖ ಬಹಳವಾದ ಸಂಸಾರವನ್ನು ಐದಿ, ಹೆಂಡತಿಯನ್ನು ಕಟ್ಟಿ ಕೊಂಡು, ಏಕ ಪುತ್ರನುಳ್ಳ ನನಗೆ ಪುತ್ರ ಪರಿತ್ಯಾಗ ರೂಪ ವ್ಯಸನ ಪ್ರಾಪ್ತವಾಯಿತು. ಏನು ಮಾಡಲಿ? ಎಲ್ಲಿಗೆ ಹೋಗಲಿ? ಯಾರಿಗೆ ಹೇಳಲಿ? ಈ ಆಪತ್ತು ಪರಿಹರವಾಗುವ ಉಪಾಯು ಯಾವದೂ ತೋಚುವದಿಲ್ಲ. ನಾನು—ಪುತ್ರ ದಾರಾ ಸಮೇತನಾಗಿ ಈ ದೇಶವನ್ನು ಬಿಟ್ಟು, ನಿರುಪದ್ರವಾದ ಮತ್ತೊಂದು ದೇಶಕ್ಕೆ ಹೋಗೋಣ ಎಂದು ಎಷ್ಟು ಹೇಳಿದರೂ, ನನ್ನ ಮಾತನ್ನು ಕೇಳದೆ,—ಈ ದೇಶದಲ್ಲಿ ಹುಟ್ಟಿ, ಬೆಳೆದು, ನಾನು ನನ್ನ ತಂದೆ ತಾಯಿಗಳನ್ನು ಬಿಟ್ಟು, ದೇಶಾಂತರಕ್ಕೆ ಹ್ಯಾಗೆ ಬಂದೇನು? ಎಂದು ಹೇಳಿದೆಯಲ್ಲ? ಅಂಥ ತಾಯಿ ತಂದೆಗಳು ಪರಲೋಕಕ್ಕೆ ಹೋದರು. ಇನ್ನು ಈ ದೇಶದಲ್ಲಿ ಇದ್ದದ್ದಕ್ಕೆ ಏನು ಪ್ರಯೋಜನ? ಭೋಜನವೂ ದೇಶವೂ ಸ್ತ್ರೀ ಜನವೂ ಬಂಧು ಜನವೂ ಪ್ರತಿಕೂಲವಾದರೆ, ಪ್ರಾಜ್ಞನಾದವನು ಕಾರ್ಯ ಗೌರವದಿಂದ ಗರುಡ ಹಂಸಗಳೋಪಾದಿಯಲ್ಲಿ ಹಾರಿ ಹೋಗ ಬೇಕು. ಈ ಶಾಸ್ತ್ರವನ್ನು ಎಣಿಸದೆ, ನಾನು ಎಷ್ಟು ಹೇಳಿದರೂ, ಕೇಳದೆ, ಇಲ್ಲಿ ಇದ್ದದರಿಂದ ನಮಗೆ ಈ ದುರ್ದಶೆ ಪ್ರಾಪ್ತವಾಯಿತು. ಈ ದುಃಖವಷ್ಟನ್ನು ನೀನನುಭವಿಸೆನಲು;

ಆ ಬ್ರಾಹ್ಮಣ ಸ್ತ್ರೀಯು—ನೀವು ಯಾಕೆ ಕ್ಲೇಶ ಪಡುತ್ತಿದ್ದೀರಿ? ನನ್ನನ್ನು ಆ ಬಕನಿಗೆ ಆಹಾರವಾಗಿ ಕೊಟ್ಟು ಬಿಡಿ, ಎನಲು; ಆ ಬ್ರಾಹ್ಮಣನು ಇಂಥ ಅವಲಕ್ಷಣ ದೇಶದಲ್ಲಿ ಇದ್ದದರಿಂದ ನಮ್ಮ ನಾಲ್ಕು ಮಂದಿಗಳೊಳಗೆ ಒಬ್ಬರಿಗೆ ನಾಶವು ಪ್ರಾಪ್ತವಾಗಿಧೆ. ಆದರೆ ನನ್ನ ಕೂಡ ಉಚಿತವಾದ ಕರ್ಮಗಳನ್ನು ಆಚರಿಸುತ್ತಾ, ಸಾತ್ವಿಕ ಗುಣಗಳೊಡನೆ ಕೂಡಿ, ನನ್ನನ್ನು ರಕ್ಷಿಸಿ ಕೊಂಡು, ದೈವ ವಶದಿಂದ ದೊರಕಿದ ಅರ್ಥದಿಂದ ಸಂಸಾರವನ್ನು ತಳ್ಳಿ ಕೊಂಡು, ತಾಯಿ ತಂದೆಗಳು ಬಾಲ್ಯದಲ್ಲಿಯೇ ಮದುವೇ ಮಾಡಿದ್ದರಿಂದ ಅಧಿಕವಾದ ಅನುರಾಗದೊಡನೆ ಕೂಡಿ, ಮಂತ್ರ ಪೂರ್ವಕವಾಗಿ ಕೈ ಹಿಡಿದು, ಸತ್ಕುಲದಲ್ಲಿ ಹುಟ್ಟಿ, ಮಕ್ಕಳನ್ನು ಪಡೆದು, ಮತ್ತೊಬ್ಬರನ್ನು ಅರಿಯದೆ, ನನಗೆ ಅನುಕೂಲಳಾಗಿ ಸದಾಚಾರ ಸಂಪನ್ನಳಾಗಿ ಇರುವ ಈ ಧರ್ಮ ಪತ್ನಿಯನ್ನು ಹ್ಯಾಗೆ ಬಿಡಲಿ? ಅಪ್ರಾಪ್ತ ಯೌವನನಾಗಿ, ಗಡ್ಡ ಮೀಸೆಗಳು ಬಾರದೆ ಇರುವಂಥಾವ

ನಾಗಿ, ಇಹಪರ ಸೌಖ್ಯ ಪ್ರದನಾಗಿ, ಸಕಲ ಜನೋಪಲಾಲನೀಯನಾಗಿ, ಪಿತೃ ರುಣ ವಿಮೋಚಕನಾಗಿ, ವಂಶಾಭಿವೃದ್ಧಿಕರನಾಗಿ, ನನ್ನನಂತರ ನನಗೆ ಪಿಂಡೋದಕ ಪ್ರದಾನಗಳಿಂದ ಪರಲೋಕವನ್ನು ಕಲ್ಪಿಸುವಂಥ ಈ ಪುತ್ರನನ್ನು ಹ್ಯಾಗೆ ಬಿಡಲಿ? ಒಬ್ಬ ಬ್ರಹ್ಮಚಾರಿಯ ನಿಮಿತ್ತವಾಗಿ ಬ್ರಹ್ಮ ಸಂಕಲ್ಪದಿಂದ ಹುಟ್ಟಿರುವಂಥವಳಾಗಿ, ನನಗೆ ದೌಹಿತ್ರ ಲೋಕಗಳನ್ನು ಕಲ್ಪಿಸುವಂಥವಳಾಗಿ, ನನ್ನ ಗರ್ಭದಲ್ಲಿ ಹುಟ್ಟಿರುವ ಈ ಕನ್ಯಾರತ್ನವನ್ನು ಹ್ಯಾಗೆ ಬಿಟ್ಟು ಬಿಡುವೆನು? ಲೋಕದಲ್ಲಿ ಕೆಲವರು,–ತಂದೆಗೆ ಮಗನಲ್ಲಿಯೂ, ತಾಯಿಗೆ ಮಗಳಲ್ಲಿಯೂ ಪ್ರೀತಿ ಉಂಟಾಗಿರುವದು ಎಂದು ಹೇಳುವರು. ನನಗಾದರೋ, ಇಬ್ಬರಲ್ಲಿಯೂ ಸಮನಾದ ಪ್ರೀತಿ ಇದೆ. ಮತ್ತು ಹೆಣ್ಣಿನದೆಸೆಯಿಂದ ನನಗೆ ಪುಣ್ಯಲೋಕಗಳೂ ವಂಶಾಭಿವೃದ್ಧಿಯೂ ಸೌಖ್ಯವೂ ಆಗುವದರಿಂದ, ಬುದ್ಧಿ ಸಂಪನ್ನೆಯಾಗಿ, ದೋಷರಹಿತೆಯಾಗಿ, ಮದುವೆಯಾದ ಮೇಲೆ ಯಾವನ ಮನೆಗೆ ಹೋಗಿ, ಗಂಡನಿಗೆ ಅನುಕೂಲವಾಗಿ ನಡೆದು ಕೊಂಡು, ಆತನಿಂದ ಸಕಲ ಸೌಖ್ಯಗಳನ್ನು ಪಡೆಯ ಬೇಕೆಂದು ಎಣಿಸಿ, ಗರ್ವವನ್ನು ಬಿಟ್ಟು, ವಿನಯವಾಗಿ ನಡೆದು ಕೊಳ್ಳುವ ಈ ಹೆಣ್ಣು ಮಗಳನ್ನು ಹ್ಯಾಗೆ ಬಿಟ್ಟು ಬಿಡುವೆನು? ಈ ಮಕ್ಕಳನ್ನು ಬಿಟ್ಟರೆ, ಪರಲೋಕದಲ್ಲಿ ನನ್ನ ದುಃಖವು ತೀರದು. ಈ ಮಕ್ಕಳು ಚಿಕ್ಕವರಾದ್ದರಿಂದ ನನ್ನನ್ನು ಬಿಟ್ಟು, ನಿಮಿಷವು ನಿರ್ವಹಿಸಲಾರವು. ಆದದರಿಂದ ಈ ಮೂರು ಮಂದಿಯೊಳಗೆ ಒಬ್ಬರನ್ನೂ ಬಿಡುವದಕ್ಕಾಗುವದಿಲ್ಲ. ಯಾವ ಪ್ರಯತ್ನದಿಂದಲಾದರೂ ಈ ಆಪತ್ತನ್ನು ಪರಿಹರಿಸುವದಕ್ಕೆ ಉಪಾಯವನ್ನು ಕಾಣದೆ ಇರುವದರಿಂದ, ತಾಯಿಯೂ, ಮಗಳೂ, ತಾನೂ ಏಕ ಕಾಲದಲ್ಲಿ ಸಾಯುವದೇ ಉಚಿತವೆಂದು ನಿಶ್ಚೈಸಿದನು.

ಎಲ್ಲರು ಏಕ ಕಾಲದಲ್ಲಿ ಸತ್ತು ಹೋಗ ಬೇಕೆಂದು, ಹಂಬಲಿಸುತ್ತಲಿರುವ ಪತಿಯನ್ನು ಕುರಿತು ಹೆಂಡತಿಯು ಇಂತೆಂದಳು–ಎಲೈ, ನಾಯಕನೇ, ಮೂಢ ಮನುಷ್ಯನೋಪಾದಿಯಲ್ಲಿ ನೀನು ಯಾತಕ್ಕೆ ಕ್ಲೇಶ ಪಡುತ್ತಿದ್ದೀ? ವಿಶೇಷವಾಗಿ ಸಂತಾಪಕ್ಕೆ ಇದು ಕಾಲವಲ್ಲ. ಪುರುಷರು ಧೈರ್ಯಗೆಡುವರೇ? ಹುಟ್ಟಿದಾಗಲೇ ಮನುಷ್ಯನಿಗೆ ಮರಣವು ನಿಶ್ಚಯವಾಗಿರುವದು. ಅವಶ್ಯವಾಗಿ ಮಾಡತಕ್ಕಂಥ ಕಾರ್ಯಕ್ಕೆ ಕ್ಲೇಶ ಪಟ್ಟು, ಪ್ರಯೋಜನವೇನು? ಪುತ್ರ ಮಿತ್ರ ಕಳತ್ರಾದಿಗಳು ನಿನ್ನ ನಿಮಿತ್ತವಾದ್ದರಿಂದ, ನೀನು ಸುಖವಾಗಿದ್ದು, ನನ್ನನ್ನು ಕಳುಹಿಸಿ ಬಿಡು. ಪತಿಯ ನಿಮಿತ್ತವಾಗಿ ಪ್ರಾಣಗಳನ್ನು ಪರಿತ್ಯಜಿಸುವದಕ್ಕಿಂತ ಸ್ತ್ರೀಯರಿಗೆ ಮತ್ತೊಂದು ಧರ್ಮ ಉಂಟೇ? ನಿನ್ನ ನಿಮಿತ್ತ ನಾನು ಶರೀರ ತ್ಯಾಗಾ

ಮಾಡಿದರೆ, ಈ ಲೋಕದಲ್ಲಿ ನಿನಗೆ ಸೌಖ್ಯವೂ, ಪರಲೋಕದಲ್ಲಿ ನನಗೆ ಗತಿಯೂ
ಉಂಟಾಗುವದು. ಲೋಕದಲ್ಲಿ ಮದುವೆಯಾಗುವದು ಸಂತಾನಾರ್ಥವಾದ್ದ
ರಿಂದ, ಅಂಥ ಸಂತಾನವು ಕನ್ಯಾ ಕುಮಾರ ರೂಪದಿಂದ ಆಯಿತು. ನಾನು
ನಿನ್ನ ರುಣವನ್ನು ತೀರಿಸಿ ಕೊಂಡಿದ್ದೇನೆ. ನೀನಿದ್ದರೆ, ಈ ಚಿಕ್ಕವರಿಗೆ ಸೌಖ್ಯ
ಉಂಟು. ನಾನು ಅಬಲೆಯಾದ್ದರಿಂದ ಇವರನ್ನು ರಕ್ಷಿಸಲಾರೆನು. ನೀನಿ
ಲ್ಲದೆ ಹೋದರೆ, ಅನಾಥಳಾದ ನಾನು, ಜಾತಿ ಹೀನರಾದವರು ಅಹಂಕಾರ ಗ್ರಸ್ತ
ರಾಗಿ, ನಮ್ಮ ಸ್ವರೂಪವನ್ನು ತಿಳಿಯದೆ, ಈ ಕನ್ಯೆಯನ್ನು ಕೇಳುವದಕ್ಕೆ
ಬಂದರೆ, ಹ್ಯಾಗೆ ಅವರನ್ನು ನಿರಾಕರಿಸಲಿ? ಭೂಮಿಯಲ್ಲಿ ಬಿದ್ದಿರುವ ಮಾಂಸ
ಖಂಡವನ್ನು ಪಕ್ಷಿಗಳು ಅಪೇಕ್ಷಿಸುವ ಹಾಗೆ, ಪತಿ ರಹಿತಳಾದ ಸ್ತ್ರೀಯನ್ನು
ಯಾರಾದರೂ ಅಪೇಕ್ಷಿಸುವರು? ಆದರಿಂದ ಇಂಥ ದುರಾತ್ಮರು ಬಹು ಪ್ರಕಾ
ರದಿಂದ ಬಾಧಿಸಿದರೆ, ನನಗೆ ಪಾತಿವ್ರತ್ಯ ಧರ್ಮವು ದಕ್ಕಲಾರದು. ಲೋಕದಲ್ಲಿ
ದುಷ್ಟ ಜನರು ಹೆಚ್ಚಿದ್ದರಿಂದ, ಸ್ತ್ರೀ ಜನ್ಮವು ನಿಂದಿತವಾದದ್ದೆಂದು ಎಣಿಸುತ್ತ
ಲಿದ್ದೇನೆ. ಅದರಿಂದಲೇ ಬಾಲ್ಯದಲ್ಲಿ ತಾಯಿ ತಂದೆಗಳಿಗೂ, ಯೌವನದಲ್ಲಿ ಗಂಡ
ನಿಗೂ, ವಾರ್ಧಿಕ್ಯದಲ್ಲಿ ಮಕ್ಕಳಿಗೂ, ಅಧೀನವಾಗಿ ಇರ ಬೇಕೇ ಹೊರತಾಗಿ,
ಸ್ವಾಧೀನವಾಗಿರ ಬಾರದು. ಸ್ವತಂತ್ರವಾಗಿದ್ವರೆ, ತುಪ್ಪದಿಂದ ನೆನೆದ ವಸ್ತ್ರ
ಖಂಡವನ್ನು ನಾಯಿಗಳು ಎಳೆಯುವ ಹಾಗೆ, ದುರ್ಜನರು ಸ್ತ್ರೀ ಜನರನ್ನು ಬಾಧಿ
ಸದೆ ಇರರು. ಉಪನಯನವಿಲ್ಲದೆ ಇದ್ದಂಥ ಈ ಬಾಲಕನಿಗೆ ಉಪನಯ
ನಾದಿ ಕೃತ್ಯಗಳನ್ನು ಮಾಡಿ, ವೇದ ಶಾಸ್ತ್ರಗಳನ್ನು ಓದಿಸುವಂಥವರ್ಯಾರು?
ನಿನ್ನನ್ನು ಬಿಟ್ಟು, ಅನಾಥೆಯಾಗಿರುವ ನನ್ನನ್ನು ಎಣಿಸದೆ, ಈ ಕನ್ನಿಕೆಯನ್ನು
ಶೂದ್ರನು ಶ್ರುತಿಯನ್ನು ಬಯಸುವ ಪ್ರಕಾರವೂ, ಕಾಕವು ಮಂತ್ರ ಪೂತವಾದ
ಹವಿಸ್ಸನ್ನು ಇಚ್ಛೈಸುವಂತೆಯೂ, ಯಾರಾದರೂ ದುಷ್ಟರು ಇಚ್ಛೈಸಿ, ಕೇಳಿ
ದರೆ, ಒಡಂಬಟ್ಟು ಕೊಡದಿದ್ದರೆ, ಬಲಾತ್ಕಾರದಿಂದ ಅಪಹರಿಸುವರು. ಅದನ್ನು
ನೋಡಿ, ಸಹಿಸಲಾರದೆ, ನಾನು ಶರೀರವನ್ನು ಬಿಡುವೆನು. ಆ ಮೇಲೆ ಇವ
ರಿಬ್ಬರು ನೀರಿನಿಂದ ಹೊರಟು ಬಂದ ಮೀನುಗಳ ಹಾಗೆ ಕೆಟ್ಟು ಹೋಗುವರು.
ಆದರಿಂದ ನಿನ್ನನ್ನು ಬಿಟ್ಟರೆ, ಹ್ಯಾಗೆ ನೋಡಿದರೂ, ಈ ಮೂರು ಮಂದಿಗೂ
ಪ್ರಾಣ ಸಂಶಯವಾಗುವದರಿಂದ, ಇದಷ್ಟನ್ನು ನಿನ್ನ ಮನಸ್ಸಿನಲ್ಲಿ ನಿಶ್ಚೈಸಿ
ನನ್ನನ್ನು ಅವಶ್ಯವಾಗಿ ಕಳುಹಿಸಿ ಬಿಡು. ಪತಿವ್ರತಾ ಜನಗಳಿಗೆ ಪತಿಗಳಿಗಿಂತ ಮೊ
ದಲೇ, ಅರಸಿನ, ಕಣ್ಣು ಕಪ್ಪು, ಪುಷ್ಪ, ಮಂಗಳ ಸೂತ್ರ, ಇವುಗಳನ್ನು ಬಿಡ,
ದೆ ಪರಲೋಕಕ್ಕೆ ಹೋಗಿ, ತನ್ನ ಗಂಡನು ಕೊಟ್ಟ ತರ್ಪಣಾದಿಗಳಿಂದ ತೃಪ್ತಿ

ಯನ್ನು ಪಡೆಯುವದು ಉತ್ತಮವೇ ಹೊರ್ತು, ವೈಧವ್ಯವನ್ನು ಅನುಭವಿಸುತ್ತಾ, ಮಕ್ಕಳು ಕೊಟ್ಟ ಅನ್ನದಿಂದ ಕಾಲವನ್ನು ಕಳೆಯುವದು ಧರ್ಮವಲ್ಲ. ಗಂಡನ ಪಾದಗಳನ್ನು ತನ್ನ ಮನಸ್ಸಿನಲ್ಲಿ ಧ್ಯಾನಿಸುತ್ತಾ, ಪತಿಗಿಂತ ಮೊದಲೇ ಶರೀರವನ್ನು ಬಿಡುವಂಥ ಸ್ತ್ರೀಯು ಪಾರ್ವತೀ ದೇವಿಗೆ ಕೆಳದಿಯಾಗಿ, ಆ ಮಹಾ ದೇವಿಯೊಡನೆ ಚತುರಂಗವನ್ನು ಆಡುತ್ತಿರುವಳು. ಅದಲ್ಲದೆ ತಾಯಿ ತಂದೆಗಳೂ ಒಡ ಹುಟ್ಟಿದವರೂ ಮಕ್ಕಳೂ ಇವರಷ್ಟು ಮಂದಿಯು ಮಿತವಾದ ಸೌಖ್ಯವನ್ನು ಕೊಡುವರೇ ಹೊರ್ತು, ಗಂಡನೋಪಾದಿಯಲ್ಲಿ ಅಮಿತ ಸೌಖ್ಯ ವನ್ನು ಕೊಡಲಾರರು. ಅದರಿಂದ ಇಂಥ ಗಂಡನನ್ನು ಉಪಚರಿಸದೆ ಇರುವಂ ಥವಳು ಲೋಕದಲ್ಲಿ ಉಂಟೇ? ಈ ಮಗನನ್ನೂ ಮಗಳನ್ನೂ ಬಿಟ್ಟು, ಮತ್ತು ಬಂಧು ಜನಗಳನ್ನೆಲ್ಲಾ ತೊರೆದು, ನಿನಗೆ ಸುಖವಾಗುವ ರೀತಿಗೆ ನನ್ನ ಪ್ರಾಣ ಗಳನ್ನು ಒಪ್ಪಿಸುತ್ತೇನೆ. ಸ್ತ್ರೀ ಜನಗಳಿಗೆ ಯಜ್ಞ ದಾನ ತಪೋ ನಿಯಮಗ ಳಿಗಿಂತಲೂ ಪತಿಗೆ ಹಿತಾ ಮಾಡುವದೇ ಪರಮ ಧರ್ಮವೆನಿಸುವದು. ಈಗ ನಾನು ಹೇಳಿದ ಮಾತುಗಳಷ್ಟು ನಿಮಗೂ ನಿಮ್ಮ ಕುಲಕ್ಕೂ ಹಿತವಾಗಿರುವದು. ಲೋಕದಲ್ಲಿ ಪುರುಷನಿಗೆ ಕುಮಾರಕರೂ ಧನವೂ ಮಿತ್ರವರ್ಗವೂ ಹೆಂಡ ತಿಯೂ ಆಪತ್ತಿನ ಸಮಯಕ್ಕೆ ಒದಗದಿದ್ದರೆ, ವ್ಯರ್ಥವೆನಿಸಿ ಕೊಂಬುವರು. ತನ್ನ ಕುಲವಷ್ಟು ಆತ್ಮ ಸಂರಕ್ಷಣ ಧರ್ಮಕ್ಕೆ ಸಮಾನವಾಗಿ ಇರಲಾರದು. ಅದರಿಂದ ನನ್ನದೆಶೆಯಿಂದ ಈ ಆಪತ್ತನ್ನು ತಪ್ಪಿಸಿ ಕೊಳ್ಳಿ. ನೀವು ನಿಂತು, ಈ ಮಕ್ಕಳನ್ನು ರಕ್ಷಿಸಿ ಕೊಳ್ಳಿ. ಲೋಕದಲ್ಲಿ ಸ್ತ್ರೀ ವಧವು ಅಧರ್ಮವೆಂದು ಧರ್ಮ ಶಾಸ್ತ್ರಜ್ಞರು ಹೇಳುವದರಿಂದ, ಆ ರಾಕ್ಷಸನು ಒಂದು ವೇಳೆ ನನ್ನನ್ನು ಕರುಣಿಸಿ, ಬಿಟ್ಟು ಬಿಟ್ಟಾನು. ಆದ್ದರಿಂದ ನೀವು ನಿಂತು, ನನ್ನನ್ನು ಕಳುಹಿಸಿ ಬಿಡುವದು ಯುಕ್ತವು. ಯಾಕಂದರೆ ನಾನು ನಿನ್ನ ದೆಸೆಯಿಂದ ಸಕಲ ಸೌಖ್ಯ ಗಳನ್ನು ಅನುಭವಿಸಿ, ಪ್ರಿಯವಾದವುಗಳನ್ನು ಪಡೆದು, ಧರ್ಮಗಳನ್ನು ಆಚ ರಿಸಿ, ಸಂತಾನವನ್ನು ಪಡೆದು, ನಿಮಗೆ ಶುಶ್ರೂಷೆಯನ್ನು ಮಾಡಿ, ಪಾತಿವ್ರತ್ಯ ಧರ್ಮದಿಂದ ಕೀರ್ತಿಯನ್ನು ಹೊಂದಿ, ಯೌವನವನ್ನು ಮೀರಿದೆನು. ಇನ್ನು ಮೇಲೆ ನಿಮಗೆ ಪ್ರಿಯವನ್ನೇ ಮಾಡ ಬೇಕೆಂಬ ಬಯಕೆ ಇದೆಯೇ ಹೊರ್ತಾಗಿ ಮತ್ತೊಂದು ಬಯಕೆ ಇಲ್ಲ. ನೀವು ಇನ್ನೊಂದು ಮದುವೆಯಾಗಿ ಧರ್ಮ ಲೋಪವಿಲ್ಲದಂತೆ ನಡೆದು ಕೊಳ್ಳಿ. ಸ್ತ್ರೀ ಜನಗಳಿಗೆ ಗಂಡನನ್ನು ಬಿಟ್ಟು, ಮತ್ತೊಬ್ಬ ಪುರುಷನನ್ನು ಪರಿಗ್ರಹಿಸುವದು ದೋಷವೇ ಹೊರ್ತಾಗಿ, ಪುರುಷ ರಿಗೆ ಬಹು ಪತ್ನೀ ಪರಿಗ್ರಹವು ದೋಷವಲ್ಲ. ಈ ಧರ್ಮವನ್ನು ನಿಮ್ಮ ಮನ

ಸ್ಸಿನಲ್ಲಿ ವಿಚಾರಿಸಿ, ಆತ್ಮ ತ್ಯಾಗವು ದೋಷವೆಂದು ತಿಳಿದು, ನನ್ನಿಂದ ನಿಮ್ಮನ್ನೂ ನಿಮ್ಮ ಮಕ್ಕಳನ್ನೂ ನಿಮ್ಮ ಕುಲವನ್ನೂ ಊರ್ಜಿತವಾಗಿ ರಕ್ಷಿಸಿ ಕೊಳ್ಳಿ ಎನಲು; ಆ ಬ್ರಾಹ್ಮಣನು ಅತಿ ದುಃಖದಿಂದ ಅವಳನ್ನು ಅಪ್ಪಿ ಕೊಂಡು, ಕಣ್ಣೀರು ತುಂಬಿ—ನೀನು ಸುಖವಾಗಿರುವದೇ ನನಗೆ ಪರಮ ಸುಖವು. ಆದ್ದರಿಂದ ಹೀಗೆ ನುಡಿಯ ಬೇಡ. ಪ್ರಾಜ್ಞನಾದ ಪುರುಷನು ಪುತ್ರ ಮಿತ್ರ ಕಳತ್ರಾದಿಗಳನ್ನು ಯಾಕೆ ಬಿಡುವನು? ವಿಶೇಷವಾಗಿ ಸ್ತ್ರೀ ಜನಗಳನ್ನು ರಕ್ಷಿಸಲಾರದೆ ಇರುವ ಪುರುಷನು ಚತುರ್ವಿಧ ಪುರುಷಾರ್ಥಗಳಿಗೂ ದೂರಸ್ಥನಾಗುವನು ಎಂದು ಹೇಳಲು;—

ಈ ಪ್ರಕಾರ ತಾಯಿ ತಂದೆಗಳು ಕ್ಲೇಶ ಪಡುವದನ್ನು ನೋಡಿ, ಆ ಬ್ರಾಹ್ಮಣನ ಮಗಳು ತಾನು ಕ್ಲೇಶ ಪಟ್ಟು, ಧೈರ್ಯವನ್ನು ಹೊಂದಿ, ತಾಯಿ ತಂದೆಗಳನ್ನು ನೋಡಿ—ಎಲೈ, ನೀವು ಅನಾಥರೋಪಾದಿಯಲ್ಲಿ ಹಂಬಲಿಸುವದ್ಯಾಕೆ? ನನಗೆ ತೋರಿದಪ್ಪಂದ ಹೇಳುತ್ತೇನೆ. ನಿಮಗೆ ಸಮ್ಮತವಾದರೆ ಹಾಗೆ ನಡೆದು ಕೊಳ್ಳಿ. ನಿಮ್ಮಿಬ್ಬರಿಗೂ ನಾನು ಮಗಳಾದ್ದರಿಂದ ನನ್ನನ್ನು ಅವಶ್ಯಕವಾಗಿ ಕಳುಹಿಸ ಬೇಕು. ನನ್ನನ್ನು ಕಳುಹಿಸಿ, ನಿಮ್ಮನ್ನು ಸಂರಕ್ಷಿಸಿಕೊಂಬುವದು ಯುಕ್ತವು. ಲೋಕದಲ್ಲಿ ತಾವು ಆಪತ್ತುಗಳನ್ನು ಪರಿಹರಿಸಿ ಕೊಳ್ಳ ಬೇಕೆಂದಲ್ಲವೇ, ಮಕ್ಕಳನ್ನು ಬಯಸುವದು? ಇಂಥ ಆಪತ್ಕಾಲದಲ್ಲಿ ನನ್ನಿಂದ ಈ ಆಪತ್ತನ್ನು ಪರಿಹರಿಸಿಕೊಂಬುವದು ಯುಕ್ತವು. ಇಹಲೋಕ ಪರಲೋಕಗಳಲ್ಲಿ ದುಃಖವನ್ನು ಪರಿಹರಿಸುವಂಥವಳೇ ಪುತ್ರಿಯೆನಿಸಿಕೊಂಬುವಳು. ಆದ್ದರಿಂದ ಅಂಥ ದುಃಖವನ್ನು ಈ ಲೋಕದಲ್ಲಿ ಪರಿಹರಿಸುತ್ತೇನೆ. ದೌಹಿತ್ರನದೆಸೆಯಿಂದ ಅತಿಶಯ ಬರ ಬೇಕೆಂದು ಪ್ರಾರ್ಥಿಸುವಂಥ ನಿಮಗೆ ನಾನೇ ಪ್ರಾಣ ದಾನವನ್ನು ಮಾಡುತ್ತೇನೆ. ನನ್ನ ತಮ್ಮನು ಬಾಲಕನಾದ್ದರಿಂದ ನಿಮ್ಮನ್ನು ಬಿಟ್ಟು ಬದುಕಲಾರನು. ಮತ್ತು ನೀನೂ, ಈ ನನ್ನ ತಮ್ಮನೂ, ಇಬ್ಬರು ಇಲ್ಲದೆ ಹೋದರೆ, ಪಿತೃ ದೇವತೆಗಳಿಗೆ ಪಿಂಡೋದಕ ಪ್ರದಾನಗಳು ನಿಂತು ಹೋಗುವವು. ಆದ್ದರಿಂದ ನೀವು ಹೋಗುವದು ಪಿತೃ ದೇವತೆಗಳಿಗೆ ಸಮ್ಮತವಲ್ಲ. ತಾಯಿ ತಂದೆಗಳೂ ತಮ್ಮನೂ ನನ್ನನ್ನು ಬಿಟ್ಟರೆ, ನಾನು ದುಃಖದ ಮೇಲೆ ದುಃಖವನ್ನು ಹೊಂದಿ, ಶರೀರವನ್ನು ಬಿಟ್ಟು ಹೋಗ ಬೇಕು. ನೀವು ನಿಂತರೆ, ಪಿತೃ ದೇವತೆಗಳಿಗೆ ಪಿಂಡೋದಕ ಕ್ರಿಯೆಗಳು ಊರ್ಜಿತವಾಗಿ ನಿಂತು, ನನ್ನ ತಾಯಿಯ ಮತ್ತು ನಿನ್ನ ವಂಶಗಳು ಅಭಿವೃದ್ಧಿಯಾಗುವವು. ಮಗನು ತಾನೇ ಆಗಿರುವದರಿಂದಲೂ, ಹೆಂಡತಿಯು ಸಕಲ ಕಾರ್ಯಗಳಲ್ಲಿಯೂ ಸಹಾಯಕಳಾಗಿ

ಸತಿ ಎನಿಸಿ ಕೊಂಡಿರುವದರಿಂದಲೂ, ಮಗನನ್ನೂ ಹೆಂಡತಿಯನ್ನೂ ಬಿಡ ಬಾರದು. ಕನ್ಯಾಜನವು ತಾಯಿ ತಂದೆಗಳಿಗೆ ದುಃಖವನ್ನು ಉಂಟು ಮಾಡುವವರಾದ್ದರಿಂದ, ನನ್ನನ್ನು ಕಳುಹಿಸಿ, ಸದ್ಯಃ ಬಂದ ದುಃಖವನ್ನು ಪರಿಹರಿಸಿ ಕೊಳ್ಳಿ. ನಾನು ಇಂಥ ಧರ್ಮದಿಂದ ಪುಣ್ಯ ಲೋಕಗಳನ್ನು ಹೊಂದುತ್ತೇನೆ. ನಾನು ಚಿಕ್ಕವಳಾಗಿ ಅಬಲೆಯಾಗಿರುವದರಿಂದ, ಅನಾಥೆಯಾಗಿ ದೈನ್ಯದಿಂದ ಭೂಮಿಯಲ್ಲಿ ಬಿದ್ದು, ಹೊರಳ್ಯಾಡುತ್ತಿರ ಬೇಕು. ಈಗ ನೀನು ನನ್ನನ್ನು ಕಳುಹಿಸಿದರೆ, ನಾನು ನನ್ನ ಶರೀರವನ್ನು ರಾಕ್ಷಸನಿಗೆ ಕೊಟ್ಟು, ಕುಲ ಸಂರಕ್ಷಣೆಯನ್ನು ಮಾಡಿ, ಅಪರಿಮಿತವಾದ ಪುಣ್ಯ ಲೋಕಗಳನ್ನೈದುವೆನು. ಅದರಿಂದ ಬಿಡ ತಕ್ಕವಳಾಗಿರುವ ನನ್ನನ್ನು ಕಳುಹಿಸಿ, ವಂಶಾಭಿವೃದ್ಧಿಗೆ ಕಾರಣನಾದ ನಿನ್ನನ್ನು ರಕ್ಷಿಸಿ ಕೊಳ್ಳ ಬೇಕು. ಇದು ಧರ್ಮವು. ನಾನು ನೀನು ಕೊಡುವಂಥ ತರ್ಪಣೋದಕದದೆಸೆಯಿಂದ ಪರಲೋಕ ಸುಖವನ್ನು ಹೊಂದುತ್ತೇನೆ. ಹಾಗಲ್ಲ ಎಂದು, ನೀನು ನನ್ನನ್ನು ಬಿಟ್ಟು, ಪರಲೋಕಕ್ಕೆ ಹೋದರೆ, ನಾನು ನಾಯಿಯಂತೆ ಮನೆ ಮನೆಗೂ ತಿರುಗಿ, ಅನ್ನವನ್ನು ಬೇಡಿ, ಬೇಸರ ಬೇಕು. ಇದಕ್ಕಿಂತ ಇನ್ನು ಬೇರೆ ದುಃಖ ಉಂಟೇ? ನೀನು ಸಮಸ್ತ ಬಂಧು ಜನಗಳೊಡನೆ ಸುಖವಾಗಿದ್ದರೆ, ನಾನು ಪರಲೋಕದಲ್ಲಿ ಸುಖ ಪಡುವದಕ್ಕಿಂತ ಬೇರೆ ಸುಖ ಉಂಟೇ? ನೀನು ಇವ್ವೆರಡನ್ನು ವಿಚಾರಿಸಿ, ನಿನಗೂ ನನ್ನ ತಾಯಿ ತಮ್ಮಂದಿರಿಗೂ ಸುಖವಾಗುವ ಹಾಗೆ ನಡಿಸು. ನೀವು ಚನ್ನಾಗಿದ್ದರೆ, ನಿಮಗೆ ಇನ್ನು ಗುಣವಂತರಾದ ಹೆಣ್ಣು ಗಂಡು ಮಕ್ಕಳು ಹುಟ್ಟುವರೇ ಹೊರತು, ಮಕ್ಕಳಿಗೆ ತಾಯಿ ತಂದೆಗಳು ತಿರಿಗಿ ಹುಟ್ಟಲಾರರು. ಅದರಿಂದ ನಿಮಗೆ ಪ್ರಿಯವಾಗುವದಕ್ಕೋಸ್ಕರ ನನ್ನ ಪ್ರಾಣಗಳನ್ನು ಅರ್ಪಿಸುತ್ತೇನೆ ಎನಲು; ಹೀಗೆ ತಾಯಿ ತಂದೆಗಳು ಮಗಳು ಸಹ ರೋದನವನ್ನು ಮಾಡುತ್ತಿರಲು;—

ಆ ಕುಮಾರಕನು ಅವರ ಸಮೀಪಕ್ಕೆ ಹೋಗಿ, ತೊದಲು ನುಡಿಗಳಿಂದ—ಅಳಬೇಡಿರೆಂದು ಪ್ರತ್ಯೇಕ ಪ್ರತ್ಯೇಕವಾಗಿ ತಾಯಿ ತಂದೆ ಅಕ್ಕಂದಿರಿಗೆ ಸಮಾಧಾನವನ್ನು ಹೇಳುತ್ತಾ, ನಗುತ್ತಾ, ಒಬ್ಬೊಬ್ಬರ ಸಮೀಪಕ್ಕೆ ಹೋಗಿ, ಅವರ ಮೇಲೆ ಬಿದ್ದು, ಸಂತೋಷ ಪಡುತ್ತಾ, ಹುಲ್ಲನ್ನು ತೆಗೆದು ಕೊಂಡು, ಇದರಿಂದ ಆ ಮನುಷ್ಯರನ್ನು ಕೊಲ್ಲುವ ರಾಕ್ಷಸನನ್ನು ಕೊಂದು ಹಾಕುತ್ತೇನೆ ಎಂದು ಹೇಳಲು; ಅವರು ಅತಿ ದುಃಖಿತರಾಗಿದ್ದರೂ, ಆ ಚಿಕ್ಕವನ ಮಾತನ್ನು ಕೇಳಿ, ಸಂತೋಷ ಪಟ್ಟು, ನಗುತ್ತಿರಲು; ಇದೇ ಸಮಯವೆಂದು ಕುಂತಿಯು ಅವರ ಸಮೀಪಕ್ಕೆ ಹೋಗಿ, ಆ ಬ್ರಾಹ್ಮಣನನ್ನು ಕುರಿತು ಮಧುರ ವಚನದಿಂದ ಇಂತೆಂ

ದಳು;—ಎಲೈ, ಬ್ರಾಹ್ಮಣ ಶ್ರೇಷ್ಠನೇ, ನೀವು ಹೀಗೆ ಕ್ಲೇಶ ಪಡುವದಕ್ಕೆ ಕಾರಣವೇನು? ಹೇಳು. ಅದು ನಮ್ಮ ಕೈಲಾಗುವ ಕಾರ್ಯವಾದರೆ, ತೀರಿಸುತ್ತೇವೆ ಎನಲು; ಆ ಬ್ರಾಹ್ಮಣನು—ಪರರ ದುಖ್ಖಗಳನ್ನು ಹೋಗಲಾಡಿಸುವದಕ್ಕೆ ಉಜ್ಜುಗಿಸುವದು ಸಜ್ಜನರಿಗೆ ಸ್ವಭಾವವಾದ್ದರಿಂದ, ನೀನು ಹೀಗೆ ಕೇಳುವದು ಉಚಿತವೇ ಸರಿ. ಆದರೆ ಈ ದುಖ್ಖವು ದೇವತೆಗಳಿಂದಲೇ ಹೊರ್ತಾಗಿ, ಮನುಷ್ಯರಿಂದ ತೀರಿಸುವದಕ್ಕೆ ಶಕ್ಯವಲ್ಲ. ಆದರೂ ನೀನು ಕೇಳಿದ್ದರಿಂದ ವಿವರಿಸುತ್ತೇನೆ.

ಈ ಪಟ್ಣಕ್ಕೆ ಎರಡು ಹರುದಾರಿಯ ದೂರದಲ್ಲಿ ಯಮುನಾ ನದೀ ತೀರದ ಗುಹಾಂತರದಲ್ಲಿ ಮಹಾ ಬಲಶಾಲಿಯಾಗಿ—ಈ ದೇಶಕ್ಕಧಿಪತಿಯಾಗಿ—ಮನುಷ್ಯ ಮಾಂಸ ಭಕ್ಷಕನಾಗಿ—ಕಾಮರೂಪಿಯಾಗಿ ಇರುವ ಬಕನೆಂಬ ಒಬ್ಬ ರಾಕ್ಷಸನಿರುವನು. ಅವನು ಈ ದೇಶಕ್ಕೆ ಬಂದು, ಹದಿಮೂರು ಸಂವತ್ಸರಗಳ ಪರ್ಯಂತರವೂ ಸಕಲ ಜನರಿಗೂ ಉಪದ್ರವನ್ನು ಮಾಡುತ್ತಾ, ಒಂದೊಂದು ಮನೆಯನ್ನು ಹೊಕ್ಕು, ಅದರಲ್ಲಿರುವ ಜನರೆಲ್ಲರನ್ನು ಒಂದೇ ದಿವಸದಲ್ಲಿ ಭಕ್ಷಿಸುತ್ತಾ, ಇತರರ ಭಯವಿಲ್ಲದೆ ಇರುತ್ತಿದ್ದನು. ಹೀಗೆ ನಮಗೆ ಇತರರು ಗತಿ ಇಲ್ಲದೆ ಇದ್ದದರಿಂದಲೂ, ಸ್ತ್ರೀ ಬಾಲ ವೃದ್ಧರಿಗೆ ಅವನ ಭಯ ಹೆಚ್ಚಾಗುತ್ತಾ ಬಂದದರಿಂದಲೂ, ಎಲ್ಲಾ ಬ್ರಾಹ್ಮಣರು ಮಂತ್ರ ಹೋಮ ಜಪ ಭೋಜನಗಳ ದೆಶೆಯಿಂದ ಆ ದುರಾತ್ಮನಿಗೆ ಸಂತೋಷವನ್ನು ಮಾಡಿಸಿ—ಎಲೈ, ರಾಕ್ಷಸೋತ್ತಮನೇ, ನೀನು ಈ ಪ್ರಕಾರ ಪ್ರತಿ ದಿನವು ಜನರಿಗೆ ಬಾಧೆಯನ್ನು ಮಾಡ ಬೇಡ. ನಿನಗೆ ಮಾಂಸಾಶನಗಳನ್ನೂ, ಅನ್ನ ಪಾನಗಳನ್ನೂ, ಪುಂಡೀ ಸೊಪ್ಪು, ಮೊದಲಾದ ಶಾಖಗಳನ್ನೂ, ತುಪ್ಪವನ್ನೂ, ಅರಳು, ಅಪೂಪ, ಸೂಪಗಳನ್ನೂ, ಪಾನಕದ ಗುಡಾಣಗಳನ್ನೂ, ಮೊಸರಿನ ಗಡಿಗೆಗಳನ್ನೂ, ತಂಬಿಟ್ಟು, ಚಿಗಳಿ ರಾಶಿಗಳನ್ನೂ, ಎರಡೆತ್ತುಗಳನ್ನು ಕಟ್ಟಿದ ಒಂದು ಭಂಡಿಯಲ್ಲಿ ಜೊತೆ ಮಾಡಿರಿಸಿ, ಒಂದೊಂದು ಮನೆಗೆ ಒಬ್ಬೊಬ್ಬ ಮನುಷ್ಯನ ಮೋರೆಗೆ ಪ್ರತಿ ದಿನವು ಕಳುಹಿಸುತ್ತೇವೆ. ನೀನು ಇದನ್ನು ಅಂಗೀಕರಿಸಿ, ನಮಗೆ ಉಪದ್ರವನ್ನು ಮಾಡದೆ ಇರ ಬೇಕು ಎನಲು; ಆ ಪುರುಷಾಧಮನು,—ಹಾಗೆ ಆಗಲಿ ಎಂದು, ಆ ಅರ್ಥಕ್ಕೆ ಒಡಂಬಟ್ಟು, ಪ್ರತಿ ದಿನವು ಆ ಮೋರೆಗೆ ಬಲಿಯನ್ನು ತೆಗೆದುಕೊಂಡು, ಈ ದೇಶವನ್ನು ಶತ್ರು ಚೋರ ಭಯವಿಲ್ಲದಂತೆ ಪರಿಪಾಲಿಸುತ್ತಿದ್ಧಾನೆ. ಆತನ ಬಲಿಗೋಸ್ಕರ ಒಬ್ಬೊಬ್ಬರ ಮನೆಗೆ ಅನೇಕ ವರುಷಗಳಿಗೆ ಒಂದು ಸಾರಿ ಸರದಿ ಬರುವದು. ಆ ಕಾಲದಲ್ಲೇನಾದರೂ ಊರನ್ನು ಬಿಟ್ಟು ಹೋಗುವದಕ್ಕೆ ಯತ್ನಾ ಮಾಡಿದರೆ, ಆ ರಾಕ್ಷಸನು ಕುಟುಂಬ ಸಮೇತವಾಗಿ ಆತ

ನನ್ನು ಕೊಂದು ಹಾಕುವನು. ವೇತ್ರಕಿಯನೆಂಬ ಈ ಪಟ್ಟಣದಲ್ಲಿರುವ ಅರಸು ರಾಜನೀತಿ ಪರನಲ್ಲದೆ ಇರುವದರಿಂದ, ಈ ಪಟ್ಟಣದ ಜನರಿಗೆ ಉಂಟಾದ ಉಪದ್ರವನ್ನು ಪರಿಹರಿಸಿ, ಶಾಶ್ವತವಾದ ಸುಖವನ್ನು ಕಲ್ಪಿಸಲಾರನು. ನಿಷ್ಕಂಟಕಗಳಾದ ದೇಶಗಳು ಎಷ್ಟು ಇದ್ದಾಗ್ಯೂ, ನಾವು ದುರ್ಬಲಾಶ್ರಯವಾದ ಇಂಥ ಪ್ರದೇಶದಲ್ಲಿ ಬಿದ್ದು ಇದ್ದೇವೆ. ಬ್ರಾಹ್ಮಣನಿಗೆ ಪರಸ್ಪರಾನುಕೂಲ್ಯವಿಲ್ಲದಿದ್ದರೆ, ಸ್ವೇಚ್ಛಾ ಗಮನದಿಂದ ಎಲ್ಲಿಗಾದರೂ ಪಕ್ಷಿಗಳೋಪಾದಿಯಲ್ಲಿ ಹೋಗ ಬಹುದು. ಗೃಹಸ್ಥನಿಗೆ ಮೊದಲು ಧಾರ್ಮಿಕನಾದ ಅರಸಿನ ಆಶ್ರಯವಿರ ಬೇಕು; ಹೆಂಡತಿ ಅನುಕೂಲೆಯಾಗಿರ ಬೇಕು; ಧನವು ಯಥೇಷ್ಟವಾಗಿರ ಬೇಕು. ಈ ಮೂರು ಇದ್ದರೆ, ಆತನು ತನ್ನ ಜ್ಞಾತಿ ಪುತ್ರಾದಿಗಳನ್ನು ರಕ್ಷಿಸುವನು. ಈ ಮೂರು ಅರ್ಥಗಳಲ್ಲಿ ಒಂದಾದರೂ ನನಗೆ ಇಲ್ಲದ್ದರಿಂದ, ನಾನು ಹೀಗೆ ಕ್ಲೇಶ ಪಡುತಿದ್ದೇನೆ. ಈ ದಿವಸ ಮನೆಯ ಸರದಿಯ ಮೇರೆಗೆ ಕುಲನಾಶಕವಾದ ವಾರವು ಪ್ರಾಪ್ತವಾಯಿತು. ಭೋಜನವನ್ನೂ ಪುರುಷ ಬಲಿಯನ್ನೂ ಸಂಪಾದಿಸ ಬೇಕು. ಒಬ್ಬ ಪುರುಷನನ್ನು ಕ್ರಯಕ್ಕಾದರೂ ಕೊಂಡು ಕೊಟ್ಟೇವು ಎಂದರೆ, ಹಣವಿಲ್ಲ. ಇವರೊಬ್ಬರನ್ನೂ ಕೊಡುವದಕ್ಕೆ ಮನಸ್ಸು ಒಡಂಬಡುವದಿಲ್ಲ. ಇಂಥ ರಾಕ್ಷಸನ ಭಯವನ್ನು ಹೋಗಲಾಡಿಸಿ ಕೊಳ್ಳುವದಕ್ಕೆ ಮತ್ತೊಂದು ಉಪಾಯವು ತೋಚುವದಿಲ್ಲ. ಆದ್ದರಿಂದ ನಾವೆಲ್ಲರು ಆತನ ಬಾಯಿಯಲ್ಲಿ ಬೀಳ ಬೇಕೆಂದು ಯೋಚಿಸಿದ್ದೇವೆ. ನೀನು ಕೇಳಿದ್ದರಿಂದ ಈ ದುಃಖದ ಕಾರಣವನ್ನು ವಿವರವಾಗಿ ಹೇಳಿದೆನು ಎನಲು;—

ಕುಂತಿ ದೇವಿಯು ಆ ಬ್ರಾಹ್ಮಣನನ್ನು ನೋಡಿ,—ಎಲೈ, ಬ್ರಾಹ್ಮಣೋತ್ತಮನೇ, ಈ ಭಯದಿಂದ ನೀನು ಭಯ ಪಡ ಬೇಡ. ಇದಕ್ಕೆ ನಾನೊಂದು ಉಪಾಯವನ್ನು ಹೇಳುತ್ತೇನೆ. ನೀವಷ್ಟು ಮಂದಿಯು ಏಕ ಕಾಲದಲ್ಲಿ ಹೋಗುವದು ಯುಕ್ತವಲ್ಲ. ನಿನಗೆ ಒಬ್ಬನೇ ಮಗನೂ ಒಬ್ಬಳೇ ಮಗಳೂ ಇರುವದ್ದರಿಂದ, ಅವರನ್ನೂ, ಅವರನ್ನು ಕಾಪಾಡುವ ತಾಯಿಯನ್ನೂ ಕಳುಹಿಸುವದು ಸರಿಯಲ್ಲ. ನನಗೆ ಐದು ಮಂದಿ ಮಕ್ಕಳಿದ್ದಾರೆ. ಅವರೊಳಗೊಬ್ಬನನ್ನು ನಿಮಗೆ ಕೊಡುತ್ತೇನೆ. ಆತನು ನೀವು ಕೊಡುವ ಅನ್ನ ಪಾನಗಳನ್ನು ಜೊತೆ ಮಾಡಿಕೊಂಡು, ರಾಕ್ಷಸನ ಸಮೀಪಕ್ಕೆ ಹೋಗುತ್ತಾನೆ ಎನಲು; ಆ ಬ್ರಾಹ್ಮಣನು— ನಾನು ನನ್ನ ಜೀವನಾರ್ಥವಾಗಿ ಇಂಥ ಅಕೃತ್ಯಕ್ಕೆ ಒಡಂಬಡುವವನಲ್ಲ. ಬ್ರಾಹ್ಮಣನಾಗಿ ಅತಿಥಿಯಾಗಿರುವ ನಿನ್ನ ಕುಮಾರನನ್ನು ರಾಕ್ಷಸನಿಗೆ ಹ್ಯಾಗೆ ಒಪ್ಪಿಸೇನು? ಮಹಾ ಕುಲ ಪ್ರಸೂತರಾದ ನಿಮ್ಮಂಥವರಿಗೆ ಇಂಥ ಪರೋಪಕಾ

ರವು ಅದ್ಭುತವಲ್ಲ. ಬ್ರಾಹ್ಮಣ ನಿಮಿತ್ತವಾಗಿ ಸ್ವಪುತ್ರನನ್ನಾದರೂ ಒಪ್ಪಿಸುವದು ನಿಮಗೆ ಯುಕ್ತವು. ಆದರೆ ನಾನು ಶ್ರೇಯಸ್ಸಾಗುವ ಮೇರೆಗೆ ವಿಚಾರಿಸ ಬೇಡವೇ? ಬ್ರಾಹ್ಮಣ ವಧಕ್ಕೂ ಆತ್ಮ ವಧಕ್ಕೂ ಅಂತರವನ್ನು ವಿಚಾರಿಸಿದಲ್ಲಿ, ಆತ್ಮವಧಕ್ಕಿಂತಲೂ ಬ್ರಹ್ಮ ವಧೆಯು ಅಧಿಕವಾದ್ದರಿಂದ, ಅದಕ್ಕೆ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿರುವದು. ಬ್ರಾಹ್ಮಣ ವಧೆಯನ್ನು ಅಜ್ಞಾನದಿಂದ ಮಾಡಿದರೂ ದುಷ್ಕರವಾದ್ದರಿಂದ, ಬುದ್ಧಿ ಪೂರ್ವಕವಾಗಿ ಮಾಡಿದರೆ, ಹ್ಯಾಗೆ ಪರಿಹರಿಸ ತಕ್ಕದ್ದು? ತನಗೆ ಅಭಿಮತವಲ್ಲದೆ ಮತ್ತೊಬ್ಬರ ನಿರ್ಬಂಧದ ದೆಶೆಯಿಂದ ಬರುವ ಆತ್ಮ ವಧಕ್ಕೆ ದೋಷವಿಲ್ಲ. ನಿನ್ನ ಕುಮಾರಕನನ್ನು ಕಳುಹಿಸುವದು ಬುದ್ಧಿ ಪೂರ್ವಕವಾದ ಬ್ರಾಹ್ಮಣ ವಧೆಯಾದ್ದರಿಂದ, ಅತಿ ಕ್ರೂರವಾಗಿರುವದು. ವಿಶೇಷವಾಗಿ ತನ್ನ ಮನೆಗೆ ಬಂದಂಥವನನ್ನೂ ಯಾಚಕಕ್ಕೆ ಬಂದವನನ್ನೂ ಶರಣಾಗತನಾದವನನ್ನೂ ವಧಿಸುವದು ಅತಿ ನಿಂದಿತವೆಂತಲೂ, ಅದನ್ನು ಒಂದು ವೇಳೆಯಾದರೂ ಮಾಡ ಬಾರದೆಂತಲೂ, ಪ್ರಾಜ್ಞರು ಹೇಳುವರು. ನಾನು ಒಬ್ಬರನ್ನು ಬಿಟ್ಟರೆ, ದುಖ್ಖವಾಗುತ್ತದೆ ಎಂದು, ಅಷ್ಟು ಮಂದಿಯು ಹೋಗ ಬೇಕೆಂದು ಎಣಿಸಿ ಇದ್ದೇನೆ. ನಿನ್ನ ಕುಮಾರನನ್ನು ಕಳುಹಿಸುವದಕ್ಕೆ ಒಡಂಬಡೆನು ಎನಲು;—

ಆ ಕುಂತಿ ದೇವಿಯು—ಎಲೈ, ದ್ವಿಜನೇ, ಬ್ರಾಹ್ಮಣನನ್ನು ಸಂರಕ್ಷಣೆ ಮಾಡ ಬೇಕೆಂತಲೂ, ಬ್ರಾಹ್ಮಣ ವಧೆಯು ನಿಂದಿತವೆಂತಲೂ, ನಾನು ಬಲ್ಲೆನು. ತಾಯಿಗೆ ನೂರು ಮಂದಿ ಕುಮಾರಕರಿದ್ದರೂ, ಅವರಲ್ಲೊಬ್ಬನೂ ಅಪ್ರಿಯನಾಗಿ ಹೋಗುವದಿಲ್ಲ. ಆದ್ದರಿಂದ ನನಗೆ ಈ ಕುಮಾರಕನು ಅಪ್ರಿಯನೆಂದು ಕಳುಹಿಸುವದಿಲ್ಲ. ಆದರೆ ಈತನು ಬಲ ಪರಾಕ್ರಮಶಾಲಿಯಾಗಿ, ಮಂತ್ರಸಿದ್ಧಿಯುಳ್ಳವನಾಗಿ, ಅಧಿಕ ತಪೋಬಲ ಯುಕ್ತನಾಗಿ ಇರುವದರಿಂದ, ಆತನು ನೀವು ಕೊಟ್ಟ ಅನ್ನ ಪಾನಗಳನ್ನು ಆ ರಾಕ್ಷಸನಿಗೆ ಕೊಟ್ಟು, ತನ್ನನ್ನು ರಕ್ಷಿಸಿಕೊಂಡು, ತಿರಿಗಿ ಬರುವನೇ ಹೊರತಾಗಿ, ಅವನಿಂದ ಪೆಟ್ಟು ತಿಂದು ಬರುವಂಥವನಲ್ಲ. ಮೊದಲು ಈ ಬಾಲಕನಿಂದ ಮಹಾ ಬಲಶಾಲಿಗಳಾಗಿ ಮಹಾ ಶರೀರವುಳ್ಳ ರಾಕ್ಷಸರು ಅನೇಕ ಮಂದಿ ಹತರಾದರು. ಈ ರಹಸ್ಯವನ್ನು ಯಾರಿಗೂ ಹೇಳ ಬೇಡ. ಈತನಲ್ಲಿರುವ ವಿದ್ಯೆಯನ್ನು ಬಹು ಮಂದಿ ವಿದ್ಯಾರ್ಥಿಗಳು ಕಲಿಯ ಅಪೇಕ್ಷಿಸಿ, ಆತನನ್ನು ನಿರ್ಬಂಧ ಪಡಿಸುವರು. ಆದರೆ ಈ ಬಾಲಕನಿಗೆ ವಿದ್ಯೆಯನ್ನು ಹೇಳಿದಾತನು—ತನ್ನ ಅಪ್ಪಣೆ ಇಲ್ಲದೆ ಇನ್ನ್ಯಾರಿಗಾದರೂ ಈ ವಿದ್ಯೆಯನ್ನು ಹೇಳಿದರೆ, ನಿನಗೆ ಫಲಿಸಲಾರದು ಎಂದು, ಕಟ್ಟು ಮಾಡಿ ಇದ್ದಾನೆ ಎಂ

ದು, ಹೇಳಲು; ಆ ಬ್ರಾಹ್ಮಣೋತ್ತಮನೂ ಆತನ ಹೆಂಡತಿಯೂ ಅಮೃತ ರಸದ ಚಂದದಿಂದ ಒಪ್ಪುತ್ತಿರುವ ಆ ಕುಂತಿಯ ವಾಕ್ಯವನ್ನು ಕೇಳಿ, ಬಹು ಸಂತೋಷ ಪಟ್ಟು, ಅವಳನ್ನು ಬಹು ಪ್ರಕಾರವಾಗಿ ಪೂಜಿಸಿದರು. ಅನಂತರ ದಲ್ಲಿ ಕುಂತೀ ದೇವಿಯು ಭೀಮನಿಗೆ ಈ ವೃತ್ತಾಂತವನ್ನು ತಿಳುಹಿಸಲು; ಆತ ನು, ಹಾಗೆಯೇ ಮಾಡುತ್ತೇನೆ ಎಂದು ಒಡಂಬಟ್ಟನು.

ಇತ್ತಲಾ ಧರ್ಮರಾಯನೇ ಮೊದಲಾದ ನಾಲ್ಕು ಮಂದಿಯು ಭಿಕ್ಷಾನ್ನವ ನ್ನು ತೆಗೆದು ಕೊಂಡು, ಮನೆಗೆ ಬಂದ ಸಮಯದಲ್ಲಿ ಉತ್ಸಾಹದೊಡನೆ ಕೂಡಿ ರುವ ಭೀಮಸೇನನನ್ನು ನೋಡಿ, ಅವರಲ್ಲಿ ಧರ್ಮರಾಯನು ಆತನ ಇಂಗಿತವನ್ನು ನೋಡಿ, ಸಂತೋಷ ಯುಕ್ತನಾಗಿ ಇದ್ದಾನೆಂದು ತಿಳಿದು, ಇದಕ್ಕೆ ಏನೋ ನಿಮಿತ್ತವಿಧೆ ಎಂದು ಚಿಂತಿಸುತ್ತಾ, ಏಕಾಂತದಲ್ಲಿ ತನ್ನ ತಾಯಿಯನ್ನು ನೋಡಿ— ವಾಯು ಪುತ್ರನು ನಿನ್ನ ಅಪ್ಪಣೆಯಿಂದ ಒಂದು ಮಹಾ ಕಾರ್ಯವನ್ನು ನಿರ್ವ ಹಿಸುವದಕ್ಕೆ ಎಣಿಸಿದ್ದಾನೆಂದು, ಆತನ ಮುಖೋಲ್ಲಾಸದಿಂದ ತಿಳಿದೆನು. ಅದ ನ್ನು ವಿವರವಾಗಿ ತಿಳಿಯ ಹೇಳೆನಲು; ಕುಂತೀ ದೇವಿಯು—ಎಲೈ, ಕುಮಾರಕ ನೇ, ವಾಯು ಪುತ್ರನು ನನ್ನ ಅಪ್ಪಣೆಯಿಂದ ಒಬ್ಬ ಬ್ರಾಹ್ಮಣನನ್ನು ರಕ್ಷಿಸುವ ದಕ್ಕೋಸ್ಕರವೂ ಪಟ್ಣದ ಆಪತ್ತನ್ನು ಪರಿಹರಿಸುವದಕ್ಕೋಸ್ಕರವೂ ಒಬ್ಬ ರಾಕ್ಷಸನ ಬಲಿ ರೂಪಕವಾದಂಥ ಮಹಾ ಕಾರ್ಯವನ್ನು ನಡಿಸಲಿಚ್ಛೈಸಿದ್ದಾನೆ ಎನಲು; ಧರ್ಮಜನು ತಾಯಿಯನ್ನು ನೋಡಿ,—ಎಲೈ, ತಾಯೇ, ಇಂಥ ಸಾಹಸ ಕಾರ್ಯವನ್ನು ಮಾಡ ಬಹುದೇ? ಸತ್ಪುರುಷರಾದವರು—ಪುತ್ರ ತ್ಯಾಗವು ಮಹಾ ಅನರ್ಥಕ್ಕೆ ಕಾರಣವೆಂದು ಹೇಳುವರು. ಮತ್ತೊಬ್ಬರ ಮಗನನ್ನು ರಕ್ಷಿಸುವದ ಕ್ಕೋಸ್ಕರ ತನ್ನ ಮಗನನ್ನು ಬಿಡ ಬಹುದೇ? ಇಂಥ ಲೋಕವಿರುದ್ಧವಾದ ಪುತ್ರತ್ಯಾಗ ರೂಪವಾದ ಕಾರ್ಯವನ್ನು ನೀನು ಮಾಡ ಬಹುದೇ? ನಾವೆಲ್ಲರು ಭೀಮಸೇನನ ಭುಜ ಬಲವನ್ನು ನಂಬಿ, ದಾಯಾದಿಗಳು ಅಪಹರಿಸಿ ಕೊಂಡಿರು ವಂಥ ರಾಜ್ಯವನ್ನು ತಿರಿಗಿ ಸಾಧಿಸ ಬೇಕೆಂದು ಬಯಸಿ ಇದ್ದೇವೆ. ಈ ದುರ್ಯೋ ಧನ ದುಶ್ಶಾಸನ ಕರ್ಣ ಶಕುನಿ ಮೊದಲಾದವರು ಮಹಾ ಬಲ ಪರಾಕ್ರಮ ಶಾಲಿ ಯಾದ ಭೀಮಸೇನನ ಪರಾಕ್ರಮವನ್ನು ಸ್ಮರಿಸಿ, ಈಗಲೂ ಬೆಚ್ಚಿ ಬೆಚ್ಚಿ ಬೀಳು ತ್ತಿದ್ದಾರೆ. ಇದಲ್ಲದೆ ಭೀಮಸೇನನ ಭುಜ ಬಲದಿಂದಲ್ಲವೇ, ಪಾಪಾತ್ಮರಾದ ಪುರೋಚನಾದಿಗಳನ್ನು ಕೊಂದು, ಅರಗಿನ ಬಾಧೆಯನ್ನು ತಪ್ಪಿಸಿ ಕೊಂಡು, ನಾವೆಲ್ಲರು ಪ್ರಾಣ ಸಹಿತವಾಗಿ ನಿಂತದ್ದು? ಇದನ್ನು ಅರಿಯಾ? ಬುದ್ಧಿಶಾಲಿಯಾಗಿ ಮಹಾ ಬಲ ಪರಾಕ್ರಮಶಾಲಿಯಾದ ಇಂಥ ಮಗನನ್ನು ಕೊಡುವದಕ್ಕೆ ಯೋ ಚಿಸಿದ ನಿನ್ನ ಬುದ್ಧಿಗೆ ಏನನ್ನ ಬೇಕೆನಲು; ಕುಂತಿಯು ಇಂತೆಂದಳು,—ಕೇಳು,

ಧರ್ಮರಾಯನೇ, ಭೀಮನ ವಿಷಯದಲ್ಲಿ ಹೀಗೆ ಎಣಿಸ ಬೇಡ. ನಾನು ಬುದ್ಧಿ ಮೋಸದಿಂದ ಈ ಕಾರ್ಯವನ್ನು ಮಾಡಿದವಳಲ್ಲ. ಕ್ಲೇಶದಿಂದ ನನ್ನ ಬುದ್ಧಿ ಮಂದವಾಗಲಿಲ್ಲ. ನಾವು ಈ ಬ್ರಾಹ್ಮಣನ ಮನೆಯಲ್ಲಿ ಸುಖವಾಗಿ ಇದ್ದೇವಾದ ಕಾರಣ, ಆತನಿಗೆ ಒಂದು ಉಪಕಾರವನ್ನು ಮಾಡ ಬೇಕೆಂದು ಎಣಿಸಿದೆನು. ಲೋಕದಲ್ಲಿ ಉಪಕಾರವನ್ನು ಮಾಡಿದವನು ಕೆಟ್ಟು ಹೋಗುವದಿಲ್ಲ. ಇದಲ್ಲದೆ ಬ್ರಾಹ್ಮಣನಿಗೆ ಉಪಕಾರವನ್ನು ಮಾಡಿದರೆ, ಮಹತ್ತಾದ ಧರ್ಮವು ಬರುವದೆಂದು ಯೋಚಿಸಿದೆನು. ಅದಲ್ಲದೆ ಭೀಮನು ಅರಗಿನ ಮನೆಯಲ್ಲಿ ಮಾಡಿದ ಸಾಹಸವನ್ನೂ ಹಿಡಿಂಬನನ್ನು ಕೊಂದದ್ದನ್ನೂ ನೋಡಿ, ಇವನು ಆ ರಾಕ್ಷಸನಿಗೆ ದಕ್ಕುವದಿಲ್ಲ ಎಂದು ವಿಶ್ವಾಸದಿಂದ ಈ ಅರ್ಥಕ್ಕೆ ಒಡಂಬಟ್ಟೆನು. ಇಷ್ಟು ಮಾತ್ರವೇ ಅಲ್ಲ; ಭೀಮನ ಭುಜಬಲವು ಹತ್ತು ಸಾವಿರ ಆನೆಗಳ ಬಲಕ್ಕೆ ಸಮನಾಗಿರುವದು. ಈ ಭೀಮನಿಗೆ ಸಮಾನನಾದ ಪರಾಕ್ರಮಶಾಲಿಯು ಹುಟ್ಟಿದವರೊಳಗೆ ಒಬ್ಬನೂ ಇಲ್ಲ. ಮತ್ತು ಈ ಭೀಮಸೇನನು, ಒಂದು ವೇಳೆ ಇಂದ್ರನು ಯುದ್ಧದಲ್ಲಿ ಎದುರಿಸಿದರೂ, ಅವನನ್ನು ಜೈಸುವನು. ಇದಲ್ಲದೆ ನಾನು ಈತನನ್ನು ಬಾಲ್ಯದಲ್ಲಿ ಶತಶೃಂಗ ಪರ್ವತದ ಮೇಲೆ ಎತ್ತಿ ಕೊಂಡು ಹೋಗುತ್ತಿರುವಾಗ, ನನ್ನ ಕಂಕುಳಿಂದ ಜಾರಿ ಬಿದ್ದು, ತನ್ನ ಶರೀರ ಕಾಠಿಣ್ಯದಿಂದ ಆ ಪರ್ವತದ ಮಹಾ ಶಿಲೆಯನ್ನು ಪುಡಿಪುಡಿ ಮಾಡಿದನು. ಇದಷ್ಟು ನನ್ನ ಮನಸ್ಸಿನಲ್ಲಿ ಮರೆಯದೆ ಇದ್ದದರಿಂದ, ಆ ಬ್ರಾಹ್ಮಣನಿಗೆ ಹಿತವನ್ನು ಎಣಿಸಿ, ಭೀಮನಿಗೆ ಈ ಕಾರ್ಯವನ್ನು ಕಟ್ಟು ಮಾಡಿದೆನೇ ಹೊರತು, ಅಜ್ಞಾನದಿಂದಲೂ ಅರ್ಥ ಲೋಭದಿಂದಲೂ ಬುದ್ಧಿ ಭ್ರಮೆಯಿಂದಲೂ ಈ ಕೆಲಸವನ್ನು ಕಟ್ಟು ಮಾಡಿದವಳಲ್ಲ. ಅದರಿಂದ ಇದು ಬುದ್ಧಿ ಪೂರ್ವಕವಾಗಿ ಮಾಡಿದಂಥ ಕಾರ್ಯವೆಂದು ತಿಳಿ. ನಾವು ಈ ಕಾರ್ಯವನ್ನು ನಿರ್ವಹಿಸಿದರೆ, ಧರ್ಮವೂ ಕೃತಜ್ಞತೆಯೂ ಬರುತ್ತದೆ. ಬ್ರಾಹ್ಮಣನಿಗೆ ಸಹಾಯವನ್ನು ಮಾಡಿದಂಥ ಕ್ಷತ್ರಿಯನು ಶಾಶ್ವತವಾದ ಪುಣ್ಯ ಲೋಕವನ್ನು ಪಡೆಯುವನೆಂದು ಕೇಳಿ ಉಂಟು. ಕ್ಷತ್ರಿಯನಿಗೆ ಪ್ರಾಣ ದಾನವನ್ನು ಮಾಡಿದರೆ, ಇಹ ಪರಗಳಲ್ಲಿ ಕೀರ್ತಿ ಸುಕೃತಗಳನ್ನು ಪಡೆಯುವನು. ವೈಶ್ಯನಿಗೆ ಸಹಾಯವನ್ನು ಮಾಡಿದರೆ, ಲೋಕ ರಂಜಕನಾಗುವನು. ಶರಣಾಗತನಾದ ಶೂದ್ರನ ಭಯವನ್ನು ಪರಿಹರಿಸಿದರೆ, ಆ ಸುಕೃತ ವಿಶೇಷದಿಂದ ಈ ಲೋಕದಲ್ಲಿ ಸಕಲ ರಾಜಪೂಜಿತವಾದ ಕುಲದಲ್ಲಿ ಹುಟ್ಟುವನು ಎಂದು, ಕೃಷ್ಣದ್ವೈಪಾಯನನು ಹೇಳಿರುವದರಿಂದ, ಈ ಕಾರ್ಯವನ್ನು ಭೀಮಸೇನನಿಗೆ ಕಟ್ಟು ಮಾಡಿದೆನು ಎನಲು; ಆ ಅಜಾತ ಶತ್ರುವು—ಎಲೈ, ತಾಯೇ, ನೀನು ಈಗ ಬುದ್ಧಿ ಪೂರ್ವಕ

ವಾಗಿ ಆಚರಿಸಿದಂಥ ಕಾರ್ಯವು ಉಚಿತವೇ ಸರಿ, ಆರ್ತನಾದ ಬ್ರಾಹ್ಮಣನಲ್ಲಿ ಕೃಪಾ ವಿಶೇಷದಿಂದ ನೀನು ಭೀಮನನ್ನು ಕಳುಹಿಸಿದ್ದರಿಂದ, ಆತನು ಮನುಷ್ಯ ಭಕ್ಷಕನಾದ ಆ ರಾಕ್ಷಸನನ್ನು ಈ ಕ್ಷಣದಲ್ಲಿಯೇ ಜಯಿಸಿ, ಪಟ್ಟಣದಲ್ಲಿರುವ ವರಿಗೆಲ್ಲ ಅಭಯ ದಾನವನ್ನು ಮಾಡುವದು ಯಥಾರ್ಥವು. ಹಾಗಾದರೂ ಇಲ್ಲಿ ಇರುವಂಥ ನಮ್ಮನ್ನು ಯಾರೂ ಅರಿಯದೆ ಇರುವ ಹಾಗೆ, ಈ ಬ್ರಾಹ್ಮಣನೊಡನೆ ಪ್ರಯತ್ನದಿಂದ ಹೇಳು ಎನಲು; ಕುಂತೀ ದೇವಿಯು ತಿರಿಗಿ ಬ್ರಾಹ್ಮಣನ ಮನೆಗೆ ಹೋಗಿ, ಅವರೆಲ್ಲರಿಗೂ ಉಚಿತ ಪ್ರಕಾರದಿಂದ ಸಮಾಧಾನವನ್ನು ಹೇಳಿದಳು.

ಆ ಮಾರನೇ ದಿವಸ ಪ್ರಾತಃಕಾಲದಲ್ಲಿ ಮಹಾ ಬಲಶಾಲಿಯಾದ ಭೀಮಸೇನನು ಆ ಬ್ರಾಹ್ಮಣನ ಸಮೀಪಕ್ಕೆ ಹೋಗಿ—ಎಲೈ, ಬ್ರಾಹ್ಮಣೋತ್ತಮನೇ, ನಿನ್ನನ್ನು ಸಕುಟುಂಬನಾಗಿ ಈ ಆಪತ್ತಿನದೆಸೆಯಿಂದ ರಕ್ಷಿಸುತ್ತೇನೆ. ಭಯ ಪಡ ಬೇಡ. ರಾಕ್ಷಸನ ಸಮೀಪಕ್ಕೆ ನಾನೇ ಹೋಗುತ್ತೇನೆ. ನಿನ್ನ ಮನೆಯಲ್ಲಿ ನನಗೆ ಬೇಕಾದ ಅನ್ನವನ್ನು ಮೊದಲೇ ಇಕ್ಕಿದರೆ, ನಾನು ಊಟಾ ಮಾಡಿದ ಮೇಲೆ ರಾಕ್ಷಸನಿಗೆ ಬಲಿಯಾಗುತ್ತೇನೆ ಎನಲು; ಆ ಬ್ರಾಹ್ಮಣನು ಈ ವೃತ್ತಾಂತವನ್ನು ತನ್ನ ಬಂಧುಗಳಿಗೆಲ್ಲ ಹೇಳಿ, ಭೀಮಸೇನನಿಗೆ ಮೃಷ್ಟಾನ್ನವನ್ನಿಕ್ಕಲು; ಮತ್ತು ಪೌರಜನರು ಮಾಂಸ ತುಪ್ಪ ಇವುಗಳಿಂದ ಕೂಡಿರುವ ನಾನಾ ಪ್ರಕಾರವಾದ ಸೂಪಗಳಿಂದಲೂ ಅಪೂಪಗಳಿಂದಲೂ ಉಪ್ಪಿನಕಾಯಿ ಮೊದಲಾದ ವಸ್ತುಗಳಿಂದಲೂ ಕೂಡಿರುವ ಅನ್ನವನ್ನೂ, ಚಿಗಳಿ ತಂಬಿಟ್ಟುಗಳನ್ನೂ, ಕಡುಬುಗಳನ್ನೂ, ಕಲಸೋಗರಗಳನ್ನೂ ತಂದು ಕೊಡಲು; ಭೀಮನು ಅದಷ್ಟನ್ನು ಭಕ್ಷಿಸಿ, ಗುಡಾಣಗಳಲ್ಲಿ ತುಂಬಿದ್ದ ತುಪ್ಪ ಹಾಲು ಮೊಸರುಗಳನ್ನು ಕುಡಿದು, ತೃಪ್ತಿಯನ್ನು ಹೊಂದಿದನು. ಆ ಬಳಿಕ ಪುರಜನರು ಯಥಾ ಪ್ರಕಾರವಾಗಿ ಆ ಮಹಾ ರಾಕ್ಷಸನಿಗೆ ಅಪರಿಮಿತಗಳಾದ ಭಕ್ಷ್ಯ ಭೋಜ್ಯಗಳನ್ನು ಜೊತೆಗೊಳಿಸಿ, ಒಂದು ಭಂಡಿಯಲ್ಲಿರಿಸಿ, ನಾನಾ ಪ್ರಕಾರವಾದ ವಾದ್ಯ ಧ್ವನಿಗಳಿಂದ ಆ ಭಂಡಿಯನ್ನು ಸುತ್ತಿ ಕೊಂಡು ಹೋಗುತ್ತಿದ್ದರು. ಆ ಭೀಮನು ಭಂಡಿಯನ್ನು ಏರಿ, ಪುರಜನಗಳು—ಭೋಜನ ಪ್ರಿಯನಾಗಿ, ರೂಪಸಂಪನ್ನನಾಗಿ, ಯೌವನಸ್ಥನಾಗಿರುವ ಈತನು ನಿರ್ನಿಮಿತ್ತವಾಗಿ ಈ ರಾಕ್ಷಸನಿಗೆ ಯಾತಕ್ಕೆ ಪ್ರಾಣಗಳನ್ನು ಕೊಡುತ್ತಲಿದ್ದಾನೆ? ಎಂದು ಹೇಳುವಂಥ ಮಾತುಗಳನ್ನು ಕೇಳುತ್ತಾ, ಕಪ್ಪಾಗಿರುವ ವೃಷಭಗಳನ್ನು ಹೊಡೆಯುತ್ತಾ, ದಕ್ಷಿಣಾಭಿಮುಖವಾಗಿ ಭಂಡಿಯನ್ನು ನಡಿಸಲು; ಆ ಪೌರಜನರು ಕಟ್ಟಳೇ ಪ್ರಕಾರ ಸಂಕೇತ ಸ್ಥಾನ

ಪರ್ಯಂತರವು ಹೋಗಿ, ಅಲ್ಲಿಯೇ ನಿಂತು, ನೋಡುತ್ತಿರಲು; ಆ ವಾಯುಪುತ್ರನು ಅಲ್ಲಿರುವ ಒಂದು ದೊಡ್ಡ ಮರದ ಸಮೀಪಕ್ಕೆ ಹೋಗಿ, ಎಲುಬುಗಳೂ ಕೂದಲುಗಳೂ ಮೆದಡುಗಳೂ ಕೊಬ್ಬುಗಳೂ ಕಾಲುಗಳೂ ಕೈಗಳೂ ಭುಜಗಳೂ, ತೊಡೆಗಳೂ, ತುಮುರು ತುಮುರುಗಳಾಗಿ, ಕೆಲವು ಒಣಗಿಯೂ ಕೆಲವು ಹಸೀವಾಗಿಯೂ ಕಾಣಿಸುತ್ತಿರಲು; ಎಲ್ಲಿ ನೋಡಿದರೂ, ಹದ್ದು, ರಣಹದ್ದು, ಕಾಗೆ, ನರಿ, ನಾಯಿ, ಇವುಗಳು ವಿಕಾರ ಧ್ವನಿಗಳಿಂದ ಕೂಗುತ್ತಾ, ಓಡ್ಯಾಡುತ್ತಿರಲು; ದುರ್ಗಂಧ ಯುಕ್ತವಾಗಿ, ನೋಡುವದಕ್ಕೆ ಅಶಕ್ಯವಾಗಿ, ಸ್ಮಶಾನದೋಪಾದಿಯಲ್ಲಿ ಭಯಂಕರವಾಗಿರುವ ಆ ಮಹಾ ವೃಕ್ಷದ ಬುಡವನ್ನು ಶೇರಿ, ತನ್ನ ಮನಸ್ಸಿನಲ್ಲಿ—ಪರ್ವತಕ್ಕೆ ಸಮಾನಗಳಾದ ಭಕ್ಷ್ಯ ಭೋಜ್ಯ ರಾಶಿಗಳಿಂದಲೂ ಅನ್ನರಾಶಿಗಳಿಂದಲೂ ತುಂಬಿದ ಈ ಭಂಡಿಯನ್ನು ರಾಕ್ಷಸನು ಬಂದು ನೋಡುವದಕ್ಕೆ ಮೊದಲೇ ಇದಷ್ಟನ್ನು ತಾನೇ ಭಕ್ಷಿಸ ಬೇಕು; ಬಲ ಗರ್ವಿತನಾದ ದುರಾತ್ಮನಾದ ಆ ರಾಕ್ಷಸನು ವಿಜೃಂಭಿಸಿ, ಯುದ್ಧವನ್ನು ಮಾಡುವಾಗ, ಅವನು ನನ್ನನ್ನು ತಳ್ಳಿದರೆ, ಬಲದಿಂದ ನಿಂತಿರ ಬೇಕು; ಘಟ್ಟ್ಯಾಗಿ ನಿಂತರೆ, ಆತನನ್ನು ಕೊಲ್ಲ ಬಹುದು; ಈ ಅನ್ನವನ್ನು ಈಗಲೇ ಭಕ್ಷಿಸದೆ ಹೋದರೆ, ಇನ್ನು ಮೇಲೆ ನನಗೆ ದಕ್ಕುವದಿಲ್ಲ ಎಂದು ನಿಶ್ಚೈಸಿ, ನಾಲ್ಕು ದಿಕ್ಕುಗಳನ್ನು ನೋಡಿ, ಭಂಡಿಯಲ್ಲಿ ಚಂದವಾಗಿ ಕೂತು ಕೊಂಡು, ಶಾಕ ಸೂಪಗಳಿಂದ ಕೂಡಿರುವ ಅನ್ನವನ್ನು ಕ್ರಮವಾಗಿ ಭಕ್ಷಿಸುತ್ತಿರಲು; ಸಂಕೇತಸ್ಥಾನದಲ್ಲಿ ನಿಂತಿದ್ದ ಪೌರ ಜನಗಳು ಉದ್ದವಾದ ದೊಡ್ಡ ಮರಗಳನ್ನು ಏರಿ, ಭೀಷಣಾಕಾರದಿಂದ ಅನ್ನವನ್ನು ಭಕ್ಷಿಸುತ್ತಿರುವ ಭೀಮನನ್ನು ನೋಡಿ—ಬಕನು ರಾಕ್ಷಸಾಕಾರದಿಂದ ಬಂದು ಅನ್ನವನ್ನು ಭಕ್ಷಿಸದೆ ಬ್ರಾಹ್ಮಣ ರೂಪದಿಂದ ಬಂದು ಭಕ್ಷಿಸುತ್ತಿದ್ದಾನೆ ಎಂದು ನುಡಿಯುತ್ತಿರಲು; ಅಮಿತ ಪರಾಕ್ರಮಶಾಲಿಯಾಗಿ ಮಹಾ ಬಲ ಧುರೀಣನಾಗಿರುವ ಭೀಮನು ಮಂದಗಮನದಿಂದ ನಡೆಯುತ್ತಾ, ಅನ್ನವನ್ನು ಭಕ್ಷಿಸುತ್ತಾ, ಬಕನಿದ್ದ ತಾವಿಗೆ ಹೋಗಿ, ಅವನನ್ನು ಒಂದು ತೃಣಕ್ಕೆ ಸರಿಯಾಗಿ ಎಣಿಸಿ—ಎಲೈ, ದುರಾತ್ಮಕನಾದ ರಾಕ್ಷಸನೇ, ಶೀಘ್ರವಾಗಿ ಬಾ, ಎಂದು ಘಟ್ಟಿಯಾಗಿ ಕೂಗಿ ಕರೆಯಲು; ಆ ರಾಕ್ಷಸನು ಆಗ್ರಹ ವ್ಯಗ್ರನಾಗಿ ಭೀಮನ ಸಮೀಪಕ್ಕೆ ಹೋಗಿ, ತನ್ನ ಪಾದ ಘಟ್ಟನದಿಂದ ಭೂಮಿಯು ಎರಡು ಹೋಳಾಗುವ ಹಾಗೆ ತುಳಿಯುತ್ತಾ, ಅವನಿಗೆ ಎದುರಾಗಿ ನಿಂತು, ತನಗೋಸ್ಕರ ತಂದ ಅನ್ನವನ್ನು ನಿರ್ಭಯವಾಗಿ ಭಕ್ಷಿಸುತ್ತಲಿರುವ ಭೀಮನನ್ನು ನೋಡಿ,—ನನಗೋಸ್ಕರ ಜೊತೆ ಮಾಡಿ ತಂದ ಅನ್ನವನ್ನು ಸ್ವಲ್ಪವಾದರೂ ನನ್ನನ್ನು ಸಡ್ಡೆ

ಮಾಡದೆ ಭಕ್ಷಿಸುತ್ತಲಿರುವ ಈ ಮನುಷ್ಯಾಧಮನನ್ನು ಮುಂದೆ ಯಮನ ಮನೆಗೆ ಕಳುಹಿಸಿ, ಆ ಮೇಲೆ ಈ ಅನ್ನವನ್ನು ಭಕ್ಷಿಸುತ್ತೇನೆ ಎಂದು, ಹುಬ್ಬುಗಳನ್ನು ಗಂಟು ಹಾಕಿ ಕೊಂಡು, ಹಲ್ಲು ಮುಡೀ ಕಚ್ಚುತ್ತಾ, ಕರೀ ಆಲಿಗಳನ್ನು ಗರಿಗರಿನೆ ತಿರಿಗಿಸುತ್ತಾ, ನಡೆಯುತ್ತಿರಲು; ಭೀಮನು ಅವನ ವಾಕ್ಯವನ್ನು ಕಿವಿಗೆ ಹಾಕಿ ಕೊಳ್ಳದೆ, ಯಾವ ದಿಕ್ಕನ್ನೂ ನೋಡದೆ, ಅನ್ನವನ್ನು ಭಕ್ಷಿಸುತ್ತಿರಲು; ಪುರುಷ ಭಕ್ಷಕನಾದ ಆ ಬಕನು ಭೀಮನನ್ನು ಕೊಲ್ಲ ಬೇಕೆಂದೆಣಿಸಿ, ಹಸ್ತಗಳನ್ನು ಉನ್ನತವಾಗಿ ಎತ್ತಿ ಕೊಂಡು, ಅಟ್ಟಹಾಸವನ್ನು ಮಾಡುತ್ತಾ, ಅವನ ಮೇಲೆ ಕಾಣಿಸಿ ಕೊಳ್ಳಲು; ಶತ್ರು ಜನ ಭೀಕರನಾದ ಭೀಮಸೇನನು ಯಥಾ ಪ್ರಕಾರ ಭುಂಜಿಸುತ್ತಿರಲು; ಅದನ್ನು ನೋಡಿ, ಆ ಬಕನು ಕೋಪಾಟೋಪದಿಂದ ಬಂದು, ಆ ಭೀಮಸೇನನ ಬೆನ್ನಿನ ಮೇಲೆ ಎರಡು ಕೈಗಳಿಂದ ಅಪ್ಪಳಿಸಲು; ಆ ರಾಕ್ಷಸನ ಅಂಗೈ ಪೆಟ್ಟುಗಳು ಭೀಮಸೇನನ ಹೊಟ್ಟೆಯಲ್ಲಿ ಅಲ್ಲಲ್ಲಿರುವ ಕವಳಗಳನ್ನು ಒಂದೇ ತಾವಿನಲ್ಲಿ ಶೇರಿಸಿ, ಮತ್ತು ಭೋಜನ ಮಾಡುವದಕ್ಕೆ ಸೌಕರ್ಯವನ್ನುಂಟು ಮಾಡಲು; ಆಗಲಾದರೂ ಭೀಮನು ಆತನನ್ನು ಸಡ್ಡೆ ಮಾಡದೆ, ಯಥಾ ಪ್ರಕಾರ ಅನ್ನವನ್ನೇ ಭಕ್ಷಿಸುತ್ತಿರಲು; ಆ ರಾಕ್ಷಸನು ಸಮೀಪದಲ್ಲಿರುವ ಒಂದು ದೊಡ್ಡ ಮರವನ್ನು ಕಿತ್ತು, ಭೀಮನನ್ನು ಕೊಲ್ಲ ಬೇಕೆಂದು ಯತ್ನ ಮಾಡಲು; ಆ ವಾಯುಪುತ್ರನು ತನ್ನ ಎಡದ ಕೈಯಿಂದ ಆತನನ್ನು ಮರ ಸಹಿತವಾಗಿ ಹಿಡಿದು ಕೊಂಡು, ಎಲ್ಲಿಗೂ ಬಿಡದೆ, ಯಥಾ ಪ್ರಕಾರ ಮೆಲ್ಲ ಮೆಲ್ಲಗೆ ಅನ್ನವನ್ನು ಭಕ್ಷಿಸಿ, ಮುಗುಳು ನಗೆಯಿಂದ ಆ ರಾಕ್ಷಸನನ್ನು ಆಚೆಗೆ ಬಿಸಾಟು, ನೂರು ಗುಡಾಣಗಳಲ್ಲಿ ಇರುವ ತುಪ್ಪವನ್ನೂ ನೂರು ಗುಡಾಣಗಳಲ್ಲಿರುವ ಮೊಸರನ್ನೂ ಕುಡಿದು, ಕೈಗಳನ್ನು ತೊಳ ಕೊಂಡು, ಆಚಮನವನ್ನು ಮಾಡಿ, ಪರ್ವತದೋಪಾದಿಯಲ್ಲಿ ಧೈರ್ಯವನ್ನು ಬಿಡದೆ, ಮುಹೂರ್ತ ಮಾತ್ರವು ವೀರಾಸನದಲ್ಲಿ ಕೂತು ಕೊಂಡು, ಮಹಾ ವೃಕ್ಷವನ್ನು ಕೈಯಲ್ಲಿಯೇ ಹಿಡಿದು ಕೊಂಡು, ಗರಿಗರಿನೆ ತಿರಿಗಿಸುತ್ತಾ, ಶೀಘ್ರವಾಗಿ ಮೇಲೆ ಬೀಳುವದಕ್ಕೆ ಬರುವ ಆ ರಾಕ್ಷಸನನ್ನು ನೋಡಿ, ಬೇಗ ಎದ್ದು, ಸಿಂಹನಾದವನ್ನು ಮಾಡಿ, ಭುಜಗಳನ್ನು ತಟ್ಟಿ ಕೊಂಡು, ಆ ರಾಕ್ಷಸನನ್ನು ಕುರಿತು,—ಎಲೈ, ದುರಾತ್ಮನೇ, ಬಹು ಕಾಲ ಮನುಷ್ಯ ಮಾಂಸಗಳಿಂದ ಖಂಡಗಳನ್ನು ಬೆಳಸಿ ಕೊಂಡು, ಮದಿಸಿ ಇದ್ದೀ. ಇನ್ನು ಮೇಲೆ ನನ್ನ ಭುಜ ಬಲದಿಂದ ಪ್ರಾಣಗಳೊಡನೆ ನೀನು ಹಿಂತಿರಿಗಿ ಹೋಗಲಾರೆ. ಏಕಚಕ್ರನಗರದಲ್ಲಿರುವ ಸಮಸ್ತ ಜನಗಳು, ತಮಗೆ ಕಂಟಕನಾದ ನಿನ್ನನ್ನು ನಾನು ಕೊಂದು ಹಾಕುವ

ದರಿಂದ, ಈ ದಿವಸ ಮೊದಲ್ಗೊಂಡು ಭಯವನ್ನು ಬಿಟ್ಟು, ಸುಖವಾಗಿ ನಿದ್ದೆ ಮಾಡಲಿ. ನನ್ನಿಂದ ಹತವಾದ ನಿನ್ನ ಶರೀರವನ್ನು ಹದ್ದು, ರಣಹದ್ದು, ನರಿ ನಾಯಿ, ಕಾಗೆ, ಮೊದಲಾದ ಮೃಗ ಪಕ್ಷಿಗಳು ಎಲ್ಲಿ ನೋಡಿದರೂ ಎಳದೆಳದು, ಭಕ್ಷಿಸುತ್ತಿರಲಿ, ಎಂದು ನುಡಿದು, ಕೋಪಾಟೋಪದಿಂದ ಬಕನ ಮೇಲೆ ಬೀಳಲು; ಆ ರಾಕ್ಷಸನು ಮಹಾ ಬಲ ಪರಾಕ್ರಮ ಧುರೀಣನಾಗಿ, ತನ್ನ ಪಾದ ಘಟ್ಟನದಿಂದ ಭೂಮಿಯನ್ನು ನಡುಗಿಸುತ್ತಾ, ವಿಕಾರವಾದ ಶರೀರದಿಂದ ವಿಜೃಂಭಿಸಿ, ವಾಯುಪುತ್ರನನ್ನು ಪಚಾರಿಸಿ, ಹುಬ್ಬುಗಳನ್ನು ಗಂಟು ಹಾಕಿ ಕೊಂಡು, ಔಡುಗಳನ್ನು ಕಚ್ಚುತ್ತಾ, ಅವನ ಮೇಲೆ ಆ ದೊಡ್ಡ ಮರವನ್ನು ಹಾಕಲು; ಆ ಭೀಮನು ನಸು ನಗೆಯಿಂದ ಎಡದ ಕೈಯಿಂದ ಆ ವೃಕ್ಷವನ್ನು ಹಿಡಿದು ಕೊಂಡು, ಅದನ್ನು ಮುರಿದು ಹಾಕಲು; ಆ ರಾಕ್ಷಸನು ಇನ್ನು ಅನೇಕ ವೃಕ್ಷಗಳನ್ನು ಪ್ರಯೋಗಿಸಲು; ಹಾಗೆಯೇ ಅವರಿಬ್ಬರಿಗೂ ಮರಗಳ ಯುದ್ಧವೇ ಪ್ರವರ್ತಿಸುತ್ತಿತ್ತು.

ಆ ಬಳಿಕ ಬಕನು ತನ್ನ ಬಿರುದನ್ನು ಒಕ್ಕಣಿಸಿ, ಮಹಾ ಬಲ ಶಾಲಿಯಾದ ಮಾರುತ ಪುತ್ರನನ್ನು ಎರಡು ಭುಜಗಳಿಂದ ಬಿಗಿಯಲು; ಮಹಾ ಭುಜನಾದ ಆ ಕುಂತೀ ನಂದನನು ಆ ಪಟ್ಟನ್ನು ಬಿಡಿಸಿ ಕೊಂಡು, ದಿಟ್ಟತನದಿಂದ ಮೆರೆದು, ಈಚೆಗೆ ಆಚೆಗೆ ಅಲ್ಲಾಡದ ಹಾಗೆ ಆತನನ್ನು ಘಟ್ಟ್ಯಾಗಿ ಹಿಡಿದು, ಮಧ್ಯದಲ್ಲಿ ತಿರಿಗಿ ಅನ್ನವನ್ನು ಭಕ್ಷಿಸುತ್ತಾ ಬಾರಿ ಬಾರಿಗೂ ತಿವಿಯುತ್ತಾ, ಎಳೆಯುತ್ತಾ ಇರಲು; ಆ ರಾಕ್ಷಸನು ಭೀಮನ ಬಾಹುಗಳ ಹಿಡಿತಕ್ಕೆ ಶಿಕ್ಕಿ, ಎಳೆಯಲ್ಪಟ್ಟವನಾಗಿ, ಶ್ರಮದಿಂದ ಕಂಗೆಟ್ಟಿದ್ದರೂ, ಬಾರಿ ಬಾರಿಗೂ ಎಳೆದು ಭೀಮನನ್ನು ಕಂಗೆಡಿಸಿದನು. ಅವರಿಬ್ಬರ ಪಾದ ಘಟ್ಟನದಿಂದ ಭೂಮಿಯು ಗಡಗಡನೆ ನಡುಗಿತು. ಈ ಪ್ರಕಾರ ಇಬ್ಬರು ವಿಚಿತ್ರ ಗಮನಗಳಿಂದ ಬಾಹು ಯುದ್ಧವನ್ನು ಮಾಡುತ್ತಿರಲು; ಅವರ ಸಮೀಪದಲ್ಲಿದ್ದ ಮಹೋನ್ನತಗಳಾದ ವೃಕ್ಷಗಳು ತುಮುರುತುಮುರಾಗಿ ಭೂಮಿಯಲ್ಲಿ ಬಿದ್ದವು. ಆ ಸಮಯದಲ್ಲಿ ಪಾಂಡುಕುಮಾರಕನು ಆ ರಾಕ್ಷಸನನ್ನು ತನ್ನ ಬಾಹು ಬಲದಿಂದ ಭೂಮಿಯಲ್ಲಿ ಕೆಡಹಿ—ಎಲೈ, ರಾಕ್ಷಸನೇ, ಸ್ವಲ್ಪ ವಿಶ್ರಮಿಸಿ ಕೊಂಡು, ಮೆಲ್ಲಗೆ ಏಳು ಎಂದು ಬೆನ್ನನ್ನು ತಟ್ಟಿ, ಬಿಟ್ಟು ಬಿಡಲು; ಅವನು ಪುಟ ಜೆಂಡಿನೋಪಾದಿಯಲ್ಲಿ ನೆಗಿದು, ನಿಂತು ಕೊಂಡು, ಭೀಮಾಕಾರದಿಂದ ಬೆದರಿಸಲು; ಭೀಮಸೇನನು ಅಟ್ಟಹಾಸವನ್ನು ಮಾಡಿ, ಅವನನ್ನು ಘಟ್ಟ್ಯಾಗಿ ಹಿಡಿದು, ಅಪ್ಪಿ ಕೊಂಡು, ಅವನ ರಸವಾಳಿಯನ್ನು ಅಮುಕಲು; ಆ ರಾಕ್ಷಸನು ಅದರಿಂದ ಮೈ ಮರತು, ಸ್ವಲ್ಪ ಹೊ

ತ್ತು ಸುಮ್ಮನಿದ್ದು, ಆ ಮೇಲೆ ಕೋಪೋದ್ದೀಪಿತನಾಗಿ ಭೀಷಣಾಕಾರವನ್ನು ಧರಿಸಿ, ಭೀಮನನ್ನು ಬೆದರಿಸಲು; ಆ ಭೀಮನು ನಸುನಗೆಯಿಂದ ಆತನ ಕಂಠವನ್ನು ತನ್ನ ಭುಜದಿಂದ ಬಿಗಿದು ಹಿಡಿದು, ಮೊಗಮಡಿಯಾಗಿ ತಳ್ಳಿ, ಮೊಣಕಾಲಿನಿಂದ ಬೆನ್ನನ್ನು ತಿವಿದು, ನೋಯಿಸಿ, ಆ ಮೇಲೆ ಅವನ ಭುಜಗಳೆರಡನ್ನು ಹಿಡಿದು ಕೊಂಡು, ಮೇಲಕ್ಕೆ ಎತ್ತಿ, ಭೂಮಿಯಲ್ಲಿ ಹಾಕಿ, ತನ್ನ ಎಡಗಾಲಿನಿಂದ ಆತನ ಎದೆಯನ್ನು ಒದೆಯಲು; ಆ ರಾಕ್ಷಸನು ಅತಿ ಕೋಪಿಷ್ಠನಾಗಿ, ಬಾಯಿಯನ್ನು ತೆರೆದು, ಉರಿಯುತ್ತಿರುವ ನಾಲಿಗೆಯುಳ್ಳವನಾಗಿ, ತನ್ನ ಬಲಗೈಯಿಂದ ಭೀಮನ ನೆತ್ತಿಯನ್ನು ಗುದ್ದಿ, ಆತನ ಎಡದ ಪಾರ್ಶ್ವವನ್ನು ಮತ್ತೊಂದು ಮುಷ್ಟಿಯಿಂದ ತಿವಿದು, ಮೊಣಕಾಲಿನಿಂದ ಎದೆಯನ್ನು ತಿವಿದು, ನೋಯಿಸಲು; ಆ ವಾಯುಪುತ್ರನು ಕೋಪಿಸಿ ಕೊಂಡು, ಆ ರಾಕ್ಷಸನನ್ನು ಹಿಡಿದು ಕೊಳ್ಳಲು; ಹೀಗೆ ಮಹಾ ಬಲಶಾಲಿಗಳಾದ ಭೀಮ ಬಕರು ಮದ್ದಾನೆಗಳೋಪಾದಿಯಲ್ಲಿ ಒಬ್ಬರನ್ನೊಬ್ಬರು ಹಿಡಿಯುತ್ತಾ, ತಿವಿಯುತ್ತಾ, ತೊಡರಿ ಕೊಳ್ಳುತ್ತಾ, ಭುಜಗಳನ್ನು ತಟ್ಟಿ ಕೊಂಡು, ಸಿಂಹನಾದವನ್ನು ಮಾಡುತ್ತಿದ್ದರು. ಆ ಸಮಯದಲ್ಲಿ ಅವರ ಬಾಹು ಯುದ್ಧ ಸಂರಂಭದಿಂದ ಆ ಪಟ್ಟಣದಲ್ಲಿರುವ ಜನರೆಲ್ಲರು ಭಯ ಪಡುತ್ತಿದ್ದರು. ಹಾಗೆಯೇ ಅವರಿಬ್ಬರು ಪಾದ ಘಾತಗಳಿಂದ ಭೂಮಿಯನ್ನು ನಡುಗಿಸುತ್ತಾ, ಮರಗಳನ್ನೂ ಬಳ್ಳಿಗಳನ್ನೂ ಹೊದೆಗಳನ್ನೂ ಚೂರ್ಣವಾಗುವ ಹಾಗೆ ಮಾಡುತ್ತಾ, ಪರಸ್ಪರ ಜಯಾಭಿಲಾಷೆಯಿಂದ ಹೋರುತ್ತಿರಲು; ಮೂರು ಗಾವುದ ವಿಸ್ತಾರವುಳ್ಳ ಆ ವನ ಪ್ರದೇಶವು ವೃಕ್ಷ ಗುಲ್ಮ ಲತೆ ಪಾಷಾಣ ರಹಿತವಾಗಿ, ಆಮೆಯ ಬೆನ್ನಿನೋಪಾದಿಯಲ್ಲಿ ಕಾಣಿಸಿತು. ಆ ಬಳಿಕ ಭೀಮನು ಆತನ ಒಳ ಹೊಕ್ಕು, ತನ್ನ ಭುಜಗಳಿಂದ ಆತನನ್ನು ಬಿಗಿದು ಹಿಡಿದು, ನಡುವನ್ನು ತೊಡೆಗಳ ಸಂದನ್ನೂ ಬಿಗಿಯಾಗಿ ತಿವಿದು ನೋಯಿಸಲು, ಆ ರಾಕ್ಷಸನು ಬಹಳವಾಗಿ ಕಂಗೆಟ್ಟನು. ಅದನ್ನು ತಿಳಿದು, ಭೀಮಸೇನನು ಅವನನ್ನು ಭೂಮಿಯ ಮೇಲೆ ಎತ್ತಿ ಹಾಕಿ, ತನ್ನ ಕಾಲುಗಳಿಂದ ತಿಕ್ಕಿ, ಒದ್ದು, ನೋಯಿಸಿ, ಆತನ ಬೆನ್ನು ಮೂಳೆ ಮುರಿಯುವ ಹಾಗೆ ಮೊಣಕಾಲುಗಳಿಂದ ತಿವಿದು, ಬಲಗೈಯಿಂದ ಕತ್ತನ್ನು ಎತ್ತಿ, ಹಿಡಿದು, ಎಡಗೈಯಿಂದ ನಡುಕಟ್ಟನ್ನು ಹಿಡಿದು, ವಿಕಾರ ಧ್ವನಿಯನ್ನು ಮಾಡುತ್ತಿರುವಂಥ ಆ ರಾಕ್ಷಸನನ್ನು ನೆಲಕ್ಕೆ ಹಾಕಿ, ಕುಕ್ಕಿ, ಮೊಣಕಾಲಿನಿಂದ ತಿವಿಯಲು; ಆ ಬಕಾಸುರನು ತನ್ನ ಬಾಯಿಯಿಂದ ರಕ್ತವನ್ನು ಕಾರುತ್ತಾ, ಪ್ರಾಣವನ್ನು ಬಿಟ್ಟನು. ಆತನು ಸತ್ತ ಧ್ವನಿಯನ್ನು ಕೇಳಿ, ಸಕಲ ಜನರು ಭಯ ಪಟ್ಟರು.

ಬಕನು ಸತ್ತನೆಂದು ನೋಡಿ, ವನಗಳಲ್ಲಿಯೂ, ಉದ್ಯಾನವನಗಳಲ್ಲಿಯೂ,
ಜಗತಿಗಳಲ್ಲಿಯೂ, ಕ್ಷುದ್ರ ದೇವಾಲಯಗಳಲ್ಲಿಯೂ ತಿರುಗುತ್ತಲಿರುವ ಆತನ
ಪರಿಚಾರಕರು ಪರಾಕ್ರಮಶಾಲಿಯಾದ ಭೀಮನಿಗೆ ಶರಣಾಗತರಾಗಲು; ಆ
ಭೀಮಸೇನನು ಅವರನ್ನು ನೋಡಿ, ಅಭಯವನ್ನು ಕೊಟ್ಟು,—ಈ ಹೊತ್ತು
ಮೊದಲುಗೊಂಡು ನೀವು ಮನುಷ್ಯರನ್ನು ಬಾಧಿಸಿದರೆ, ಬಕನು ಹೋದ ದಾರಿ
ಯನ್ನು ಹಿಡಿದು ಹೋಗಲುಳ್ಳವರು ಎನಲು;—ಮಹಾ ಪ್ರಸಾದವೆಂದು ಒಡಂ
ಬಟ್ಟು, ಮೊದಲಿದ್ದ ತಾವುಗಳನ್ನು ಬಿಟ್ಟು, ತಾಳೇ ಮರಗಳಲ್ಲಿಯೂ, ಬಸರೀ
ಮರಗಳಲ್ಲಿಯೂ, ಹೂರಗದ ಮರಗಳಲ್ಲಿಯೂ, ಎಕ್ಕದ ಗಿಡಗಳಲ್ಲಿಯೂ,
ಸಕುಟುಂಬವಾಗಿ ಇರುತ್ತಿದ್ದರು. ಮತ್ತು ಬಕನ ತಮ್ಮನು ಭೀಮಸೇನನಿಗೆ
ಶರಣಾಗತನಾಗಿ, ಆತನ ಅಪ್ಪಣೆಯಿಂದ ಯಮುನಾ ತೀರವನ್ನು ಬಿಟ್ಟು, ಶ್ಮಶಾ
ನಗಳಲ್ಲಿ ಇರುತ್ತಿದ್ದನು. ಆ ಬಳಿಕ ಕುಂತೀಕುಮಾರನು ಪ್ರಾಣಗಳನ್ನು ಬಿಟ್ಟಿ
ರುವ ಆ ಮಹಾ ರಾಕ್ಷಸನ ಕಿವಿ, ಕಣ್ಣು, ನಾಲಿಗೆ ಇಲ್ಲದೆ ಇರುವಂಥಾ ಶರೀರ
ವನ್ನು ಪಟ್ಣದ ಬಾಗಲಲ್ಲಿ ಕೆಡಹಲು; ಆ ಮಾರನೇ ದಿವಸ ಪ್ರಾತಃಕಾಲದಲ್ಲಿ ಆ
ಪಟ್ಣದ ಜನರು, ನೆತ್ತರಿಂದ ನೆನೆದು ಪರ್ವತದ ಶಿಖರದಂತೆ ಅತಿ ಭಯಂಕರ
ವಾಗಿ ಬಿದ್ದಿರುವ ಬಕನ ಶವವನ್ನು ಕಂಡು, ಆಶ್ಚರ್ಯ ಪಡುತ್ತಾ, ಮೂಗಿನ
ಮೇಲೆ ಬೆರಳಿಕ್ಕಿ—ಈ ಹೊತ್ತು ದೈವವು ನಮ್ಮ ಪಾಲಿಗೆ ಉಂಟಾಯಿತು
ಎಂದು ಆನಂದ ಪಟ್ಟು, ತಮ್ಮ ತಮ್ಮ ಮನೆಗಳಿಗೆ ಹೋಗಿ, ಸುಖವಾಗಿದ್ದರು.

### 62. The Marriage of Droupadi to the Five Pandu Princes.
### ೬೨. ದ್ರೌಪದಿಯ ಸ್ವಯಂವರ.

ಪಾಂಡವರು ಏಕಚಕ್ರನಗರದಲ್ಲಿ ಬ್ರಾಹ್ಮಣನ ಮನೆಯಲ್ಲಿ ವಾಸಾ ಮಾಡು
ತ್ತಿರುವಾಗ, ಒಬ್ಬ ಬ್ರಾಹ್ಮಣನು ಬಂದು, ಅವರ ತಾಯಿಯಾದ ಕುಂತಿ
ಯೊಡನೆ ಪಾಂಚಾಲ ದೇಶದ ಅರಸನಾದ ದ್ರುಪದ ರಾಯನು ತನ್ನ ಮಗಳಾದ
ದ್ರೌಪದಿಯನ್ನು ಅರ್ಜುನನಿಗೆ ಕೊಡ ಬೇಕೆಂದು ನಿಶ್ಚೈಸಿ ಇರುವಲ್ಲಿ, ಪಾಂಡ
ವರೆಲ್ಲರು ಅರಗಿನ ಮನೆಯಲ್ಲಿ ಸುಟ್ಟು ಹೋದರು ಎಂದು ಸುದ್ದಿಯನ್ನು ಕೇಳಿ,
ಬಹಳ ಚಿಂತೆ ಪಡುತ್ತಿರುವಾಗ, ಆತನ ಪುರೋಹಿತನು—ಎಲೈ, ಅರಸೇ,
ದೊಡ್ಡವರ ಮಾತಿನ ಪ್ರಕಾರ ಧರ್ಮದಿಂದ ನಡೆಯುವಂಥ ಆ ಪಾಂಡವರಿಗೆ
ಹಾನಿಯು ಬರಲಾರದು. ನೀನು ವ್ಯಸನ ಪಡದೆ, ನಿನ್ನ ಮಗಳಿಗೆ ಸ್ವಯಂವ
ರವನ್ನು ಸಾರಿಸಿದರೆ, ಆ ಪಾಂಡವರು ಎಲ್ಲಿದ್ದರೂ ಇಲ್ಲಿಗೆ ಬರುತ್ತಾರೆಂದು
ಹೇಳಿದ್ದರಿಂದ, ಆ ಪುರೋಹಿತನ ಮಾತನ್ನು ಕೇಳಿ, ದ್ರುಪದ ರಾಯನು ಪುಷ್ಯ

ಮಾಸದ ಶುಕ್ಲ ಪಕ್ಷದ ರೋಹಿಣೀ ನಕ್ಷತ್ರ ಯುಕ್ತವಾದ ಶುಭ ದಿವಸದಲ್ಲಿ— ತನ್ನ ಮಗಳಿಗೆ ಸ್ವಯಂವರವೆಂದು ಪಟ್ಣದಲ್ಲಿ ಸಾರಿಸಿದನು. ಈ ದಿವಸಕ್ಕೆ ಇಪ್ಪತ್ತೈದನೇ ದಿವಸದಲ್ಲಿ ಸ್ವಯಂವರ ಮಹೋತ್ಸವವು ಆಗುತ್ತದೆ. ಆ ಮಹೋತ್ಸವವನ್ನು ನೋಡುವದಕ್ಕೆ ದೇವ ಗಂಧರ್ವ ಯಕ್ಷರು, ಬ್ರುಹ್ಮ ಋಷಿ ಗಳು ಹೋಗುತ್ತಿದ್ದಾರೆ. ಮಹಾನುಭಾವರಾದ ನಿನ್ನ ಕುಮಾರಕರು ರೂಪ ವಂತರು. ಇವರನ್ನು ನೋಡಿ, ದ್ರೌಪದಿಯು ಒಬ್ಬನನ್ನು ವರಿಸ್ಯಾಳು. ಯಾರ ಭಾಗ್ಯವು ಹ್ಯಾಗಿದೆಯೋ? ಕಂಡವರ್ಯಾರು? ಅದರಿಂದ ನೀನು ಮಕ್ಕಳನ್ನು ಕರ ಕೊಂಡು, ಆ ಪಾಂಚಾಲ ದೇಶಕ್ಕೆ ಬಾ ಎಂದು ಹೇಳಲು; ಕುಂತೀ ದೇವಿಯು ತನ್ನ ಮಕ್ಕಳನ್ನು ಕರೆದು ಕೊಂಡು, ಹೊರಟಳು.

ಹೀಗೆ ಹೋಗುತ್ತಿರುವಲ್ಲಿ ದಾರಿಯಲ್ಲಿ ಗುಂಪಾಗಿ ಹೋಗುವ ಬ್ರಾಹ್ಮಣರು ಬ್ರುಹ್ಮಚರ್ಯ ವ್ರತ ಸಂಪನ್ನರಾದ ಈ ಐದು ಮಂದಿಯನ್ನು ನೋಡಿ,—ನೀವು ಯಾರು? ಎಲ್ಲಿಂದ ಎಲ್ಲಿಗೆ ಹೋಗುತ್ತೀರಿ? ಎಂದು ಕೇಳಿದ್ದಕ್ಕೆ ಯುಧಿಷ್ಠಿರನು— ಎಲೈ, ಮಹಾತ್ಮರುಗಳಿರಾ, ನಾವು ಏಕ ಚಕ್ರಪುರದ್ದೆಶೆಯಿಂದ ಹೋಗುತ್ತ ಲಿದ್ದೇವೆ. ಇವರು ನನ್ನ ತಮ್ಮದಿರು. ಈ ಮುದುಕಿಯು ನಮ್ಮ ತಾಯಿಯು, ಎನಲು; ಬ್ರಾಹ್ಮಣರು—ಹಾಗಾದರೆ ಬನ್ನಿ! ಈ ಹೊತ್ತು ಪಾಂಚಾಲನಗ ರಕ್ಕೆ ಹೋಗ ಬೇಕು. ಅಲ್ಲಿ ದ್ರೌಪದೀ ದೇವಿಗೆ ಸ್ವಯಂವರ ಮಹೋತ್ಸ ವವು ನಡೆಯುತ್ತದೆ. ಈ ಆದ್ಭುತವನ್ನು ನೋಡುವದಕ್ಕಲ್ಲವೇ, ನಾವು ಗುಂಪು ಕೂಡಿ ಹೋಗುವದು? ನೀವು ನಮ್ಮ ಸಂಗಡಲೇ ಬಂದು, ಅಲ್ಲಿ ಕೂಡಿ ಇರುವ ನಾನಾ ದೇಶಗಳಿಂದ ಬಂದಿರುವ ಅರಸುಗಳ ದೆಶೆಯಿಂದ ಅನೇಕ ಧನ ಕನಕ ವಸ್ತು ವಾಹನಾದಿಗಳ ದಾನಗಳನ್ನೂ, ಭಕ್ಷ್ಯಭೋಜ್ಯ ಮೊದ ಲಾದ ಅನ್ನಗಳನ್ನೂ, ಪರಿಗ್ರುಹಿಸಿ, ಆ ಉತ್ಸವವನ್ನು ನೋಡಿ, ತಿರಿಗಿ ಬರ ಬಹುದು. ನೀವಷ್ಟು ಮನೋಹರಾಕಾರರಾದ್ದರಿಂದ, ಆ ದ್ರುಪದ ರಾಯನ ಮಗಳು ನಿಮ್ಮ ವರೊಳಗೆ ಒಬ್ಬನನ್ನು ವರಿಸ್ಯಾಳು, ಎನಲು; ಯುಧಿಷ್ಠಿರನು—ಹಾಗೆ ಆಗಲಿ. ನಿಮ್ಮ ಸಂಗಡಲೇ ಆ ಉತ್ಸವವನ್ನು ನೋಡುವದಕ್ಕೆ ನಾವು ದ್ರುಪದನ ನಗ ರಕ್ಕೆ ಬರುತ್ತೇವೆ ಎಂದು ಹೇಳಿ, ಆ ಬ್ರಾಹ್ಮಣರೊಡನೆ ಪಾಂಚಾಲ ದೇಶಕ್ಕೆ ಹೋಗುತ್ತಾ, ಮಧ್ಯ ಮಾರ್ಗದಲ್ಲಿ ವ್ಯಾಸ ರುಷಿಯನ್ನು ನೋಡಿ, ಪೂಜಿಸಿ, ಆತನ ಅಪ್ಪಣೆಯನ್ನು ತೆಗೆದು ಕೊಂಡು, ಕ್ರಮದಿಂದ ಪಾಂಚಾಲ ನಗರಕ್ಕೆ ಹೋಗಿ, ಅದರ ಸಮೀಪದಲ್ಲಿ ನಾನಾ ದೇಶಗಳ ದೆಶೆಯಿಂದ ಬಂದಿರುವ ಅರ ಸುಗಳ ಪಾಳ್ಯಗಳನ್ನು ನೋಡುತ್ತಾ, ಒಬ್ಬ ಕುಂಬಾರನ ಮನೆಯಲ್ಲಿ ಇಳಿದು

ಕೊಂಡು, ಯಥಾ ಪ್ರಕಾರವಾಗಿ ಭಿಕ್ಷಾಚರಣವನ್ನು ಮಾಡುತ್ತಿರಲು; ಅವರು ಪಾಂಡವರು ಎಂದು ಯಾರೂ ತಿಳಿಯಲಾರದೆ ಹೋದರು. ಪಾಂಚಾಲರಾಯನಾದ ಯಜ್ಞಸೇನನು—ಅಳಿಯನ ಬಲದಿಂದ ಕೃತಕೃತ್ಯನಾದೇನು ಎಂದು, ತನ್ನ ಮನಸ್ಸಿನಲ್ಲಿ, ಪಾಂಡು ಕುಮಾರನಾದ ಧನಂಜಯನಿಗೆ ತನ್ನ ಮಗಳನ್ನು ಕೊಡ ಬೇಕೆಂದು ಇರುವವನಾಗಿ, ಅರ್ಜುನನನ್ನು ತಿಳಿಯುವದಕ್ಕೆ ಲಕ್ಷ್ಯಭೇಧನವು ಅಸಾಧ್ಯವಾಗುವ ಹಾಗೆ ಮಾಡ ಬೇಕೆಂದು ನಿಶ್ಚೈಸಿ, ಹೆದೆಯನ್ನು ಏರಿಸುವದಕ್ಕೆ ಅಶಕ್ಯವಾದ ಧನುಶ್ಶ್ರೇಷ್ಠವನ್ನು ಹುಡುಕಿ, ವ್ಯಾಘ್ರಪಾದನ ಮಗನಾದ ಸೃಂಜಯ ರಾಯನಿಗೆ ದೇವತೆಗಳು ಕೊಟ್ಟ ಕಬ್ಬಿಣ ಮಯವಾದ ಹೆದೆಯಿಂದ ಅಲಂಕೃತವಾಗಿ, ಕಿಂಧುರವೆಂಬ ಹೆಸರುಳ್ಳಂಥಾದ್ದಾಗಿ, ಅತಿ ದೃಢವಾದ ಧನುಸ್ಸನ್ನು ತರಿಸಿ, ಆಕಾಶ ಮಾರ್ಗದಲ್ಲಿ ಸುವರ್ನ ಮಯವಾದ ಒಂದು ಯಂತ್ರವನ್ನು ಮಾಡಿಸಿ,—ಈ ಧನುಸ್ಸಿಗೆ ಹೆದೆಯನ್ನು ಏರಿಸಿ, ಈ ಯಂತ್ರದ ಕನ್ನದಿಂದ ಗುರಿಯ ಹಾಕಿದವನು ತನ್ನ ಮಗಳನ್ನು ಮದುವೆಯಾಗಲುಳ್ಳವನು ಎಂದು ಸಾರಿಸಲು; ಆ ವೃತ್ತಾಂತವನ್ನು ಕೇಳಿ, ನಾನಾ ದೇಶಾಧಿಪತಿಗಳಾದ ಅರಸುಗಳೂ, ಮಹಾತ್ಮರಾದ ಋಷಿಗಳೂ, ದುರ್ಯೋಧನ ಕರ್ನ ಸಹಿತರಾದ ಕೌರವರೂ, ವಾಸುದೇವ ಸಹಿತರಾದ ಯಾದವರೂ, ಮತ್ತು ಬ್ರಾಹ್ಮಣರೂ ಪಟ್ಟಣಕ್ಕೆ ಬಂದು, ದೃಪದ ರಾಯನಿಂದ ಪೂಜಿತರಾಗಿ, ಆ ಪಟ್ಟಣ ಸಮೀಪದಲ್ಲಿ ಇರುವ ಶಿಂಶುಮಾರ ಪರ್ವತದ ಹತ್ರದಲ್ಲಿ ಪಾಳ್ಯಗಳನ್ನು ಹಾಕಿಸಿದರು.

ಆ ಬಳಿಕ ಆ ಪಟ್ಟಣದ ಈಶಾನ್ಯ ಭಾಗದ ಸಮಪ್ರದೇಶದಲ್ಲಿ, ಅನೇಕವಾದ ಅರಮನೆಗಳೊಡನೆ ಕೂಡಿ, ಕೋಟೆ ಕೊತ್ತಲುಗಳಿಂದ ಅಲಂಕೃತವಾಗಿ, ಬಾಗಿಲುಗಳಲ್ಲಿ ತೋರಣಗಳಿಂದ ಒಪ್ಪಿ, ವಿಚಿತ್ರವಾದ ಮೇಲು ಕಟ್ಟುಗಳಿಂದ ಶೋಭಿತವಾಗಿ, ಬಹಳವಾದ ವಾದ್ಯ ಧ್ವನಿಗಳಿಂದ ಕೂಡಿ, ಚಂದನ ಅಗರು ಧೂಪಗಳಿಂದ ಪರಿಮಳಿಸಿ, ಗಂಧೋದಕಗಳಿಂದ ನೆನಸಲ್ಪಟ್ಟ ಪುಷ್ಪ ಮಾಲಿಕೆಗಳಿಂದ ಅಲಂಕೃತವಾಗಿ, ಕೈಲಾಸ ಶಿಖರದೋಪಾದಿಯಲ್ಲಿ ಪ್ರಕಾಶವಾಗಿ, ಸುವರ್ನಮಯವಾದ ಜಾಲಾಂದರಗಳಿಂದಲೂ, ಮಣಿಗಳಿಂದ ಕಟ್ಟಲ್ಪಟ್ಟ ಭೂಮಿಗಳಿಂದಲೂ, ಏರುವದಕ್ಕೆ ಯೋಗ್ಯಗಳಾದ ಸೋಪಾನಗಳಿಂದಲೂ, ಅನೇಕ ಪ್ರಕಾರವಾದ ಸಿಂಹಾಸನಗಳಿಂದಲೂ, ದಿವ್ಯವಾದ ಮೇಲುಚಪ್ಪರಗಳಿಂದಲೂ ಕೂಡಿ, ಹಂಸದೋಪಾದಿಯಲ್ಲಿ ವರ್ನವುಳ್ಳಂಥಾದ್ದಾಗಿ, ಗಾವುದ ಪರಿಯಂತರವು ವ್ಯಾಪಿಸಿ ಇರುವ ಪರಿಮಳಗಳಿಂದಲೂ, ವಿಸ್ತಾರವಾದ ರಾಜ ಮಾರ್ಗಗ

ಳಿಂದಲೂ, ಬಾಗಿಲುಗಳಿಂದಲೂ ಒಪ್ಪಿ, ನಾನಾ ಪ್ರಕಾರವಾದ ಧಾತುಗಳಿಂದ ವಿಚಿತ್ರವಾದ ಹಿಮವತ್ಪರ್ವತದ ಶಿಖರಗಳನ್ನು ಅನುಸರಿಸಿ ಇರುವ ಉಪ್ಪರಿಗೆಗಳಿಂದ ಒಪ್ಪುತ್ತಲಿರುವ ಸ್ವಯಂವರ ಮಹೋತ್ಸವದ ಮಂಟಪಕ್ಕೆ ಸುತ್ತಲಿರುವ ದಿವ್ಯ ಭವನಗಳಲ್ಲಿ ಸಕಲ ಭೂಷಣ ಭೂಷಿತರಾಗಿ, ಮಹಾ ಬಲಶಾಲಿಗಳಾಗಿ, ದಿವ್ಯ ಮಾಲ್ಯಾಂಬರಗಳನ್ನು ಧರಿಸಿ, ಬ್ರಾಹ್ಮಣ ಪ್ರಿಯರಾಗಿ, ಸ್ವದೇಶ ರಕ್ಷಕರಾಗಿ, ಸಕಲ ಶುಭ ಕರ್ಮ ಧುರೀಣರಾಗಿರುವ ರಾಜ ಶ್ರೇಷ್ಠರು ಪರಸ್ಪರ ಸ್ಪರ್ಧೆಗಳಿಂದ ಸಿಂಹಾಸನದಲ್ಲಿ ಕುಳಿತು ಇರುವದನ್ನು ಗ್ರಾಮಗಳ ದೆಶೆಯಿಂದ ಬಂದಂಥಾ ಜನಗಳು ಆಶ್ಚರ್ಯ ಪಡುತ್ತ, ನೋಡುತ್ತಿದ್ದರು. ಪಾಂಡವರೈದು ಮಂದಿಯು, ನಾನಾ ದೇಶಗಳ ದೆಶೆಯಿಂದ ಬಂದ ಬ್ರಾಹ್ಮಣರೊಡನೆ ಕೂಡಿ, ಒಂದು ಕಡೆಯಲ್ಲಿ ಇದ್ದು ಕೊಂಡು, ದೃಪದ ರಾಯನ ಐಶ್ವರ್ಯಕ್ಕೆ ಆಶ್ಚರ್ಯ ಪಟ್ಟು, ನೋಡುತ್ತಿದ್ದರು.

ಆ ಬಳಿಕ ರಂಗ ಮಂಟಪದ ನಿರ್ಮಾಣದ ದಿವಸಕ್ಕೆ ಹದಿನಾರನೇ ದಿವಸದಲ್ಲಿ, ದೃಪದ ರಾಯನ ಮಗಳು ಗಂಧೋದಕಗಳಿಂದ ಸ್ನಾನವನ್ನು ಮಾಡಿ, ಬಿಳೀ ವಸ್ತ್ರಗಳನ್ನುಟ್ಟು, ಸರ್ವಾಭರಣ ಭೂಷಿತೆಯಾಗಿ, ಸುವರ್ಣಮಯವಾದ ವರಣ ಮಾಲಿಕೆಯನ್ನು ಕೈಯಲ್ಲಿ ಹಿಡಿದು, ಮಂದಗಮನದಿಂದ ರಂಗಮಂಟಪ ಮಧ್ಯಕ್ಕೆ ಬರಲು; ಪಾಂಚಾಲ ಪುರೋಹಿತನಾದ ಬ್ರಾಹ್ಮಣನು ಸ್ನಾನವನ್ನು ಮಾಡಿ, ಅಲಂಕೃತನಾಗಿ, ಅಗ್ನಿ ಮುಖದಲ್ಲಿ ಆಜ್ಯಾಹುತಿಗಳಿಂದ ತೃಪ್ತಿ ಪಡಿಸಿ, ಪುಣ್ಯಾಹವಾಚನಾನಂತರದಲ್ಲಿ ಸಕಲ ಭೇರಿ ಮೃದಂಗಾದಿ ವಾದ್ಯ ಧ್ವನಿಗಳನ್ನು ನಿಲ್ಲಿಸಲು; ದೃಪದ ರಾಯನ ಮಗನಾದ ದೃಷ್ಟದ್ಯುಮ್ನನು ಸಭಾ ಮಧ್ಯದಲ್ಲಿ ನಿಂತು, ಗಂಭೀರ ಧ್ವನಿಯಿಂದ—ಎಲೈ, ಅರಸುಗಳಿರಾ, ಕೇಳಿ! ಯಾರು ಭುಜಬಲಶಾಲಿಯೋ, ಆತನು ಈ ಧನುಸ್ಸಿನಲ್ಲಿ ಹೆದೆಯನ್ನು ಏರಿಸಿ, ಈ ಯಂತ್ರದ ರಂಧ್ರದ್ದೆಶೆಯಿಂದ ಐದು ಬಾಣಗಳನ್ನು ಹೊಡೆದು, ಆಚೆಯಲ್ಲಿರುವ ಲಕ್ಷ್ಯವನ್ನು ಭೇದಿಸಿದವನಾದರೆ, ನನ್ನ ತಂಗಿಯಾದ ದ್ರೌಪದಿಗೆ ಗಂಡನಾಗುವನು. ನನ್ನ ಮಾತು ಸತ್ಯವಲ್ಲದೆ ಸಟೆಯಾಗಲಾರದು ಎಂದು ಹೇಳಿ, ತನ್ನ ತಂಗಿಯನ್ನು ನೋಡಿ—ಎಲೈ, ದ್ರೌಪದಿಯೇ, ಇಲ್ಲಿ ಸ್ವಯಂವರಕ್ಕೆ ಬಂದಿರುವ ಅರಸುಗಳನ್ನು ನೋಡು! ಇವರ ಹೆಸರುಗಳನ್ನು ಕೇಳು! ವಿವರಿಸುತ್ತೇನೆ. ಮಣಿಮಂತನು, ಸಮುದ್ರಸೇನನ ಮಗನಾದ ಚಂದ್ರಸೇನನು, ಕುಮಾರ ಸಮನಾದ ಜರಾಸಂಧನು, ಸುದಂಡನು, ದಂಡನು, ಪಾಂಡ್ರಕವಾಸುದೇವನು, ಭಗದತ್ತನು, ಕಳಿಂಗನು, ತಾಂಬ್ರುಲಿಪ್ತನು, ಮದ್ರದೇಶಾಧಿಪತಿಯಾದ ಶಲ್ಯನು, ಆತ

ನ ಕುಮಾರಕರಾದ ರುಕ್ಮಾಂಗದ ರುಕ್ಮರಥರು, ಕೌರವ ವಂಶ ವರ್ಧನನಾದ ಸೋಮದತ್ತನು, ಆತನ ಮಕ್ಕಳಾದ ಭೂರಿಯೂ, ಭೂರಿಶ್ರವನೂ, ಶಲನೂ ಎಂಬ ಮೂರು ಮಂದಿಯು, ಕಾಂಭೋಜಾಧ್ಯಕ್ಷನಾದ ಸುದಕ್ಷನು, ಕುರು ವಲ್ಲಭನಾದ ದೃಢಧನ್ವನು, ಬೃಹದ್ಬಲನು, ಸುಷೇಣನು, ಊಶೀನರನ ಕುಮಾ ರನಾದ ಶಿಬಿಯು, ಮೂರಗ್ನಿಗಳೋಪಾದಿಯಲ್ಲಿ ಪ್ರಕಾಶಿಸುತ್ತಲಿರುವ ಪಾಂಡ್ಯ ಕೇರಳ ಚೋಳ ದೇಶಾಧಿಪತಿಗಳು, ದಕ್ಷಿಣದಿಗ್ಭಾಗದಲ್ಲಿ ನಿನ್ನನ್ನು ನೋಡುವ ದಕ್ಕೋಸ್ಕರ ಸಿಂಹಾಸನಗಳಲ್ಲಿ ಕುಳಿತು ಕೊಂಡು ಇದ್ದಾರೆ. ರೋಹಿಣಿಯ ಮಗನಾದ ಬಲಭದ್ರನು, ವಾಸುದೇವನು, ಪ್ರದ್ಯುಮ್ನನು, ಸಾಂಬನು, ಚಾರು ದೇಷ್ಣನು, ಸಾರಣನು, ಗದನು, ಅಕ್ರೂರನು, ಸತ್ಯಕನು, ಸಾತ್ಯಕಿಯು, ಕೃತ ವರ್ಮನು, ಯುಯುಧಾನನು, ಹಾರ್ದಿಕನು, ಪೃಥುವು, ವಿಪೃಥುವು, ಕಹನು, ಸವಿಾಕನು, ಅರಿಮೋಜಯನು, ದಾನಪತಿಯು, ಝುಲ್ಲಿಯು, ಪಿಂಡಾರಕನು, ಇವರು ಯಾದವ ವಂಶದವರು. ಮತ್ತು ಭಗೀರಥನು, ಬೃಹತ್ಕ್ಷತ್ರನು, ಸಿಂಧು ದೇಶಾಧಿಪತಿಯಾದ ಜಯದ್ರಥನು, ಬಾಹ್ಲೀಕ ದೇಶಾಧೀಶ್ವರನಾದ ಬೃಹ ದ್ರಥನು, ಶಕುನಿ ಪುತ್ರನಾದ ಉಲೂಕನು, ಚಿತ್ರಾಂಗದನು, ಶುಭಾಂಗದನು, ಪರಾಕ್ರಮ ಧುರೀಣನಾದ ವತ್ಸರಾಜನು, ಕೋಸಲ ದೇಶಾಧಿಪತಿಯು, ಕರ್ನ ನು, ಕರ್ನ ಪುತ್ರನಾದ ವೃಷಸೇನನು, ಬಲಶಾಲಿಯಾದ ಬೃಹತ್ಸೇನನು, ದುರ್ಜ ಯನು, ದಮಘೋಷನ ಮಗನಾದ, ಚೇದಿ ದೇಶಾಧಿಪತಿಯಾಗಿ, ಯುದ್ಧದಲ್ಲಿ ಯಮನಿಗೆ ಸಮಾನನಾದ ಶಿಶುಪಾಲನು, ಮತ್ತು ಇಲ್ಲಿರುವ ನಾನಾ ದೇಶಾಧೀ ಶ್ವರರು ನಿನ್ನನ್ನು ಮದುವೆಯಾಗ ಬೇಕೆಂದು ಬಂದು ಇದ್ದಾರೆ. ಆಕಾಶ ಮಾ ರ್ಗದಲ್ಲಿ ತೋರುವ ಯಂತ್ರ ಮತ್ಸ್ಯವನ್ನು ಇವರಲ್ಲಿ ಯಾರು ಧನುರ್ವಿದ್ಯಾ ಕೌಶಲದಿಂದ ಭೇದಿಸುವನೋ, ಆತನನ್ನು ವರಿಸು ಎಂದು ಹೇಳಿದನು.

ಆ ಬಳಿಕ ರಾಜಕುಮಾರಕರು ಕಡಗ, ಕಿರೀಟ, ತೋಳು ಬಂದಿ, ಚಾಕಳಿ, ಮೊದಲಾದ ದಿವ್ಯಾಭರಣಗಳಿಂದ ಅಲಂಕೃತರಾಗಿ, ರೂಪು ಬಲ ಕುಲ ಶೀಲ ಯೌವನ ಧರ್ಮ ವಿಜೃಂಭಮಾನರಾಗಿ, ಸಕಲ ಶಾಸ್ತ್ರ ಬಲವು ತಮ್ಮಲ್ಲಿಯೇ ಉಂಟು ಎಂದು ಗರ್ವಿತರಾಗಿ, ಮನ್ಮಥ ಬಾಣ ಪೀಡಿತರಾಗಿ, ಹಿಮತ್ಪರ್ವತದಲ್ಲಿ ಹುಟ್ಟಿದ ಮದ್ದಾನೆಗಳೋಪಾದಿಯಲ್ಲಿ ಮದಿಸಿ, ದ್ರೌಪದೀ ದೇವಿಯು ತಮ ತಮಗೆ ಆಗ ಬೇಕೆಂದು ತವಕ ಪಡುತ್ತಾ, ಧನುಸ್ಸನ್ನು ಎತ್ತುವದಕ್ಕೆ ಹೊರಟರು. ಆ ಸ್ವಯಂವರವನ್ನು ನೋಡುವದಕ್ಕೆ ದಿವ್ಯ ವಿಮಾನಗಳನ್ನು ಏರಿ, ಏಕಾದಶ ರುದರು, ದ್ವಾದಶಾದಿತ್ಯರು, ಅಷ್ಟ ವಸುಗಳು, ಅಶ್ವಿನೀ ದೇವತೆಗಳು, ಸಾಧ್ಯರು,

ಮರುದ್ಗಣಗಳು, ಯಮ, ಕುಬೇರ ಮೊದಲಾದ ಅಷ್ಟದಿಕ್ಪಾಲಕರು ಬಂದರು. ಮತ್ತು ದೈತ್ಯರು, ಗರುಡರು, ದೇವರುಷಿಗಳು, ಪನ್ನಗರು, ಯಕ್ಷರು, ಚಾರಣರು, ವಿಶ್ವಾವಸುವು, ನಾರದನು, ಪರ್ವತನು ಮೊದಲಾದ ಗಂಧರ್ವರು, ಅಪ್ಸರೋಜನಗಳು ಬಂದರು. ಆ ಸಮಯದಲ್ಲಿ ಬಲರಾಮ ವೃಷ್ಣಿಅಂಧಕರು ಮೊದಲಾದ ಯಾದವರು ಮಾತ್ರ ಕೃಷ್ಣನ ಅಪ್ಪಣೆಯಿಂದ ಆ ಯಂತ್ರ ಲಕ್ಷ್ಯವನ್ನು ಭೇಧಿಸುವದಕ್ಕೆ ಹೋಗದೆ ನೋಡುತ್ತಿದ್ದರು. ಆಗ ವಾಸುದೇವನು, ಮದವಿಜೃಂಭಣದಿಂದ ಸಮರ ಸನ್ನದ್ಧರಾಗಿ, ಪಾಂಡವರು ಐದು ಮಂದಿಯು ಮದ್ದಾನೆಗಳೋಪಾದಿಯಲ್ಲಿ ಕಾಣಿಸುತ್ತ, ಬೂದಿ ಮುಚ್ಚಿದ ಕೆಂಡಗಳಂತಿರುವ ಇವರನ್ನು ನೋಡಿ, ಕ್ಷಣ ಮಾತ್ರವು ತನ್ನ ಮನಸ್ಸಿನಲ್ಲಿ ಆಲೋಚನೆಯನ್ನು ಮಾಡಿ, ನಿಶ್ಚೈಸಿ, ಅಣ್ಣನಾದ ಬಲಭದ್ರನನ್ನು ನೋಡಿ—ಎಲೈ, ಮಹಾನುಭಾವನೇ, ಬ್ರಾಹ್ಮಣರ ಮಧ್ಯದಲ್ಲಿ ಬ್ರಾಹ್ಮಣ ವೇಷದಿಂದಿರುವ ಈ ಪಾಂಡವರನ್ನು ನೋಡು. ಈತನು ಧರ್ಮರಾಯನು; ಈತನು ಭೀಮಸೇನನು; ಈತನು ಅರ್ಜುನನು; ಇವರಿಬ್ಬರು ನಕುಲ ಸಹದೇವರು; ಎಂದು ತಿಳಿಸಲು; ಆ ಬಲರಾಮನು ಮೆಲ್ಲ ಮೆಲ್ಲಗೆ ಅವರ ರೂಪು ರೇಖಾಲಕ್ಷಣಗಳನ್ನು ನೋಡಿ—ಇವರು ಪಾಂಡು ಕುಮಾರಕರು ಹೌದು ಎಂದು ನಿಶ್ಚೈಸಿ, ಸಂತೋಷ ಪಟ್ಟನು.

ಆಗ ಲಕ್ಷ್ಯಭೇದನಕ್ಕೆ ಹೊರಟಿದ್ದ ರಾಜಕುಮಾರಕರೆಲ್ಲರು ದ್ರೌಪದಿಯಲ್ಲಿ ನೆಟ್ಟಕಣ್ಣುಳ್ಳಂಥಾವರಾಗಿ, ದ್ರೌಪದಿಯು ತಮ್ಮನ್ನು ವರಿಸ ಬೇಕೆಂಬ ಅಭಿಲಾಷೆಯಿಂದ ಒಬ್ಬರೊಬ್ಬರಾಗಿ ತಮ್ಮ ವಿಕ್ರಮಗಳನ್ನು ತೋರಿಸಿ, ಧನುಸ್ಸಿನಲ್ಲಿ ಹೆದೆಯನ್ನು ಏರಿಸುವದಕ್ಕೆ ಕೈಲಾಗದೆ, ಗರ್ವವನ್ನು ಬಿಟ್ಟು, ಹಿಂದು ಮುಂದು ತೋರದೆ, ಶಿಕ್ಕಿ ಕೊಂಡು, ಧನುರ್ವೇಗದಿಂದ ಪೆಟ್ಟು ಬಿದ್ದು, ಭೂಮಿಯಲ್ಲಿ ಹೊರಳುತ್ತಾ, ತೊಟ್ಟ ಭೂಷಣಗಳಷ್ಟೂ ತುಮುರಾಗಲು; ಉಟ್ಟ ವಸ್ತ್ರಗಳಷ್ಟೂ ಜಾರಿ ಬೀಳಲು; ಸುತ್ತಿದ ಹೂಮಾಲೆಗಳೆಲ್ಲಾ ಕೆದರಿ, ಸುರಿಯಲು; ದ್ರೌಪದಿಯಲ್ಲಿರುವ ಆಶೆಯನ್ನು ಬಿಟ್ಟು, ನಾಚಿಕೆಯಿಂದ ದುಃಖ ಪಡುತ್ತಿದ್ದರು. ಆ ಸಮಯದಲ್ಲಿ ಶಿಶುಪಾಲನು ಮಹಾ ಧನುಸ್ಸಿನ ಸಮೀಪಕ್ಕೆ ಬಂದು, ಆ ಧನುಸ್ಸನ್ನು ತಕ್ಕೊಂಡು, ಹೆದೆಯನ್ನು ಏರಿಸುವಾಗ, ಉದ್ದಿನ ಕಾಳು ಮಾತ್ರ ಪ್ರಮಾಣವು ತಗ್ಗಾಗುವ ಹಾಗೆ ಏರಿಸಲು; ಆ ಧನುಸ್ಸಿನ ವೇಗದಿಂದ ಪೆಟ್ಟು ಬಿದ್ದು, ಭೂಮಿಯಲ್ಲಿ ಮೊಳಕಾಲುಗಳಿಂದ ನಿಂತು, ಸಾಧಕದ ಬಲುಮೆಯಿಂದ ಬೀಳದೆ, ಆಚೆಗೆ ತೊಲಗಿದನು. ಆ ಬಳಿಕ ಮಹಾ ಪರಾಕ್ರಮಶಾಲಿಯಾಗಿ ಮದ್ದಾನೆಯಂತೆ ನಡೆಯುಳ್ಳವನಾಗಿ, ಕಂಬುಗ್ರೀವನಾಗಿ, ಕೆಂಪಾದ ಕಣ್ಣುಗಳುಳ್ಳವ

ನಾಗಿ, ಮಹಾ ವೇಗವಂತನಾದ ಜರಾಸಂಧನು ಧನುಸ್ಸಿನ ಸಮೀಪಕ್ಕೆ ಬಂದು, ಹೆಸರಿನ ಕಾಳಷ್ಟು ಮಾತ್ರ ಪ್ರಮಾಣವು ತಪ್ಪುವ ಹಾಗೆ ಹೆದೆಯನ್ನು ಏರಿಸಲು; ಆ ಧನುಸ್ಸು ಅವನನ್ನು ಬೀಸಿ, ಹೊಡೆದ್ದರಿಂದ ಆತನು ಭೂಮಿಯಲ್ಲಿ ಬೀಳು ವಾಗ, ಕೈಗಳನ್ನು ಆನಿಸಿ ಕೊಂಡು, ನಿಂತು, ನಾಚಿಕೆ ಪಟ್ಟು, ರಂಗಸ್ಥಳದ್ದೆ ಶೆಯಿಂದ ಆಚೆಗೆ ಹೋದನು. ಆ ಮೇಲೆ ಮದ್ರ ದೇಶಾಧಿಪತಿಯಾದ ಶಲ್ಯನು ಧನುಸ್ಸಿನ ಸಮೀಪಕ್ಕೆ ಬಂದು, ಸಾಸಿವೆಕಾಳು ಪ್ರಮಾಣವು ತಗ್ಗಾಗುವ ಹಾಗೆ ಹೆದೆಯನ್ನು ಏರಿಸಲು; ಆ ಧನುಸ್ಸಿನಿಂದ ಪೆಟ್ಟು ಬಿದ್ದು, ಆತನು ಪರಾಭವ ವನ್ನು ಹೊಂದಿದನು. ಅನಂತರದಲ್ಲಿ ಸೂರ್ಯನ ಮಗನಾದ ಕರ್ಣನು ಧನುಸ್ಸಿನ ಸಮೀಪಕ್ಕೆ ಬಂದು, ಕೂದಲು ಮಾತ್ರ ಪ್ರಮಾಣವು ತಗ್ಗಾಗುವ ಹಾಗೆ ಹೆದೆ ಯನ್ನು ಏರಿಸಲು; ಆ ಧನುಸ್ಸಿನ ಪೆಟ್ಟನಿಂದ ಪರಾಜಯವನ್ನು ಹೊಂದಿ, ತೊಲಗಿ ಹೋದನು. ಈ ಪ್ರಕಾರದಲ್ಲಿ ಸಕಲರಾದ ಅರಸುಗಳು ಆ ಧನುಸ್ಸಿನ ಪೆಟ್ಟನಿಂದ ಪರಾಭವವನ್ನು ಹೊಂದಿದರು.

ಆ ತರುವಾಯ ಬ್ರಾಹ್ಮಣರ ಮಧ್ಯದಲ್ಲಿರುವ ಅರ್ಜುನನು ಧೈರ್ಯದಿಂದ ಶೀಘ್ರವಾಗಿ ಬರುತ್ತಿರಲು; ಇಂದ್ರ ಧ್ವಜದೋಪಾದಿಯಲ್ಲಿ ಬರುವ ಇಂದ್ರನ ಮಗನನ್ನು ನೋಡಿ, ಅಲ್ಲಿರುವ ಬ್ರಾಹ್ಮಣರೂ ಬ್ರಹ್ಮಚಾರಿಗಳೂ ಕೃಷ್ಣಾಜಿ ನೋತ್ತರೀಯಗಳನ್ನು ಹಾರಿಸುತ್ತಾ, ಸಂತೋಷದಿಂದ ಕೋಲಾಹಲವನ್ನು ಮಾ ಡಿದರು. ಕರ್ಣಶಲ್ಯರು ಮೊದಲಾಗಿ, ಚಾಪವಿದ್ಯಾ ವಿಶಾರದರಾಗಿ, ಮಹಾ ಬಲ ಪರಾಕ್ರಮಶಾಲಿಗಳಾದ ಮಹಾ ವೀರರಿಗೂ ಹೆದೆಯನ್ನು ಏರಿಸುವದಕ್ಕೆ ಅಶಕ್ಯ ವಾದ ಈ ಧನುಸ್ಸಿಗೆ ಅಸ್ತ್ರವಿದ್ಯಾವಿಹೀನನಾಗಿ, ಸ್ವಭಾವದಿಂದ ದುರ್ಬಲನಾ ಗಿರುವ ಈ ಬ್ರಹ್ಮಚಾರಿಯಿಂದ ಹ್ಯಾಗೆ ಹೆದೆಯನ್ನು ಏರಿಸುವದಕ್ಕೆ ಶಕ್ಯವಾ ಗುವದು? ಒಂದು ವೇಳೆ ಇವನು ಸಾಹಸದಿಂದ ಏರಿಸಿದರೆ, ಈ ಸಭೆಯಲ್ಲಿ ರುವ ಅರಸುಗಳಿಗೆ ನಾವಷ್ಟು ಮಂದಿಯು ವಿರೋಧಿಗಳಾಗುತ್ತೇವೆ. ಈತನು ಗರ್ವಾತಿಶಯದಿಂದಲೂ ಸಂತೋಷದಿಂದಲೂ ಬ್ರಾಹ್ಮಣ ಚಾಪಲ್ಯದಿಂದಲೂ ಮುಂದೆ ಬರುವ ಕಾರ್ಯವನ್ನು ನೋಡದೆ, ಈ ಧನುಸ್ಸನ್ನು ಎತ್ತುವದಕ್ಕೆ ತೊಡಗಿ ಇದ್ದಾನೆ. ಇದನ್ನು ನಾವು ವಿಚಾರಿಸಿ, ನಿಲ್ಲಿಸದೆ ಹೋದರೆ, ಪರಿಹಾ ಸ ಯೋಗ್ಯರಾಗಿಯೂ ಅಪ್ರಯೋಜಕರಾಗಿಯೂ ಹೋಗುತ್ತಲಿದ್ದೇವೆ ಎಂದು ಗುಜುಗುಜನೆ ಮಾತಾಡುತ್ತಿದ್ದರು. ಮತ್ತು ಕೆಲವರು ಬ್ರಾಹ್ಮಣರು, ತೇಜೋ ವಿರಾಜಮಾನನಾಗಿ, ಯವ್ವನ ವಿಜೃಂಭಿತನಾಗಿ, ಆನೇ ಸೊಂಡಿಲುಗಳೋಪಾ ದಿಯಲ್ಲಿರುವ ಭುಜಗಳುಳ್ಳವನಾಗಿ, ಬಲುತಿರುವ ಮುಡುಹುಗಳುಳ್ಳವನಾಗಿ,

ಧೈರ್ಯದಲ್ಲಿ ಹಿಮವತ್ಪರ್ವತದ ಹಾಗಿರುವ ಆತನ ಉತ್ಸಾಹ ಶಕ್ತಿಯನ್ನು ನೋಡುವದರಲ್ಲಿ,—ಈತನು ಕಾರ್ಯವನ್ನು ಸಾಧಿಸ್ಯಾನು ಎಂದು ತೋರುತ್ತದೆ. ಅಶಕ್ತನಾದರೆ, ಇಂಥಾ ಕಾರ್ಯಕ್ಕೆ ಹೋಗುವನೇ? ಸ್ಥಾವರ ಜಂಗಮಾತ್ಮಕವಾದ ಲೋಕದಲ್ಲಿ ಬ್ರಾಹ್ಮಣರಿಗೆ ಅಸಾಧ್ಯವಾದದ್ದು ಒಂದುಂಟೇ? ಉದಕಾಹಾರಿಗಳಾಗಿ, ವಾಯುಭಕ್ಷಕರಾಗಿ, ಫಲಾಹಾರಿಗಳಾಗಿ, ವ್ರತಶೀಲರಾದ್ದರಿಂದ, ಶರೀರಗಳಿಂದ ಬಲಹೀನರಾದರೂ, ಬ್ರಹ್ಮತೇಜೋ ಬಲದಿಂದ ಬಲವಂತರಾಗಿರುವರೆಂದು ಪ್ರಸಿದ್ಧವಾಗಿರುವದು. ಈತನದೆಶೆಯಿಂದ ಅವಮಾನವೂ ಜನಾಪಹಾಸವೂ ಬಹು ಜನ ದ್ವೇಷವೂ ಯಾಕೆ ಬಂದೀತು? ಯಾವ ಕಾರ್ಯವನ್ನು ಬ್ರಾಹ್ಮಣನು ಮಾಡಿದರೂ ತಡಿಯುವರುಂಟೇ? ಎಂದು ಹೇಳುತ್ತಿದ್ದರು.

ಆ ಕಾಲದಲ್ಲಿ ಇವನ ಬೆಡಗನ್ನು ನೋಡಿ, ಮನಸ್ಸಿನಲ್ಲಿ ಚಿಂತಿಸುತ್ತ, ರಾಜಕುಮಾರರೆಲ್ಲಾ ಒಬ್ಬರ ಮುಖವನ್ನು ಒಬ್ಬರು ನೋಡುತ್ತಿದ್ದರು. ಆಗ ಅರ್ಜುನನು ದೃಷ್ಟದ್ಯುಮ್ನನನ್ನು ನೋಡಿ—ಬ್ರಾಹ್ಮಣನು ಈ ಧನುಸ್ಸಿನಲ್ಲಿ ಹೆದೆಯನ್ನು ಏರಿಸ ಬಹುದೇ? ಎಂದು ಕೇಳಲು; ದೃಷ್ಟದ್ಯುಮ್ನನು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೊಳಗೆ ಯಾರಾದರೂ ಈ ಧನುಸ್ಸಿನ ಹೆದೆಯನ್ನು ಏರಿಸಿದರೆ, ಆತನಿಗೆ ತನ್ನ ತಂಗಿಯನ್ನು ಕೊಡುತ್ತೇನೆ, ಅಂದನು. ಆ ಮೇಲೆ ಅರ್ಜುನನು ಧನುಸ್ಸಿನ ಸಮೀಪಕ್ಕೆ ಬಂದು, ಪರ್ವತದೋಪಾದಿಯಲ್ಲಿ ಸ್ಥಿರವಾಗಿ ನಿಂತು, ಆ ಧನುಸ್ಸಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ, ಹಸ್ತದಿಂದ ಎತ್ತಿ, ನಿಮಿಷಮಾತ್ರದಲ್ಲಿ ಹೆದೆಯನ್ನು ಏರಿಸಿ, ಐದು ಬಾಣಗಳನ್ನು ಪ್ರಯೋಗಿಸಲು; ಆ ಬಾಣಗಳು ಯಂತ್ರದ ರಂಧ್ರ ಮಾರ್ಗದಿಂದ ಹೋಗಿ, ಭೂಮಿಗೆ ಬೀಳುವಂತೆ ಆ ಲಕ್ಷ್ಯಗಳನ್ನು ಕೆಡಹಿದವು. ಆಗ ಅಂತರಿಕ್ಷದಲ್ಲಿ ಜಯ ಜಯ ಧ್ವನಿಯು ಕೇಳಿಸಿತು. ಆಗ ರಂಗ ಮಧ್ಯದಲ್ಲಿ ಸಮಸ್ತ ಜನಗಳು ಸಂತೋಷದಿಂದ ಕೋಲಾಹಲ ಧ್ವನಿಗಳನ್ನು ಮಾಡಿದರು. ದೇವತೆಗಳು ಪುಷ್ಪ ವೃಷ್ಟಿ ಯನ್ನು ಕರೆದರು. ಬ್ರಾಹ್ಮಣರು ಉತ್ತರೀಯಗಳನ್ನು ಮೇಲಕ್ಕೆ ಹಾರಿಸಿ, ಕುಣಿದಾಡಿದರು. ಸಕಲ ವಾದ್ಯಗಳು ಮೊಳಗಿದವು. ಸೂತ ಮಾಗಧ ವಂದಿ ವೈತಾಳಿಕರು ಅರ್ಜುನನನ್ನು ಸಾವಿರ ಪ್ರಕಾರವಾಗಿ ಸ್ತುತಿಸಿದರು. ಈ ಪ್ರಕಾರದಿಂದ ಸಮಸ್ತ ಜನ ಕೋಲಾಹಲವು ವಿಜೃಂಭಿಸಲು; ಧರ್ಮರಾಯನು ನಕುಲ ಸಹದೇವರೊಡನೆ ಕೂಡಿ, ತಾವಿದ್ದ ಬಳಿಗೆ ಹೊರಟು ಹೋದನು. ಪಾಂಚಾಲರಾಯನ ಮಗಳು ಲಕ್ಷ್ಯವನ್ನು ಕೆಡಹಿದ ಇಂದ್ರ ಸಮಾನನಾದ ಇಂದ್ರ ಪುತ್ರನನ್ನು ನೋಡಿ, ಯಾವಾಗಲೂ ಎಡೆ ಬಿಡದೆ ಇರುವ ಸಹಚರ್ಯವನ್ನು ಮಾಡು

ವಂಥಾವಳಂತೆ, ತನ್ನ ಪ್ರೀತಿಯಿಂದ ನಗದೆ ನಗುವ ಹಾಗೆ ಅಭಿನಯಿಸುತ್ತ,
ಕಡೆಗಣ್ಣಿನ ನೋಟದಿಂದಲೇ ನೋಡುತ್ತಾ, ಬಿಳುಪಾದ ಪುಷ್ಪ ಮಾಲಿಕೆಯನ್ನು
ಕೈ ಕೊಂಡು, ನಸುನಗೆಯೊಡನೆ ಕೂಡಿ, ಆತನ ಸಮೀಪಕ್ಕೆ ಹೋಗಿ, ವಿಸ್ತಾರ
ವಾದ ವಕ್ಷದಲ್ಲಿ ಅಮೂಲ್ಯವಾದ ಪುಷ್ಪ ಮಾಲಿಕೆಯನ್ನು ಹಾಕಿ, ಶಚೀ ದೇವಿ
ಯು ದೇವೇಂದ್ರನನ್ನು, ಸ್ವಾಹಾ ದೇವಿಯು ಅಗ್ನಿಯನ್ನು, ಲಕ್ಷ್ಮೀ ದೇವಿಯು
ಮಹಾ ವಿಷ್ಣುವನ್ನು, ಸುವರ್ಚಲೆಯು ಸೂರ್ಯನನ್ನು, ರತಿ ದೇವಿಯು ಮನ್ಮಥ
ನನ್ನು, ಪಾರ್ವತಿಯು ಪರಮೇಶ್ವರನನ್ನು ವರಿಸಿದ ಹಾಗೆ ವರಿಸಿದಳು. ದ್ರುಪದ
ರಾಯನು ಆ ಅತಿಶಯವನ್ನು ನೋಡಿ, ಸಂತೋಷ ಪಡುತ್ತಾ, ತನ್ನ ಸೇನೆ
ಯೊಡನೆ ಕೂಡಿ, ಆತನಿಗೆ ಸಹಾಯವನ್ನು ಮಾಡ ಬೇಕೆಂದೆಣಿಸಿ, ರಂಗ ಮಧ್ಯ
ದಲ್ಲಿ ದ್ರೌಪದಿಯನ್ನು ಕೈ ಕೊಂಡು, ಬ್ರಾಹ್ಮಣರಿಂದ ಪೂಜ್ಯನಾಗಿ ಇರುವ
ಅರ್ಜುನನ ಸಂಗಡಲೇ ಹೊರಟು ಹೋದನು.

ತರುವಾಯ ಈ ಪ್ರಕಾರದಲ್ಲಿ ದ್ರುಪದ ರಾಯನು ಆ ಮಹಾನುಭಾವನಾದ
ಬ್ರಾಹ್ಮಣನಿಗೆ ಕನ್ನಿಕೆಯ ಕೊಟ್ಟದ್ದನ್ನು ತಿಳಿದು, ಸಕಲರಾದ ಅರಸುಗಳು
ಒಬ್ಬರೊಬ್ಬರು ಮುಖಗಳನ್ನು ನೋಡಿ ಕೊಳ್ಳುತ್ತಾ,—ಕಟಕಟಾ! ಈ ನೃಪಾ
ಧಮನು ನಮ್ಮಿಷ್ಟರನ್ನು ಕರತರಿಸಿ, ಔತನವನ್ನು ಮಾಡಿಸಿ, ನಮ್ಮನ್ನು ತೃಣೀಕ
ರಿಸಿ, ಈ ಕನ್ಯಾ ರತ್ನವನ್ನು ಬ್ರಾಹ್ಮಣನ ಪಾಲು ಮಾಡ ಬೇಕೆಂಬ ಎಣಿಕೆ
ಯಲ್ಲಿ ಇದ್ದಾನೆ. ಈತನು ವೃದ್ಧನು, ಗುಣವಂತನು, ಪೂಜ್ಯನು ಎಂದು ನಾವು
ನಂಬ ಬಾರದು. ಸಕಲ ರಾಜ ವಿರೋಧಿಯಾಗಿ, ದುರಾತ್ಮನಾದ ಈತನನ್ನು,
ಮಗನು ಸಹಿತವಾಗಿ, ಕೊಂದರೂ, ದೋಷವಿಲ್ಲ. ದೇವ ಕುಮಾರಕರ ಹಾಗಿ
ರುವ ರಾಜ ಕುಮಾರಕರು ನೆರೆದಿರುವದರಲ್ಲಿ ಈತನ ಮಗಳಿಗೆ ಯೋಗ್ಯನಾದ
ಒಬ್ಬ ವರನೂ ಇಲ್ಲದೆ ಹೋದನೇ? ಸ್ವಯಂವರವು ಕ್ಷತ್ರಿಯರಿಗಲ್ಲದೆ
ಬ್ರಾಹ್ಮಣರಿಗೆ ಸಲ್ಲದು. ನಮಗೆ ಬ್ರಾಹ್ಮಣರ ಗೊಡವೆ ಯಾತಕ್ಕೆ ಅವರು
ಅಜ್ಞಾನದಿಂದ ಇಂಥಾ ರಾಜ ವಿರೋಧವನ್ನು ಮಾಡಿದರೂ, ಅವರನ್ನು ನಿಗ್ರಹಿ
ಸುವದು ನಮಗೆ ಧರ್ಮವಲ್ಲ. ನಮಗಿರುವ ಪುತ್ರ ಮಿತ್ರ ಧನಗಳೂ ರಾಜ್ಯವೂ
ಪ್ರಾಣಗಳೂ ಬ್ರಾಹ್ಮಣರ ಪೂಜಾ ನಿಮಿತ್ತವಾದ್ದರಿಂದ ಅವರಿಗೆ ಹಿಂಸೆಯನ್ನು
ಮಾಡ ಬಾರದು. ನಮಗೆ ಅವಮಾನಕ್ಕೆ ಕಾರಣವಾದ ಈ ಕನ್ನಿಕೆಯನ್ನು
ಎಳ್ಳು ಎಳ್ಳಷ್ಟಾಗಿ ಛೇದಿಸಿ, ಈ ಹೊತ್ತು ಮೊದಲುಗೊಂಡು ಅರಸುಗಳಿಗೆ ಅವ
ಮಾನ ಕಾರಣಗಳಾದ ಕಾರ್ಯಗಳನ್ನು ಅಜ್ಞಾನದಿಂದಲಾದರೂ ಮಾಡದೆ ಇರು
ವ ಹಾಗೆ ಮಾಡ ಬೇಕು ಎಂದು, ತಮ್ಮ ತಮ್ಮೊಳಗೆ ನಿಶ್ಚೈಸಿ, ದ್ರುಪದ ರಾ

ಯನನ್ನು ಸಂಹರಿಸ ಬೇಕೆಂದು, ಹಿಡಿಯುವದಕ್ಕೆ ಹೋಗಲು; ದ್ರುಪದನು ಭಯದಿಂದ—ಕಾರ್ಪಣ್ಯದಿಂದಲಾದರೂ ಪ್ರಾಣ ರಕ್ಷಣೆಯನ್ನು ಮಾಡಿ ಕೊಂಡು, ಕಲಹವಿಲ್ಲದೆ ಇರ ಬೇಕೆಂದು ಯೋಚಿಸಿರಲು; ಭೀಮಾರ್ಜುನರಿಬ್ಬರು ಮದ್ದಾನೆಗಳೋಪಾದಿಯಲ್ಲಿ ನಿಂತು, ನಾನಾ ಪ್ರಕಾರವಾದ ಆಯುಧಗಳನ್ನೂ ಕೈ ಕೊಡಪುಗಳನ್ನೂ ಕವಚಗಳನ್ನೂ ಧರಿಸಿ, ತಮ್ಮ ಮೇಲೆ ಬೀಳುವಂಥ ರಾಜ ಕುಮಾರಕರ ಮೇಲೆ ಕಾಣಿಸಿ ಕೊಂಡರು. ಭೀಮಸೇನನು ವಿಚಿತ್ರ ವಾದ ಸಾಹಸದಿಂದ ತನ್ನ ಭುಜ ಬಲವನ್ನು ಮೆರೆಯಿಸುತ್ತಾ, ವೇಗದಿಂದ ಒಂದು ಮಹಾ ವೃಕ್ಷವನ್ನು ಕಿತ್ತು ಕೊಂಡು, ಮದ್ದಾನೆಯಂತೆಯೂ, ಯಮ ನಂತೆಯೂ ಬಂದು, ಅರ್ಜುನನ ಸಮೀಪದಲ್ಲಿ ನಿಂತನು.

ಆ ಸಮಯದಲ್ಲಿ ಅಲ್ಲಿರುವ ಬ್ರಾಹ್ಮಣೋತ್ತಮರು ಕೃಷ್ಣಾಜಿನಗಳನ್ನು ಹಾರಿಸುತ್ತಾ, ಕೈಯಲ್ಲಿರುವ ಜಲಪಾತ್ರಗಳನ್ನು ಎತ್ತಿ ಎತ್ತಿ ಹಾಕುತ್ತಾ, ಅರ್ಜು ನನಿಗೆ—ಎಲೈ, ಬ್ರಾಹ್ಮಣ ಕುಮಾರನೇ, ನೀನು ಮನಸ್ಸಿನಲ್ಲಿರುವ ಭಯವನ್ನು ಬಿಡು! ಸಮಯ ಬಂದಾಗ ನಾವು ನಿನಗೆ ಸಹಾಯವಾಗಿ ಬಂದು, ಶತ್ರುಗಳನ್ನು ಜಯಿಸುತ್ತೇವೆ ಎನಲು; ಅರ್ಜುನನು ನಸು ನಗುತ್ತಾ—ನೀವು ಯುದ್ಧಕ್ಕೆ ಬರ ಬೇಡಿ! ಪಾರ್ಶ್ವಗಳಲ್ಲಿ ಇದ್ದು ಕೊಂಡು, ನೋಡುತ್ತಿರ್ರಿ! ನನ್ನ ಶರ ಪರಂಪರೆಗ ಳಿಂದ ಈ ಶತ್ರುಗಳ ಸಮೂಹವನ್ನು, ಗರುಡ ಮಂತ್ರಗಳಿಂದ ಸರ್ಪಗಳನ್ನು ತಡೆಯುವ ಮೇರೆಗೆ, ನಾನೊಬ್ಬನೇ ತಡೆಯುತ್ತೇನೆ ಎಂದು ಹೇಳಿ, ಆ ಲಕ್ಷ್ಯ ವನ್ನು ಕೆಡಹುವದಕ್ಕೆ ತಂದಿದ್ದ ಮಹಾ ಧನುಸ್ಸನ್ನೇ ಕೈಗೆ ತೆಕ್ಕೊಂಡು, ಹೆದೆ ಯನ್ನು ಏರಿಸಿ, ಭೀಮನೊಡನೆ ಕೂಡಿ, ಧೈರ್ಯಗೊಂಡು, ಪರ್ವತದ ಹಾಗೆ ಚಲಿ ಸದೆ, ನಿಂತು, ಕೋಪಾವೇಶದಿಂದ ಯುದ್ಧಕ್ಕೆ ಬಂದಿರುವ ಕರ್ಣನು ಮೊದ ಲಾದ ಮಹಾ ಯೋಧಿಗಳ ಮೇಲೆ ಬಂದು ಬಿದ್ದನು. ಆ ರಾಜಕುಮಾರಕರು, ಯುದ್ಧ ಮುಖದಲ್ಲಿ ಜೈಸ ಬೇಕೆಂದು ಕಾಣಿಸಿ ಕೊಂಡವನು ಬ್ರಾಹ್ಮಣನಾದ ರೂ, ಕೊಲ್ಲ ತಕ್ಕದ್ದು ಯುಕ್ತವೆಂದು ನಿಶ್ಚೈಸಿ, ಯುದ್ಧ ಸನ್ನದ್ಧರಾಗಿ ಬಂದು, ಸೂರ್ಯನ ಮಗನಾದ ಕರ್ಣನು, ಹೆಣ್ಣಾನೆಯ ನಿಮಿತ್ತವಾಗಿ ಮತ್ತೊಂದಾನೆಯೊ ಡನೆ ಹೋರುವ ಮದ್ದಾನೆಯ ಚಂದದಿಂದ, ಅರ್ಜುನನೊಡನೆ ಹೋರಿದನು. ಮದ್ರ ದೇಶಾಧಿಪತಿಯಾಗಿ, ಮಹಾ ಬಲಶಾಲಿಯಾದ ಶಲ್ಯನು ಭೀಮನೊಡನೆ ಯುದ್ಧವನ್ನು ಮಾಡುತ್ತಿದ್ದನು. ದುರ್ಯೋಧನನು ಮೊದಲಾದ ಅರಸುಗಳು ಮಿಕ್ಕಾದ ಬ್ರಾಹ್ಮಣರೊಡನೆ ಕೂಡಿ, ಮೆಲ್ಲ ಮೆಲ್ಲನೆ ವಿರೋಧದಿಂದ ಮೃದು ವಾದ ಬಾಣಗಳನ್ನು ಪ್ರಯೋಗಿಸುತ್ತಿದ್ದರು. ಅರ್ಜುನನು ತನ್ನ ಮೇಲೆ ಕಾಣಿಸಿ

ಕೊಂಡ ಕರ್ಣನ ಮೇಲೆ ಮೂರು ಬಾಣಗಳನ್ನು ಪ್ರಯೋಗಿಸಲು; ಅತಿ ತೀಕ್ಷ್
ಣವಾದ ಆತನ ಬಾಣಗಳ ಪೆಟ್ಟುಗಳಿಂದ ಕರ್ಣನು ಮೂರ್ಛೆ ಹೊಂದಿ, ಅತಿ
ಪ್ರಯತ್ನದಿಂದ ಎಚ್ಚತ್ತು, ತಿರಿಗಿ ಆತನ ಮೇಲೆ ಕಾಣಿಸಿ ಕೊಂಡನು.

ಹೀಗೆ ಮಹಾ ವೀರರಿಬ್ಬರು ಅಪರಿಮಿತ ಪರಾಕ್ರಮ ವಿಜೃಂಭಣದಿಂದ ಪರ
ಸ್ಪರ ಜಯಾಭಿಲಾಷಿಗಳಾಗಿ—ನೀನು ಮಾಡುವಂಥಾ ಪರಾಕ್ರಮಕ್ಕೆ ನಾನು
ಮಾಡುವಂಥಾ ಪರಾಕ್ರಮವನ್ನು ನೋಡು ಎಂದು, ಶೂರರಾಡುವ ಮಾತನ್ನು
ಆಡುತ್ತಾ, ಹೋರುತ್ತಿರುವ ಸಮಯದಲ್ಲಿ, ಅರ್ಜುನನ ಅಸದೃಶ ಭುಜಬಲವ
ನ್ನು ನೋಡಿ, ಕೋಪಾಟೋಪ ವಿಜೃಂಭಿತನಾಗಿ, ಕರ್ಣನು ವೇಗವುಳ್ಳಂಥ ಆತನ
ಬಾಣಗಳಿಗೆ ಸ್ವಲ್ಪವಾದರೂ ಭಯ ಪಡದೆ, ಸೈನ್ಯವು ಸಂತೋಷ ಪಡುವಂತೆ
ಸಿಂಹ ನಾದವನ್ನು ಮಾಡಿ—ಎಲೈ, ಬ್ರಾಹ್ಮಣೋತ್ತಮನೇ, ನಿನ್ನ ಭುಜ ಬಲ
ಕ್ಕೂ ಧೈರ್ಯಕ್ಕೂ ನಿನ್ನ ಶಸ್ತ್ರಾಸ್ತ್ರ ಕೌಶಲಕ್ಕೂ ಮೆಚ್ಚಿದೆನು. ನೀನು ಪ್ರತ್ಯ
ಕ್ಷವಾದ ಧನುರ್ವೇದವೋ? ಪರಶುರಾಮನೋ? ಇಂದ್ರನೋ? ಉಪೇಂದ್ರ
ನೋ? ತಿಳಿಯಲಿಲ್ಲ. ಇವರೊಳಗೆ ಯಾರೋ ಒಬ್ಬನು ತನ್ನ ದಿವ್ಯ ರೂಪವನ್ನು
ಮರೆ ಮಾಡಿ ಕೊಂಡು, ಬ್ರಾಹ್ಮಣ ರೂಪದಿಂದ ಬಂದಿರುವನಾಗಿ, ನಿಶ್ಚೈಸಿ
ದ್ದೇನೆ. ನಾನು ಕೋಪಿಸಿ ಕೊಂಡು, ಯುದ್ಧದಲ್ಲಿ ನಿಂತರೆ, ದೇವೇಂದ್ರನೂ
ಆತನ ಮಗನಾದ ಅರ್ಜುನನೂ ಹೊರತಾಗಿ, ಮತ್ತೊಬ್ಬರೂ ನನ್ನ ಎದುರಿಗೆ
ನಿಲ್ಲಲಾರರು. ಪಾಂಡವರು ಆ ಹೊತ್ತೇ ಅರಗಿನ ಮನೆಯಲ್ಲಿ ಬೆಂದು ಹೋದರು.
ನೀನಾರು? ಪಿನಾಕಪಾಣಿಯಾದ ಪರಮೇಶ್ವರನೋ? ತಿಳಿಸು. ನಾನು ಸಕಲ
ಧನುರ್ಧರರೊಳಗೆ ಶ್ರೇಷ್ಠನಾದ ಕರ್ಣನು. ಧನುರ್ವೇದದಲ್ಲಿ ಬ್ರಹ್ಮಾಸ್ತ್ರದಲ್ಲಿ
ಸಹ ಗುರು ಉಪದೇಶ ಪ್ರಭಾವದಿಂದ ಶಿಕ್ಷಿತನಾಗಿದ್ದರೂ, ಬಾಹು ಬಲ ವಿಜೃಂ
ಭಿತನಾದ ನಿನ್ನಲ್ಲಿ ತನ್ನ ಬಾಹು ಬಲವನ್ನು ಕಾಣಿಸುವದಿಲ್ಲ ಎಂದು, ಅರ್ಜುನನ
ನ್ನು ಕೆಣಕಲಾರದೆ, ನುಡಿಯಲು; ಅರ್ಜುನನು ಕರ್ಣನನ್ನು ನೋಡಿ—ಎಲೈ,
ಸೂತ ನಂದನನೇ, ನಾನು ಧನರ್ವೇದವೂ, ಪ್ರತಾಪಶಾಲಿಯಾದ ಪರಶುರಾಮ
ನೂ, ಮಹೇಶ್ವರನೂ, ಇಂದ್ರನೂ ಅಲ್ಲ. ಗುರು ಉಪದೇಶದಿಂದ ಬ್ರಹ್ಮಾಸ್ತ್ರ
ದಿಂದ ಸಮರ್ಥನಾದ ದ್ವಿಜನು; ಈ ಮಹಾ ಯುದ್ಧದಲ್ಲಿ ನಿನ್ನನ್ನು ಜೈಸುವದ
ಕ್ಕೆ ಎಣಿಸಿ ಇದ್ದೇನೆ. ನೀನು ಪ್ರಾಣಗಳನ್ನು ತಪ್ಪಿಸಿ ಕೊಂಡು, ಎಲ್ಲಿಗಾದರೂ
ಹೊರಟು ಹೋಗು! ನಾನು ಜೀವ ಸಹಿತವಾಗಿ ನಿನ್ನನ್ನು ಬಿಡುವದಿಲ್ಲ. ಇಲ್ಲದಿ
ದ್ದರೆ—ನಾನು ಪರಾಜಿತನಾದೆನು ಎಂದು ಹೇಳಿ, ಸುಖವಾಗಿ ಹೋಗು ಎಂದು
ನುಡಿದು, ಕರ್ಣನ ಧನುಸ್ಸನ್ನು ಖಂಡಿಸಿದನು. ಆ ಬಳಿಕ ಕರ್ಣನು ಮತ್ತೊಂದು

ಧನುಸ್ಸನ್ನು ತೆಕ್ಕೊಂಡು, ಯುದ್ಧಕ್ಕೆ ಬರಲು; ಬಾಣ ಸಹಿತವಾದ ಆ ಧನುಸ್ಸನ್ನು ತಿರಿಗೂ ಖಂಡಿಸಿ, ಬಹು ಬಾಣಗಳನ್ನು ಆತನ ಮೇಲೆ ಪ್ರಯೋಗಿಸಲು; ಕರ್ನನು ಆ ಬಾಣಗಳಿಂದ ಪೆಟ್ಟು ಬಿದ್ದು, ಓಡಿ ಹೋಗಿ, ಮುಹೂರ್ತ ಮಾತ್ರವಲ್ಲಿದ್ದು, ತಿರಿಗೂ ಧನುಸ್ಸನ್ನೂ ಬಾಣಗಳನ್ನೂ ತೆಕ್ಕೊಂಡು, ಅರ್ಜುನನ ಸಮೀಪಕ್ಕೆ ಬಂದು, ಅನೇಕವಾದ ಬಾಣಗಳನ್ನು ಸುರಿಯಲು; ಪುನಹ ಅರ್ಜುನನು ಮತ್ತೊಂದು ಬಾಣದಿಂದ ಆತನ ಧನುಸ್ಸನ್ನು ಖಂಡಿಸಲು; ಆತನು— ಬ್ರಹ್ಮ ತೇಜಸ್ಸನ್ನು ಗೆಲ್ಲುವದಕ್ಕೆ ಎಂಥಾವನಿಗೂ ಶಕ್ಯವಲ್ಲ ಎಂದು, ಯುದ್ಧವನ್ನು ಬಿಟ್ಟು, ಓಡಿ ಹೋದನು.

ಇತ್ತಲಾ ಶಲ್ಯನೂ ಭೀಮಸೇನನೂ ಅನ್ಯೋನ್ಯವಾಗಿ ಕಾಣಿಸಿ ಕೊಂಡು, ಮದ್ದಾನೆಗಳ ಹಾಗೆ ಹೋರುತ್ತಾ, ಒಬ್ಬನ ಮೇಲೆ ಒಬ್ಬನು ಬಿದ್ದು, ಮುಷ್ಟಿ ಪ್ರಹಾರಗಳಿಂದಲೂ, ಮೊಳಕಾಲುಗಳ ಪೆಟ್ಟುಗಳಿಂದಲೂ ನೋಯಿಸುತ್ತಾ, ಹೋರುವ ಸಮಯದಲ್ಲಿ, ಭೀಮಸೇನನು ತನ್ನ ಎರಡು ಭುಜಗಳಿಂದ ಶಲ್ಯನನ್ನು ಬಿಗಿದು, ಎತ್ತಿ, ಮೇಲಕ್ಕೆ ಹಾರಿಸಿ, ಭೂಮಿಯಲ್ಲಿ ಕೆಡಹಿದನು. ಆಗ ಅಲ್ಲಿ ಇರುವ ಬ್ರಾಹ್ಮಣರು ಅಟ್ಟಹಾಸಗಳನ್ನು ಮಾಡಿದರು. ಅರ್ಜುನನಿಂದ ಕರ್ನನೂ, ಭೀಮನಿಂದ ಶಲ್ಯನೂ ಪರಾಜಿತರಾಗಿ, ಪಲಾಯನವಾಗಲೂ; ಸಕಲವಾದ ಅರಸುಗಳು ಅದನ್ನು ನೋಡಿ,—ಈ ಬ್ರಾಹ್ಮಣ ಕುಮಾರಕರು ಇಬ್ಬರು ಯಾರೋ? ಎಲ್ಲಿ ಹುಟ್ಟಿದರೋ? ತಿಳಿಯ ಬೇಕು. ಲೋಕದಲ್ಲಿ ಪರಶುರಾಮನೂ, ದ್ರೋಣಾಚಾರ್ಯನೂ, ಕೃಪಾಚಾರ್ಯನೂ, ದೇವಕಿಯ ಮಗನಾದ ಕೃಷ್ಣನೂ, ಕುಂತಿಯ ಮಗನಾದ ಅರ್ಜುನನೂ ಹೊರತಾಗಿ, ಕರ್ನನ ಮುಂದೆ ನಿಲ್ಲುವಂಥಾವರು ಯಾರಾದರೂ ಉಂಟೇ? ಮದ್ರದೇಶಾಧಿಪತಿಯಾದ ಶಲ್ಯನನ್ನು ಬಲರಾಮ ಭೀಮಸೇನರು ಹೊರತಾಗಿ, ಮತ್ತೊಬ್ಬನು ಜಯಿಸುವದಕ್ಕೆ ಸಮರ್ಥನೇ? ಅದರಿಂದ ಇವರ ಸ್ವರೂಪವನ್ನು ತಿಳಿದ ಮೇಲೆ ಯುದ್ಧಾ ಮಾಡುವಾ ಎಂದು, ಒಬ್ಬರೊಬ್ಬರು ಮಾತಾಡಿ ಕೊಳ್ಳುತ್ತಿರುವ ಸಮಯದಲ್ಲಿ, ವಾಸುದೇವನು—ಧರ್ಮ ಮಾರ್ಗವನ್ನು ತಪ್ಪದೆ, ಕನ್ಯಾ ಪರಿಗ್ರಹವನ್ನು ಮಾಡಿದ ಇವರ ಕೂಡೆ ನಿಮಗೆ ಕಲಹವು ಯಾಕೆಂದು, ನಿಲ್ಲಿಸಿ ಬಿಡಲು; ಅವರು ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು.

ನೋಡುವದಕ್ಕೆ ಬಂದಿದ್ದ ಜನರು—ಸ್ವಯಂವರದ ರಂಗ ಸ್ಥಳದಲ್ಲಿ ಎಲ್ಲಿ ನೋಡಿದರೂ, ಬ್ರಾಹ್ಮಣರೇ ಹೆಚ್ಚಿದರು ಎಂತಲೂ, ಪಾಂಚಾಲರಾಯನ ಮಗಳು ಬ್ರಾಹ್ಮಣ ಕುಮಾರಕನನ್ನೇ ವರಿಸಿದಳು ಎಂತಲೂ, ನಾನಾ ಪ್ರಕಾರವಾಗಿ

ನುಡಿಯುತ್ತಾ, ತಮ್ಮ ತಮ್ಮ ಮನೆಗಳಿಗೆ ಹೋದರು. ಆ ಬಳಿಕ ಭೀಮಾರ್ಜುನರು ಕೃಷ್ಣಾಜಿನೋತ್ತರೀಯಗಳೊಡನೆ ಬ್ರಾಹ್ಮಣ ಶ್ರೇಷ್ಠರು ತಮ್ಮನ್ನು ಸುತ್ತಿಕೊಂಡು ಬರಲು; ಜನ ಸಮೂಹದದೆಶೆಯಿಂದ ಹೊರಟು, ಘಾಯ ಪಡದ ಶರೀರವುಳ್ಳವರಾಗಿ, ಆ ದ್ರುಪದ ರಾಯನ ಮಗಳನ್ನು ಕರ ಕೊಂಡು, ಕುಂಬಾರನ ಮನೆಗೆ ಬರುತ್ತಿದ್ದರು. ಅಲ್ಲಿ ಕುಂತೀ ದೇವಿಯು ಭಿಕ್ಷಾ ಸಮಯಕ್ಕೆ ತನ್ನ ಮಕ್ಕಳು ಬಾರದೆ ಇರುವದರಿಂದ, ವೈರಾನುಬಂಧದಿಂದ ಕೂಡಿರುವ ಧೃತರಾಷ್ಟ್ರನ ಮಕ್ಕಳದೆಶೆಯಿಂದ ಪ್ರೇರಿತರಾದ, ಮಾಯಾ ಬಲ ಸಮೇತರಾದ ರಾಕ್ಷಸರದೆಶೆಯಿಂದ ಏನಾಪತ್ತನ್ನು ಹೊಂದಿದರೋ? ಎಂದು ಪುತ್ರವಾತ್ಸಲ್ಯದಿಂದ ಎಣಿಸುತ್ತಲಿರುವ ಸಮಯದಲ್ಲಿ, ಮೂರನೇ ಝಾವದಲ್ಲಿ ಮೇಘ ಮಂಡಲದಿಂದ ಸುತ್ತಲ್ಪಟ್ಟ ಸೂರ್ಯನೋಪಾದಿಯಲ್ಲಿ ಬ್ರಾಹ್ಮಣರಿಂದ ಕೂಡಿದವನಾಗಿ, ಅರ್ಜುನನು ಭೀಮನೊಡನೆ ಕೂಡಿ, ಭಾರ್ಗವನೆಂಬ ಕುಂಬಾರನ ಮನೆಗೆ ಬಂದು,—ನಮ್ಮ ಸಾಮರ್ಥ್ಯದಿಂದ ಇದೊಂದು ಭಿಕ್ಷವನ್ನು ತಂದೆವು ಎಂದು ತಿಳಿಸಲು; ಆ ಕುಂತಿಯು ದ್ರೌಪದಿ ಸಹಿತವಾದ ಆ ಕುಮಾರಕರನ್ನು ನೋಡುವದಕ್ಕಿಂತ ಮುಂಚೆ—ಎಲೈ, ಮಕ್ಕಳಿರಾ, ನೀವಷ್ಟು ಅನುಭವಿಸಿ ಎಂದು, ಪ್ರಮಾದ ವಶದಿಂದ ನುಡಿದು, ಆ ಬಳಿಕ ಕನ್ಯಾ ರತ್ನವನ್ನೂ ಕುಮಾರಕರನ್ನೂ ನೋಡಿ—ಕಟಕಟಾ! ಅನುಚಿತವಾಗಿ ನುಡಿದೆನು! ಎಂದು, ಧರ್ಮ ಭಂಗಕ್ಕೆ ಭಯ ಪಡುತ್ತಾ, ನಾಚಿಕೆಯಿಂದ ತಲೆಯನ್ನು ಬೊಗ್ಗಿಸಿ ಕೊಂಡಿರುವ ದ್ರೌಪದಿಯ ಹಸ್ತವನ್ನು ಹಿಡಿದು, ಯುಧಿಷ್ಠಿರನ ಸಮೀಪಕ್ಕೆ ಕರ ಕೊಂಡು ಹೋಗಿ—ಈ ದ್ರುಪದ ರಾಯನ ಮಗಳನ್ನು ಕರ ತಂದು, ನಿನ್ನ ಒಡ ಹುಟ್ಟಿದ ಭೀಮಾರ್ಜುನರು—ಭಿಕ್ಷೆಯನ್ನು ತಂದೆವು ಎಂದು ನನ್ನ ಕೂಡೆ ಹೇಳಿದರು. ನಾನು—ನೀವಷ್ಟು ಅನುಭವಿಸಿ ಎಂದು, ಪ್ರಮಾದ ವಶದಿಂದ ನುಡಿದೆನು. ಈ ರಾಯನ ಮಗಳಿಗೆ ಅಧರ್ಮ ಬಾರದೆ ಇರುವ ಹಾಗೂ, ನನ್ನ ವಾಕ್ಯವು ಸಟೆಯಾಗದೆ ಇರುವ ಹಾಗೂ ಉಪಾಯವನ್ನು ತಿಳಿಸೆನಲು; ಧರ್ಮರಾಯನು ಮುಹೂರ್ತ ಮಾತ್ರವು ಯೋಚಿಸಿ, ಕುಂತೀ ದೇವಿಗೆ ಸಮಾಧಾನವನ್ನು ಮಾಡಿ, ಅರ್ಜುನನನ್ನು ನೋಡಿ—ನೀನು ಭುಜ ಬಲದಿಂದ ಈ ರಾಜ ಕನ್ನಿಕೆಯನ್ನು ಗೆದ್ದು ತಂದೆ; ಆದ್ದರಿಂದ ಯಜ್ಞೇಶ್ವರನ ಸಮೀಪದಲ್ಲಿ ಶಾಸ್ತ್ರೋಕ್ತ ಪ್ರಕಾರವಾಗಿ ಇವಳನ್ನು ಮದುವೆಯಾಗೆನಲು; ಅರ್ಜುನನು—ಎಲೈ, ಮಹಾನುಭಾವನೇ, ನನ್ನನ್ನು ಅಪ್ರಯೋಜಕನಾಗಿ ಮಾಡ ಬೇಡ. ಈ ಕಾರ್ಯವು ಯಾರಿಗೂ ಸಮ್ಮತವಾಗಲಾರದು. ಮೊದಲು ನೀನು, ಆ ಬಳಿಕ ಭೀಮನು, ಆ ಮೇಲೆ

ನಾನು, ಅನಂತದಲ್ಲಿ ನಕುಲ ಸಹದೇವರು, ಮದುವೆಯಾಗುವದು ಯುಕ್ತವು. ಭೀಮನೂ ನಾನೂ ನಕುಲ ಸಹದೇವರೂ ಪಾಂಚಾಲ ರಾಯನ ಮಗಳೂ, ನಾವಷ್ಟು ನಿನ್ನಾಧೀನವಾದ್ದರಿಂದ, ಧರ್ಮ ಯುಕ್ತವಾಗಿ, ಕೀರ್ತಿಕರವಾಗಿ, ದ್ರುಪದ ರಾಯನಿಗೆ ಸಮ್ಮತವಾದ ಕಾರ್ಯವನ್ನು ಕಟ್ಟು ಮಾಡ ಬೇಕು ಎಂದು ನುಡಿಯಲು; ಯುಧಿಷ್ಠಿರನು ತನ್ನ ಮನಸ್ಸಿನಲ್ಲಿ—ನಾನು ಮೊದಲಾದ ಪಂಚ ಪಾಂಡವರಲ್ಲಿಯೂ ಪಾಂಚಾಲ ರಾಯನಿಗೆ ಅನುರಾಗವು ಹುಟ್ಟಿರುವದರಿಂದಲೂ, ಸಕಲ ಲೋಕಾಶ್ಚರ್ಯಕರವಾಗಿ ಬ್ರಹ್ಮ ದೇವನಿಂದ ನಿರ್ಮಿತವಾಗಿರುವ ಈ ಪಾಂಚಾಲ ರಾಯನ ಮಗಳ ರೂಪಾತಿಶಯಕ್ಕೆ ತಮ್ಮಷ್ಟು ಮಂದಿಯ ಮನಸ್ಸುಗಳು ಕರಗಿರುವದರಿಂದಲೂ, ವ್ಯಾಸನ ವಚನವನ್ನು ಸ್ಮರಿಸಿ, ತಮ್ಮಂದಿರಿಗೆ ಪರಸ್ಪರ ದ್ವೇಷಗಳು ಹುಟ್ಟ ಬಾರದೆಂದು ಎಣಿಸಿ, ಭೀಮಸೇನಾದಿಗಳನ್ನು ನೋಡಿ—ನಮ್ಮ ಐದು ಮಂದಿಗೂ ಈ ದ್ರೌಪದಿಯು ಪತ್ನಿಯಾಗಲುಳ್ಳವಳು, ಅಂದನು.

ಆ ವಾಕ್ಯವನ್ನು ಕೇಳಿ, ತಮ್ಮಂದಿರಷ್ಟು ಆ ಅರ್ಥವನ್ನು ತಮ್ಮ ಮನಸ್ಸಿನಲ್ಲಿ ಆಲೋಚನೆಯನ್ನು ಮಾಡುತ್ತಿರುವಾಗ, ಯದು ಶ್ರೇಷ್ಠನಾದ ವಾಸುದೇವನು, ಬಲರಾಮನು ಸಹಿತವಾಗಿ, ಆ ಕುಂಬಾರನ ಮನೆಗೆ ಬಂದು, ಅಜಾನು ಬಾಹುವಾಗಿ ತಮ್ಮಂದಿರೊಡನೆ ಕೂಡಿರುವ ಧರ್ಮರಾಯನ ಸಮೀಪಕ್ಕೆ ಹೋಗಿ—ನಾನು ವಾಸುದೇವನು ಎಂದು ತಿಳಿಸಿ, ಆತನ ಪಾದಗಳಿಗೆ ನಮಸ್ಕಾರವನ್ನು ಮಾಡಿದನು. ಆ ಬಳಿಕ ಬಲರಾಮನು ಹಾಗೇ ನಮಸ್ಕರಿಸಿದನು. ತರುವಾಯ ಸೋದರತ್ತೆಯಾದ ಕುಂತೀ ದೇವಿಯ ಪಾದಗಳಿಗೆ ರಾಮ ಕೃಷ್ಣರಿಬ್ಬರು ನಮಸ್ಕರಿಸಿದರು. ಧರ್ಮರಾಯನು ಕೃಷ್ಣಸ್ವಾಮಿಯನ್ನು ನೋಡಿ, ಕುಶಲ ಪ್ರಶ್ನೆಯನ್ನು ಮಾಡಿ—ಎಲೈ, ಕೃಷ್ಣಸ್ವಾಮಿಯೇ, ನಾವು ಹೀಗೆ ಗೋಪ್ಯವಾಗಿರುವಾಗ, ನಿನಗೆ ಹ್ಯಾಗೆ ತಿಳಿಯಿತು? ಎನಲು; ಕೃಷ್ಣಸ್ವಾಮಿಯು ನಸುನಗುತ್ತಾ—ಯಜ್ಞೇಶ್ವರನು ಎಷ್ಟು ಮರೆಯಾಗಿದ್ದರೂ, ತೇಜೋ ವಿಶೇಷದಿಂದ ಯಾತಕ್ಕೆ ಕಾಣಲ್ಪಡದೆ ಹೋಗುವನು? ಆ ಲಕ್ಷ್ಯವನ್ನು ಭೇದಿಸುವದಕ್ಕೆ ನಿಮಗೆ ಹೊರತಾಗಿ ಮಿಕ್ಕಾದ ಜನರಿಗೆ ಶಕ್ಯವೇ? ದೈವ ವಶದಿಂದ ಶತ್ರು ಸಂಹಾರಕರಾದ ನೀವು ಅರಗಿನ ಮನೆಯ ದಾಹದ್ದೆಶೆಯಿಂದ ತಪ್ಪಿಸಿ ಕೊಂಡು ಬಂದಿರಿ. ಪುತ್ರಾಮಾತ್ಯ ಸಹಿತವಾಗಿ ಧೃತರಾಷ್ಟ್ರನು ತನ್ನ ಮನೋರಥವನ್ನು ಪಡೆಯಲಾರದೆ ಹೋದನು. ನಮ್ಮ ಮನಸ್ಸಿನಲ್ಲಿ ಎಣಿಸಿದ ಪ್ರಕಾರ ನಿಮಗೆ ಶುಭಗಳು ಆಗುತ್ತವೆ. ಪ್ರವೃದ್ಧನಾದ ಯಜ್ಞೇಶ್ವರನೋಪಾದಿಯಲ್ಲಿ ವೃದ್ಧಿ

ಯನ್ನು ಹೊಂದುತ್ತಿದ್ದೀರಿ. ಇಲ್ಲಿ ಇರುವ ಅರಸುಗಳು ನಿಮ್ಮನ್ನು ಅರಿಯದೆ ಇರುವ ರೀತಿಗೆ ನಮ್ಮ ಪಾಳ್ಯಕ್ಕೆ ಹೋಗಿ ಬರುತ್ತೇವೆ ಎಂದು, ಅವರ ಅಪ್ಪಣೆಯನ್ನು ತೆಕ್ಕೊಂಡು, ತಮ್ಮ ಪಾಳ್ಯಕ್ಕೆ ಹೊರಟು ಹೋದರು.

ಪಾಂಚಾಲ ರಾಯನ ಮಗನಾದ ದೃಷ್ಟದ್ಯುಮ್ನನು, ಇವರ ನಿಶ್ಚಯವನ್ನು ತಿಳಿಯ ಬೇಕೆಂದು, ಇವರಿಳಿದಿರುವ ಕುಂಬಾರನ ಮನೆಯ ಸುತ್ತಲು ಬೇಹಿನವರನ್ನು, ಪಾಂಡವರು ಅರಿಯದೆ ಇರುವ ಹಾಗೆ, ಇಟ್ಟು, ತಾನು ಸಮೀಪದಲ್ಲಿ ಇದ್ದನು. ಆ ವೇಳೆಯಲ್ಲಿ ಭೀಮಸೇನ ಮೊದಲಾದ ನಾಲ್ವರು ಭಿಕ್ಷಾನ್ನವನ್ನು ಬೇಡಿ, ತಂದು, ಯುಧಿಷ್ಠಿರನ ಮುಂದೆ ಇರಿಸಿದರು. ಆಗ ಕುಂತೀ ದೇವಿಯು ದ್ರೌಪದಿಯನ್ನು ನೋಡಿ—ಅದರಲ್ಲಿ ಮೊದಲು ಭಾಗವನ್ನು ವೈಶ್ವದೇವ ಬಲಿಹರಣಕ್ಕೆ ಕೊಡು. ಆ ಮೇಲೆ ಒಂದು ಭಾಗವನ್ನು ಬ್ರಾಹ್ಮಣನಿಗೆ ಕೊಡು. ಮತ್ತೊಂದು ಭಾಗವನ್ನು ಭಿಕ್ಷಾರ್ಥವಾಗಿ ಬಂದವರಿಗೆ ಕೊಡು. ಮಿಕ್ಕ ಅನ್ನವನ್ನು ಎರಡು ಭಾಗವ ಮಾಡಿ, ಅದರಲ್ಲಿ ಒಂದು ಭಾಗವನ್ನು ಆರು ಭಾಗಗಳಾಗಿ ಮಾಡಿ, ನಮಗಿಬ್ಬರಿಗೂ ಎರಡು ಭಾಗಗಳನ್ನು ಇರಿಸು. ನಾಲ್ಕು ಭಾಗಗಳನ್ನು ನಾಲ್ಕು ಮಂದಿಗೂ ಕೊಡು. ಮಿಕ್ಕ ಅರ್ಧ ಭಾಗವನ್ನು ಭೀಮನಿಗೆ ಕೊಡು. ಯಾಕೆಂದರೆ ಈತನು ವೃಷಭ ಸಿಂಹ ಗಂಭೀರ ಗಮನನು, ನವಯವ್ವನ ವಿಜೃಂಭಿತನು, ಮಹಾ ವೀರನು, ಸ್ಥೂಲ ಶರೀರನು, ಅಧಿಕ ಭೋಜನ ಪ್ರಿಯನಾಗಿರುವನು ಎಂದು ತಿಳಿಸಲು; ಆ ರಾಜ ಪುತ್ರಿಯು ಸ್ವಲ್ಪವಾದರೂ ತನ್ನ ಮನಸ್ಸಿನಲ್ಲಿ ಭಯ ಪಡದೆ, ತನ್ನ ಅತ್ತೆ ಹೇಳಿದ ಪ್ರಕಾರ ಅನ್ನವನ್ನು ಪಾಲು ಮಾಡಿ ಕೊಡಲು; ಅವರೆಲ್ಲಾ ಸಮುಚಿತ ಪ್ರಕಾರದಿಂದ ಭೋಜನಗಳನ್ನು ಮಾಡಿದರು. ಆ ಬಳಿಕ ಸಹದೇವನು ಅವರಿಗೆ ಹುಲ್ಲಿನಿಂದ ಹಾಸಿಕೆಯನ್ನು ಮಾಡಿ, ಹಾಸಲು; ಅವರು ಅದರ ಮೇಲೆ ಕೃಷ್ಣಾಜಿನಗಳನ್ನು ಹಾಸಿಕೊಂಡು, ದಕ್ಷಿಣ ಶಿರಸ್ಸಾಗಿ ಮಲಗಿದ್ದರು. ಕುಂತೀ ದೇವಿಯು ಅವರಿಗೆ ಮೂಡಣ ಭಾಗದಲ್ಲಿ ಮಲಗಿ ಇದ್ದಳು. ದ್ರೌಪದಿಯು ಅವರ ಕಾಲ ದೆಸೆಯಲ್ಲಿ ವಿಕಾರ ರಹಿತಳಾಗಿ ದರ್ಭೆಯನ್ನು ಹಾಸಿ ಕೊಂಡು, ಮಲಗಿ—ಇವರು ಭಿಕ್ಷಾ ಬೇಡುವಂಥಾ ಬ್ರಾಹ್ಮಣರು ಎಂದು, ಸ್ವಲ್ಪವಾದರೂ ತನ್ನ ಮನಸ್ಸಿನಲ್ಲಿ ವಿಕಲ್ಪವಿಲ್ಲದೆ ಇದ್ದಳು. ಮಹಾ ಶೂರರಾದ ಇವರು ದಿವ್ಯಾಸ್ತ್ರಗಳ ತೆರವನ್ನೂ, ಆನೆಗಳ ಪ್ರಕಾರವನ್ನೂ, ರಥಗಳ ಚಂದವನ್ನೂ, ಖಡ್ಗಗಳ ಸೊಬಗನ್ನೂ, ಗದಾವಿಶೇಷಗಳ ಸೊಗಸನ್ನೂ, ಕೊಡಲಿಗಳ ಸ್ಥಿತಿಯನ್ನೂ ನಾನಾ ಪ್ರಕಾರವಾಗಿ ಒಬ್ಬರಿಗೊಬ್ಬರು ಹೇಳಿ ಕೊಳ್ಳುತ್ತ, ಹೊತ್ತು ಕಳೆಯುತ್ತಿರುವ

ಸಮಯದಲ್ಲಿ, ಹೊಂಚು ಕೇಳುತ್ತಲಿದ್ದ ದೃಷ್ಟದ್ಯುಮ್ನನು, ಜೇವಿನವರು ಸಹಿತ, ನೋಡಿ, ಕೇಳಿ, ಅದನ್ನೆಲ್ಲಾ ತಿಳಿಸುವದಕ್ಕೆ ತಂದೆಯ ಸಮೀಪಕ್ಕೆ ಬಂದು ಶೇರಿದನು.

ಪಾಂಚಾಲ ರಾಯನು ಮುಖದಲ್ಲಿ ದೈನ್ಯವನ್ನು ತೋರಿಸುತ್ತಾ, ಪಾಂಡವರು ಎಂದು ತಿಳಿಯದೆ ಇರುವದರಿಂದ, ತನ್ನ ಮಗನನ್ನು ನೋಡಿ—ಎನೈಯ್ಯಾ, ಮಗನೇ, ನಮ್ಮ ದ್ರೌಪದೀ ದೇವಿಯು ಪುಷ್ಪ ಮಾಲಿಕೆ ಸ್ಮಶಾನದಲ್ಲಿ ಬಿದ್ದ ಹಾಗೆ ಹೀನ ಜಾತಿಗಳಲ್ಲಿ ಒಬ್ಬರನ್ನಾದರೂ ವರಿಸದೆ ಇರುವಂಥಾವಳು. ಈಗ ಎಲ್ಲಿ ಇದ್ದಾಳೆ? ಆ ಕನ್ಯಾ ರತ್ನವನ್ನು ಅರ್ಜುನನ ವಶಕ್ಕೆ ಒಪ್ಪಿಸಿ, ನಾನು ಸುಖವಾಗಿ ನಿದ್ದೆ ಗೈದೇನೇ? ನಾನು ಮಾಡಿದ ಯಂತ್ರ ಲಕ್ಷ್ಯವನ್ನು ಭೇದಿಸಿ, ಆ ದ್ರೌಪದಿಯನ್ನು ಕರೆದು ಕೊಂಡು ಹೋದಂಥಾವನನ್ನು ಯಾರೆಂದು ತಿಳಿದೆ? ವಿಚಿತ್ರವೀರ್ಯನ ಮೊಮ್ಮಕ್ಕಳಾದ ಪಾಂಡವರು ದೈವ ಸಂಕಲ್ಪದಿಂದ ಬದುಕಿ ಇದ್ದಾರೆಯೋ? ನಾನು ಮಾಡಿದ ಯಜ್ಞದ ಅತಿಶಯದಿಂದಲೂ, ದ್ರೌಪದಿಯ ಭಾಗ್ಯ ವಿಶೇಷದಿಂದಲೂ, ಈ ಲಕ್ಷ್ಯವನ್ನು ಭೇದಿಸಿದಂಥಾವನು ಅರ್ಜುನನು ಎಂದು ತಿಳಿಯ ಬಹುದೇ? ಎನುತ್ತಾ, ಕೇಳಿದಂಥಾ ದೃಪದ ರಾಯನನ್ನು ನೋಡಿ, ದೃಷ್ಟದ್ಯುಮ್ನನು ಸಂತೋಷ ಪಟ್ಟು—ತಾನು ಕಂಡು ಕೇಳಿದ್ದನ್ನೆಲ್ಲಾ ತಂದೆಗೆ ತಿಳಿಸಿ—ಅವರು ಪಾಂಡವರೇ ಸರಿ ಎಂದು, ನಿಶ್ಚೈಸಿದ್ದೇನೆ, ಅಂದನು.

ಈ ಮಾತನ್ನು ದೃಪದ ರಾಯನು ಕೇಳಿ, ಸಂತೋಷ ಪಟ್ಟು, ತನ್ನ ಪುರೋಹಿತನನ್ನು ಕರೆದು,—ನೀನು ಅವರ ಸಮೀಪಕ್ಕೆ ಹೋಗಿ—ನೀವ್ಯಾರು? ಪಾಂಡು ಕುಮಾರರೇ? ಎಂದು ಕೇಳಿ ಬಾ, ಎನಲು; ಆತನು ಅವರ ಬಳಿಗೆ ಹೋಗಿ, ಅವರನ್ನು ನೋಡಿ—ಪಾಂಚಾಲ ರಾಯನಾದ ದೃಪದನು ನಿಮ್ಮ ಸ್ವರೂಪವನ್ನು ತಿಳಿಯ ಬೇಕೆಂದು ಇದ್ದಾನೆ. ಈ ಲಕ್ಷ್ಯವನ್ನು ಕೆಡಹಿದಂಥಾವನನ್ನು ನೋಡಿ, ಆತನ ಸಂತೋಷವು ಅಷ್ಟಿಷ್ಟಲ್ಲ. ನೀವು ಯಾವ ಕಾರ್ಯಕ್ಕೂ ಭಯ ಪಡ ಬೇಡಿ. ನಿಮ್ಮ ಜಾತಿ ಕುಲಾಚಾರಗಳನ್ನು ವಿಶದವಾಗಿ ಹೇಳ ಬೇಕು. ನಿಮಗೆ ವಿರೋಧಿಗಳಾದವರ ಶಿರಸ್ಸಿನಲ್ಲಿ ಪಾದವನ್ನು ಇರಿಸಿ, ಮಗನ ಸಹಿತನಾದ ನಮ್ಮರಸಿಗೆ ಸಂತೋಷವನ್ನು ಕಲ್ಪಿಸಿ, ಪಾಂಡು ರಾಯನಿಗೆ ಪಾಂಚಾಲ ರಾಯನು ಪರಮ ಮಿತ್ರನಾದ್ದರಿಂದ, ತನ್ನ ಮಗಳು ದ್ರೌಪದಿಯು ಆತನಿಗೆ ಸೊಸೆಯಾಗ ಬೇಕೆಂತಲೂ, ಆಜಾನು ಬಾಹುವಾದ ಅರ್ಜುನನು ತನಗೆ ಅಳಿಯನಾಗ ಬೇಕೆಂತಲೂ ಅಭಿಲಾಷೆಯು ಅಧಿಕವಾಗಿ ಇದೆ ಎನಲು; ಯುಧಿಷ್ಠಿರನು ಆ ವಾಕ್ಯವನ್ನು ಕೇಳಿ, ಸಮೀಪದಲ್ಲಿರುವ ಭೀಮನನ್ನು ನೋಡಿ—ಈ ದೃಪದ

ರಾಜ ಪುರೋಹಿತನನ್ನು ಉಚಿತ ಪ್ರಕಾರವಾಗಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸು, ಎನಲು; ಆತನು ಹಾಗೆ ಮಾಡಿದನು. ಸುಖಾಸನದಲ್ಲಿ ಕುಳಿತಿರುವ ಆ ಬ್ರಾಹ್ಮಣನನ್ನು ನೋಡಿ, ಯುಧಿಷ್ಠಿರನು,—ಪಾಂಚಾಲ ರಾಯನು ತನ್ನ ಮಗಳಾದ ದ್ರೌಪದಿಗೆ ಸ್ವಧರ್ಮೋಚಿತವಾದ ಮಾರ್ಗದಿಂದ ಪರಾಕ್ರಮವೇ ಓಲಿಯಾಗುವ ಹಾಗೆ ಕಲ್ಪಿಸಲು; ಆತನು ಮಾಡಿದ ಪ್ರತಿಜ್ಞೆಯನ್ನು ನೆರವೇರಿಸಿ, ಈ ಕುಮಾರಕನು ಕನ್ಯಾ ರತ್ನವನ್ನು ಕೈಕೊಂಡನು. ನೀವು ಸಂಕೇತಾ ಮಾಡುವಾಗ, ಬ್ರಾಹ್ಮಣಾದಿ ವರ್ಣವೂ, ಜೀವನೋಪಾಯವೂ, ವಿದ್ಯಾ ವಿಶೇಷವೂ, ಕುಲವೂ ಗೋತ್ರವೂ ಹೀಗಿರ ಬೇಕೆಂದು ನಿಶ್ಚಯವಿಲ್ಲವಲ್ಲ! ಧನುಸ್ಸಿನಲ್ಲಿ ಹೆದೆಯನ್ನು ಏರಿಸಿ, ಲಕ್ಷ್ಯವನ್ನು ಕೆಡಹಿದಂಥಾವನು ಈ ಕನ್ನಿಕೆಗೆ ವರನಾಗಲುಳ್ಳವನು ಎಂದು ಹೇಳಿದವರಾದ್ದರಿಂದ, ಈತನು ಹಾಗೆ ಮಾಡಿ, ರಾಜ ಪುತ್ರಿಯನ್ನು ಕೈ ಕೊಂಡನು. ಇನ್ನು ಆದ ಕಾರ್ಯಕ್ಕೆ ನಿಮ್ಮ ರಾಯನು ಪಶ್ಚಾತ್ತಾಪಪಟ್ಟು, ಪ್ರಯೋಜನವೇನು? ಆದರೂ ಆತನ ಮನೋರಥವು ಸಫಲವಾದೀತು. ಈ ರಾಜ ಪುತ್ರಿಯು ಉಚಿತವಾದ ವರನನ್ನು ಹೊಂದಿದ್ದಾಳೆ. ಈ ಧನುಸ್ಸಿನಲ್ಲಿ ಹೆದೆಯನ್ನು ಏರಿಸಿ, ಲಕ್ಷ್ಯವನ್ನು ಭೇದಿಸುವದಕ್ಕೆ ಸಾಧಾರಣ ಮನುಷ್ಯರಿಗೆ ಶಕ್ಯವಲ್ಲದೆ ಇದ್ದದರಿಂದ, ನಿಮ್ಮ ರಾಯನು ಈ ಕನ್ಯಾ ವಿಷಯವಾಗಿ ಚಿಂತಿಸುವದಕ್ಕೆ ಕಾರಣವಿಲ್ಲವೆಂದು ಹೇಳಿ ಕಳುಹಿಸಲು; ಪುರೋಹಿತನು ದ್ರುಪದ ರಾಯನ ಬಳಿಗೆ ಬಂದು, ಧರ್ಮರಾಯನು ಹೇಳಿದ ಮಾತನ್ನು ಹೇಳಲಾಗಿ; ಆ ಮಾತಿನ ಭಾವದಿಂದ—ಇವರು ಪಾಂಡವರೇ ಸರಿ ಎಂದು ನಿಶ್ಚೈಸಿ ಕೊಂಡು, ಇವರನ್ನು ಪ್ರಸ್ತದ ಭೋಜನಕ್ಕೆ ಕರಿಸಿ, ಭೋಜನಾದಿಗಳಿಂದ ಸತ್ಕರಿಸಿ, ಧಾರಾಮಂಟಪವನ್ನು ಮಾಡಿಸಿ, ಧರ್ಮರಾಯನನ್ನು ನೋಡಿ—ಈ ಹೊತ್ತು ಶುಭ ದಿವಸವಾದ್ದರಿಂದ ಮಹಾನುಭಾವನಾದ ಧನಂಜಯನು ಈ ಕನ್ನಿಕೆಯನ್ನು ಪಾಣಿಗ್ರಹಣ ಮಾಡುವದಕ್ಕೆ ಅನುಗ್ರಹ ಮಾಡೆನಲು; ಧರ್ಮರಾಯನು—ನಮ್ಮ ತಾಯಿಯ ಅಪ್ಪಣೆಯ ಪ್ರಕಾರ ಈ ಕನ್ಯಾ ರತ್ನವನ್ನು ನಾವು ಐದು ಜನವು ಅಗ್ನಿ ಸಾಕ್ಷಿಕವಾಗಿ ಪರಿಗ್ರಹಿಸ ಬೇಕು, ಅಂದನು.

ಆಗ ದ್ರುಪದ ರಾಯನು—ಒಬ್ಬ ಕನ್ನಿಕೆಯನ್ನು ಐದು ಜನ ಮದುವೆಯಾಗುವಂಥಾದ್ದು ಹ್ಯಾಗೆ? ಎಂದು ಯೋಚಿಸುತ್ತಿರುವಲ್ಲಿ, ವ್ಯಾಸ ಮುನೀಶ್ವರನು ದ್ರುಪದ ರಾಯನಲ್ಲಿಗೆ ಬಂದು, ಆತನಿಂದ ಪೂಜಿತನಾಗಿ, ಅವನನ್ನು ಕುರಿತು—ಎಲೈ, ಅರಸೇ, ನಿನ್ನ ಮನಸ್ಸಿನಲ್ಲಿರುವ ಸಂಶಯವನ್ನು ಬಿಡು! ಗೌತಮ ವಂಶದಲ್ಲಿ ಹುಟ್ಟಿದ ಜಟಿಲನೆಂಬ ಮಹಾತ್ಮನ ಮಗಳು ತಪೋಧನರಾಗಿ, ಆತ್ಮ ತತ್ವ

ಜ್ಞರಾದ ಏಳು ಮಂದಿ ಮುನಿ ಕುಮಾರಕರನ್ನು ವರಿಸಿದಳು. ಅದಲ್ಲದೆ ಪ್ರಚೇತಸರೆಂಬ ಹನ್ನೆರಡು ಮಂದಿ ಅಣ್ಣ ತಮ್ಮಂದಿರು ಒಬ್ಬ ಕನ್ನಿಕೆಯನ್ನು ವರಿಸಿದರು. ಇದಲ್ಲದೆ ಇವಳ ತಾಯಿಯಾದ ನಿನ್ನ ಪಟ್ಟ ಮಹಿಷಿಯು, ತನ್ನ ಮಗಳಿಗೆ ಐದು ಮಂದಿ ಗಂಡರಾಗ ಬೇಕೆಂದು ಪೂರ್ವ ಜನ್ಮದಲ್ಲಿ ಬಯಸಿದ ಪ್ರಕಾರ, ಯಾಜೋಪಯಾಜರೆಂಬವರು ಅದೇ ರೀತಿಯಲ್ಲಿ ಅನುಗ್ರಹಿಸಿರುವ ಕಾರಣ, ಈ ಐದು ಮಂದಿಯು ಗಂಡರಾಗುವದು ಧರ್ಮವು ಎಂದು, ನೀಲಾಯನಿಯ ಕಥೆಯನ್ನು ಹೇಳಲು; ದ್ರುಪದ ರಾಯನು ಕೃಷ್ಣದ್ವೈಪಾಯನನನ್ನು ನೋಡಿ—ನಿಮ್ಮ ಮಾತುಗಳನ್ನು ಕೇಳಿದ ಬಳಿಕ, ನನ್ನ ಮನಸ್ಸಿನಲ್ಲಿರುವ ಸಂಶಯಗಳಷ್ಟು ಹೋಯಿತು. ದೈವ ಸಂಕಲ್ಪವು ಯಾರಿಗೂ ತಪ್ಪಿಸುವದಕ್ಕೆ ಶಕ್ಯವಲ್ಲ. ಈ ಅರ್ಥಕ್ಕೆ ಸಮ್ಮತಿಸಿದೆನು, ಅಂದನು.

ಆ ಬಳಿಕ ವ್ಯಾಸನು ಯುಧಿಷ್ಠಿರನನ್ನು ನೋಡಿ, ಚಂದ್ರನು ರೋಹಣಿ ಸಹಿತನಾಗಿ ಇರುವದರಿಂದ, ಈ ಶುಭ ದಿವಸದಲ್ಲಿ ವಿಹಿತ ಪ್ರಕಾರದಿಂದ ನೀವು ಐದು ಮಂದಿಯು ಕ್ರಮವಾಗಿ ಪಾಣಿಗ್ರಹಣವನ್ನು ಮಾಡಿ ಎಂದು, ಕಟ್ಟು ಮಾಡಿದನು. ಆ ಬಳಿಕ ಯಜ್ಞಸೇನನು ಮಗನಾದ ದೃಷ್ಟದ್ಯುಮ್ನನೊಡನೆ ಕೂಡಿ, ಮದುವೆಗೆ ತಕ್ಕ ಮುಸ್ತೈದೆಗಳನ್ನು ಜೊತೆಗೊಳಿಸಿ, ದ್ರೌಪದೀ ದೇವಿಯನ್ನು ಮಂಗಳ ಮಜ್ಜನಾನಂತರದಲ್ಲಿ ಬಹು ವಿಧ ರತ್ನಾಭರಣಗಳಿಂದ ಅಲಂಕರಿಸಿದನು. ಆತನ ನಂಟರು, ಇಷ್ಟರು, ಮಿತ್ರಾಮಾತ್ಯರುಗಳು, ಆ ಪಟ್ಣದಲ್ಲಿರುವ ಪ್ರಜೆಗಳು, ವೇದ ವೇದಾಂಗ ಪಾರಂಗತರಾದ ಬ್ರಾಹ್ಮಣರುಗಳು, ನಾನಾ ದೇಶಗಳ ದೆಶೆಯಿಂದ ಬಂದ ಯಾಚಕರುಗಳು, ಆ ವಿವಾಹ ಮಂಟಪದಲ್ಲಿ ನೆರೆದು, ಕುಳಿತಿದ್ದರು. ಆ ಬಳಿಕ ಕುಂತೀ ದೇವಿಯ ಮಕ್ಕಳು ಮಂಗಳ ಸ್ನಾನವನ್ನು ಮಾಡಿ, ಕಂಕಣಗಳನ್ನು ಕಟ್ಟಿ ಕೊಂಡು, ದಿವ್ಯ ಚಂದನಗಳನ್ನೂ ದಿವ್ಯ ಮಾಲ್ಯಗಳನ್ನೂ ದಿವ್ಯಾಂಬರಗಳನ್ನೂ ನವರತ್ನ ಖಚಿತಗಳಾದ ಕುಂಡಲಗಳನ್ನೂ ಧರಿಸಿ, ಯಜ್ಞೇಶ್ವರನಿಗೆ ಸಮಾನವಾದ ತೇಜಸ್ಸುಳ್ಳ ತಮ್ಮ ಪುರೋಹಿತ ಧೌಮ್ಯನನ್ನು ಮುಂದಿಟ್ಟು ಕೊಂಡು, ಜ್ಯೇಷ್ಠಾನು ಕ್ರಮವಾಗಿ ಗೂಳಿಗಳು ಗೋಳ್ಲರ ಹಟ್ಟಿಯನ್ನು ಹೊಗುವ ಹಾಗೆ ಹೊಕ್ಕರು. ಆಗ ಪುರೋಹಿತನು ಯಜ್ಞೇಶ್ವರನಲ್ಲಿ ಹೋಮವನ್ನು ಮಾಡಿ, ಮೊದಲು ಧರ್ಮರಾಯನನ್ನು ದ್ರೌಪದೀ ಸಮೇತನಾಗಿ ಹಸೇ ಮಣೆಯಲ್ಲಿ ಕುಳ್ಳಿರಿಸಿ, ಯಥಾ ಶಾಸ್ತ್ರವಾಗಿ ಹೋಮ ಕ್ರಿಯೆಗಳನ್ನು ಮಾಡಿಸಿ, ಅಗ್ನಿ ಪ್ರದಕ್ಷಿಣವನ್ನು ಮಾಡಿಸಿದನು. ಆಗ ಧರ್ಮರಾಯನು ಅನೇಕ ಧನ, ಕನಕ, ಗೋ, ವಸ್ತ್ರ, ವಾಹನಾದಿಗಳಿಂದ ಜನರನ್ನು

ದಣಿಸಿ, ದ್ರುಪದ ರಾಯನ ಅಪ್ಪಣೆಯಿಂದ ಧೌಮ್ಯ ಸಹಿತನಾಗಿ, ಅವನ ಮನೆಯಿಂದ ಹೊರಟು ಹೋದನು. ಆ ಬಳಿಕ ಭೀಮಾರ್ಜುನ, ನಕುಲ, ಸಹದೇವರು, ಕ್ರಮವಾಗಿ ಒಂದೊಂದು ದಿವಸದಲ್ಲಿ ಒಬ್ಬೊಬ್ಬರು ಆ ದ್ರೌಪದೀ ದೇವಿಯ ಪಾಣಿಗ್ರಹಣವನ್ನು ಮಾಡಿದರು. ಆ ಬಳಿಕ ಪಾಂಚಾಲರಾಯನು ಮಹಾ ರಥರಾದ ಪಾಂಡವರಿಗೆ ಸುವರ್ಣ ಭೂಷಿತಗಳಾಗಿ, ನಾಲ್ಕು ಕುದುರೆಗಳನ್ನು ಕಟ್ಟಿರುವಂಥಾವುಗಳಾಗಿ, ಕನಕ ಮಾಲಿಕೆಗಳಿಂದ ಅಲಂಕೃತಗಳಾಗಿರುವ ನೂರು ರಥಗಳನ್ನೂ, ಪದ್ಮ ಕುಲದಲ್ಲಿ ಹುಟ್ಟಿ, ಚಿನ್ನದ ಕಟ್ಟುಗಳಿಂದ ಕೂಡಿರುವ ಕೊಂಬುಗಳುಳ್ಳವುಗಳಾಗಿ, ಪರ್ವತಗಳೋಪಾದಿಯಲ್ಲಿ ಇರುವ ನೂರು ಆನೆಗಳನ್ನೂ, ಚಿನ್ನದ ಹಲ್ಲಣಗಳೊಡನೆ ಕೂಡಿ, ನವರತ್ನ ಮಾಲಿಕಾಲಂಕೃತಗಳಾಗಿ, ಮನೋವೇಗವುಳ್ಳ ಹನ್ನೆರಡು ವರುಷ ಪ್ರಾಯದ ಸಾವಿರ ಉತ್ತಮಾಶ್ವಗಳನ್ನೂ, ದಿವ್ಯಾಂಬರಾಭರಣ ಕುಸುಮ ಮಾಲಿಕಾಲಂಕೃತರಾಗಿ, ಯವ್ವನದಿಂದ ಕೂಡಿರುವ ನೂರು ಮಂದಿ ದಾಸಿಗಳನ್ನೂ, ಮತ್ತು ಚಿನ್ನದ ಪಾತ್ರೆಗಳನ್ನೂ, ಚಿನ್ನದ ಹಾಸಿಕೆಗಳನ್ನೂ, ಚಿನ್ನದ ಮಣೆಗಳನ್ನೂ, ಕಣ್ಣಿಗೆ ಪ್ರಿಯವಾದ ಅನೇಕ ವಸ್ತು ವಿಶೇಷಗಳನ್ನೂ, ಅನೇಕ ಗೋ ಧನಗಳನ್ನೂ, ದಿವ್ಯಾಂಬರಗಳನ್ನೂ, ದಿವ್ಯ ಭೂಷಣಗಳನ್ನೂ, ಒಂದೊಂದು ಲಕ್ಷ ಮೋಹರಗಳನ್ನೂ, ಪ್ರತ್ಯೇಕ ಪ್ರತ್ಯೇಕವಾಗಿ, ಪ್ರೀತಿ ಪೂರ್ವಕವಾಗಿ, ಕೊಟ್ಟನು. ಆ ಪಾಂಡವರು ಅಂಥಾ ಐಶ್ವರ್ಯವನ್ನು ಹೊಂದಿ, ಇಂದ್ರನಿಗೆ ಸರಿಯಾದ ಸಂಪತ್ತುಳ್ಳವರಾಗಿ, ಆತನ ಪಟ್ಟಣದಲ್ಲಿಯೇ ಇಷ್ಟವಾದ ಭೋಗಗಳನ್ನು ಅನುಭವಿಸುತ್ತ, ದ್ರೌಪದಿಯ ಕುಲ ಶೀಲ ವಿನಯಾಚಾರ ನಡತೆಗಳಿಗೆ ಸಂತೋಷ ಪಡುತ್ತಾ ಇದ್ದರು.

ಆಗ ದ್ರುಪದ ರಾಯನ ಪಟ್ಟದ ಹೆಂಡರು ಕುಂತೀ ದೇವಿಗೆ ತಮ್ಮ ತಮ್ಮ ಹೆಸರುಗಳನ್ನು ಹೇಳಿ ಕೊಂಡು, ನಮಸ್ಕಾರಗಳನ್ನು ಮಾಡಿದರು. ದ್ರೌಪದೀ ದೇವಿಯು ಕೈಯಲ್ಲಿ ಕಟ್ಟಿದ ಕಂಕಣವುಳ್ಳವಳಾಗಿ, ಕುಂತಿಗೆ ನಮಸ್ಕರಿಸಿ, ಕೈ ಕಟ್ಟಿ ಕೊಂಡು, ನಿಂತಿರಲು; ಕುಂತೀ ದೇವಿಯು ಬಹಳ ಸಂತೋಷದಿಂದ—ವಾಸುದೇವನಿಗೆ ಲಕ್ಷ್ಮಿ ದೇವಿಯೋಪಾದಿಯಲ್ಲಿ ನೀನು ಪಾಂಡು ಕುಮಾರರಿಗೆ ಪ್ರಿಯವನ್ನು ಮಾಡುತ್ತ, ಆಯುಷ್ಮಂತರಾಗಿ ಬಹು ಪರಾಕ್ರಮಿಗಳಾದ ಮಕ್ಕಳನ್ನು ಪಡೆದು, ಕುರು ಜಾಂಗಲ ಮೊದಲಾದ ದೇಶಗಳ ಪಟ್ಟಣಗಳಲ್ಲಿ ಪತಿಗಳೊಡನೆ ಪಟ್ಟಾಭಿಷಿಕ್ತೆಯಾಗಿ, ಅಶ್ವಮೇಧಾದಿ ಯಾಗಗಳನ್ನು ಮಾಡುವ ನಿನ್ನ ಪತಿಯಾದ ಯುಧಿಷ್ಠಿರನಿಗೆ ಯಜ್ಞ ಪತ್ನಿಯಾಗಿ, ಸಕಲ ಸುಖ ಸಾಂಬ್ರಾ

ಜ್ಯವನ್ನು ಅನುಭವಿಸು ಎಂದು ಹರಸಿದಳು. ಆ ಬಳಿಕ ವಾಸುದೇವನು ಪಾಂಡವರಿಗೆ ಮುತ್ತುಗಳೂ ವಜ್ರಗಳೂ ಮೊದಲಾದ ನವರತ್ನ ಖಚಿತವಾದ ಚಿನ್ನದ ಒಡವೆಗಳನ್ನೂ, ನಾನಾ ದೇಶಗಳಲ್ಲಿ ಹುಟ್ಟಿ, ಅಮೂಲ್ಯವಾದ, ಮೃದುವಾಗಿ, ವಿಚಿತ್ರವಾಗಿರುವ ವಸ್ತ್ರಗಳನ್ನೂ, ಕಂಬಳಿಗಳನ್ನೂ, ಮಣಿಗಳನ್ನೂ, ಪಾತ್ರೆಗಳನ್ನೂ, ರೂಪು ಯವ್ವನ ದಾಕ್ಷಿಣ್ಯಗಳಿಂದ ಕೂಡಿ, ನಾನಾ ದೇಶಗಳಲ್ಲಿ ಹುಟ್ಟಿದ ದಾಸೀ ಜನಗಳನ್ನೂ, ಮಾವುತರು ತಿದ್ದಿದ ಭದ್ರಗಜಗಳನ್ನೂ, ಅನೇಕ ಭೂಷಣಾಲಂಕೃತಗಳಾದ ಉತ್ತಮಾಶ್ವಗಳನ್ನೂ, ದಂತಗಳಿಂದಲೂ ಚಿನ್ನಗಳಿಂದಲೂ ಮಾಡಿದ, ಒಳ್ಳೇ ಕುದುರೆಗಳಿಂದ ಕೂಡಿರುವ ತೇರುಗಳನ್ನೂ, ಮೋಹರಗಳನ್ನೂ, ಚಿನ್ನದ ರಾಶಿಗಳನ್ನೂ, ಪ್ರೀತಿಯಿಂದ ಕಳುಹಿಸಲು; ಪಾಂಡವರು ಗೌರವದಿಂದ ಅದಷ್ಟನ್ನು ಅಂಗೀಕರಿಸಿ, ವಾಸುದೇವನ ಮನಸ್ಸಿಗೆ ಸಂತೋಷವನ್ನು ಮಾಡಿ, ದೃಪದ ರಾಯನ ಪಟ್ಟಣದಲ್ಲಿದ್ದರು.

### 63. Dharmaraya's Rajasuya Sacrifice.

### ೬3. ಧರ್ಮರಾಯನು ರಾಜಸೂಯ ಯಾಗಾ ಮಾಡಿದ ಕಥೆ.

ವೈಶಂಪಾಯನ ಮುನೀಂದ್ರನು ಜನಮೇಜಯರಾಯನನ್ನು ನೋಡಿ— ಕೇಳೈಯ್ಯಾ ರಾಜೇಂದ್ರನೇ, ಲೋಕೈಕವೀರನಾದ ಅರ್ಜುನನು ಕೃಷ್ಣನ ಅಪ್ಪಣೆಯಿಂದ ಕಾಂಡವ ವನ ದಹನದಲ್ಲಿ ಕಾಪಾಡಿದ ರಕ್ಕಸರ ಬಡಗಿಯಾದ ಮಯನು, ಇಂದ್ರ ಯಮ ವರುಣ ಕುಬೇರರ ಓಲಗದ ಚಾವಡಿಗಿಂತ ನಾಲ್ಕು ಮಡಿ ಚಂದವಾದ ಒಂದು ಓಲಗದ ಚಾವಡಿಯನ್ನೂ, ಜಗಳದಲ್ಲಿ ಯಾವ ಹಗೆಗಳಿಂದಲೂ ಮುರಿಯಲಾಗದೆ ಇರುವ ಒಂದು ತೋರವಾದ ಗದೆಯನ್ನೂ, ಹಗೆಗಳ ಎದೆಯು ಧ್ವನಿಯು ಕೇಳಿದ ಮಾತ್ರದಲ್ಲಿಯೇ ಶೀಳುವ ದೇವದತ್ತವೆಂಬ ಶಂಖವನ್ನೂ, ಧರ್ಮರಾಯನಿಗೂ ಭೀಮನಿಗೂ ಅರ್ಜುನನಿಗೂ ಕ್ರಮವಾಗಿ ಕೊಟ್ಟು, ಅವರು ಕೊಟ್ಟ ಉಡುಗೆರೆಗಳನ್ನು ತೆಕ್ಕೊಂಡು, ಹೊರಟು ಹೋದನು.

ಆ ಬಳಿಕ ಧರ್ಮರಾಯನು ಒಳ್ಳೇ ಲಗ್ನದಲ್ಲಿ ಕೃಷ್ಣನನ್ನು ಮುಂದಿಟ್ಟು ಕೊಂಡು, ತಮ್ಮಂದಿರನ್ನು ಒಡಗೊಂಡು, ಬ್ರಾಹ್ಮಣರೊಡನೆ ಓಲಗದ ಚಾವಡಿಯನ್ನು ಹೊಕ್ಕು, ಎರಡನೇ ದೇವೇಂದ್ರನೋಪಾದಿಯಲ್ಲಿ ಒಡ್ಡೋಲಗವನ್ನು ಕೊಡುತ್ತಾ, ಧರ್ಮದಿಂದ ರಾಜ್ಯ ಪರಿಪಾಲನೆಯನ್ನು ಮಾಡುತ್ತಾ ಇದ್ದನು. ಹೀಗಿರುವಲ್ಲಿ, ಕೃಷ್ಣನು ಧರ್ಮರಾಯನ ಅಪ್ಪಣೆಯನ್ನು ತೆಗೆದು ಕೊಂಡು, ದ್ವಾರಕಾ ಪಟ್ಟಣಕ್ಕೆ ತೆರಳಿದನು. ಆ ಮೇಲೆ ಒಂದಾನೊಂದು ದಿವಸದಲ್ಲಿ— ಸೂರ್ಯನೇ ಭೂಲೋಕಕ್ಕೆ ನಡೆದು ಬರುತ್ತಾನೋ? ಎಂಬಂತೆ, ಬರುವ ನಾರ

ದರನ್ನು ಕಂಡು, ಝುಗ್ಗನೆ ಎದ್ದು, ಧರ್ಮರಾಯನು ತಮ್ಮಂದಿರೊಡನೆ ಎದುರುಗೊಂಡು, ಅಡ್ಡ ಬಿದ್ದು, ಕೈಯನ್ನು ಹಿಡಿದು, ಚಾವಡಿಗೆ ಕರ ಕೊಂಡು ಬಂದು, ಚಿನ್ನದ ಕಾಲು ಮಣೆಯ ಮೇಲೆ ಕುಳ್ಳಿರಿಸಿ, ಕಾಲುಗಳನ್ನು ತೊಳೆದು, ಪೂಜಿಸಿ, ಕೈದಾವರೆಯನ್ನು ಜೋಡಿಸಿ, ನಿಂತು ಕೊಂಡಿದ್ದನು. ಆಗ ನಾರದ ಮಹಾ ಮುನಿಯು ಮೊದಲು ಧರ್ಮರಾಯನ ಕ್ಷೇಮವನ್ನು ಕೇಳಿ, ಕುಳಿತು ಕೊಳ್ಳುವಂತೆ ಅಪ್ಪಣೆ ಕೊಟ್ಟು, ಆ ಪ್ರಕಾರ ಕುಳಿತು ಕೊಂಡ ಧರ್ಮರಾಯನನ್ನು ನೋಡಿ—ಎಲೈ, ರಾಜೇಂದ್ರನೇ, ನಿನ್ನ ಕುಲದ ಅರಸುಗಳು ಧರ್ಮದ ದಾರಿಯನ್ನು ಬಿಡದೆ, ಪ್ರಜೆಗಳನ್ನು ಕಾಪಾಡಿದ ಹಾಗೆ ನೀನು ಕಾಪಾಡುತ್ತೀಯಾ? ಜನರ ಬುದ್ಧಿಯನ್ನೂ ಸಾಹಸವನ್ನೂ ಶಕ್ತಿಯನ್ನೂ ಜಾಣತನವನ್ನೂ ಪರೀಕ್ಷಿಸಿ ನೋಡಿ, ಅವರವರಿಗೆ ತಕ್ಕ ಉದ್ಯೋಗಗಳನ್ನು ಮಾಡಿಸಿ ಕೊಟ್ಟು, ಅವರವರಿಗೆ ಯೋಗ್ಯವಾದ ಮರ್ಯಾದೆಗಳನ್ನು ಮಾಡುತ್ತಾ, ಅವರು ಮಾಡುವ ಕೆಲಸಗಳನ್ನು ಆಪ್ತ ಜನರಿಂದ ತಿಳಿದು ಕೊಳ್ಳುತ್ತಾ ಇದ್ದೀಯಾ? ಮತ್ತು ನಿನಗೂ ದೇಶದ ಜನಗಳಿಗೂ ಪರಿವಾರದವರಿಗೂ ಹಿತನಾಗಿ, ಪಕ್ಷಪಾತಗಳು ಇಲ್ಲದೆ ನ್ಯಾಯಾನ್ಯಾಯಗಳನ್ನು ವಿಚಾರಿಸಿ, ತಪ್ಪು ಮಾಡಿದವನು ತನ್ನ ಮಗನಾದಾಗ್ಯೂ ಶಿಕ್ಷಿಸುವವನಾಗಿ, ಸಕಲ ವೇದ ಶಾಸ್ತ್ರವನ್ನೂ ರಾಜನೀತಿಗಳನೂ ಓದಿ, ಐವತ್ತಾರು ದೇಶದ ಮಾತುಗಳನ್ನೂ ಬರಹಗಳನ್ನೂ ಕಲಿತು, ನಿರಾಲಸ್ಯನಾಗಿ, ಕೋಪವಿಲ್ಲದೆ, ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯಗಳನ್ನು ಬಲ್ಲವನಾಗಿರುವ, ತಲೆಯಾಂತರದಿಂದ ಬಂದ ನಿಮ್ಮ ಮಂತ್ರಿ ಕುಲದಲ್ಲಿ ಹುಟ್ಟಿದ ಬ್ರಾಹ್ಮಣನನ್ನು ಮಂತ್ರಿಯಾಗಿ ಮಾಡಿ ಕೊಂಡು, ಆತನೊಡನೆ ಏಕಾಂತದಲ್ಲಿ ಆರ ಕಿವಿಗಳಿಗೆ ಕೇಳದಂತೆ ಮಂತ್ರಾಲೋಚನೆಯನ್ನು ಮಾಡಿ, ಮೊದಲು ನಿರ್ಣೈಸಿ, ಆ ಹಿಂದೆ ಯಾವ ರಾಜ ಕಾರ್ಯವನ್ನಾದರೂ ಮಾಡುತ್ತೀಯಾ? ಮತ್ತು ನಾನಾ ವಿಧ ಶಸ್ತ್ರ ವಿದ್ಯಗಳಲ್ಲಿ ಜಾಣರಾಗಿಯೂ, ಅಸಮಾನವಾದ ಬಲವುಳ್ಳವರಾಗಿಯೂ, ಒಡೆಯನ ಕೆಲಸಕ್ಕೆ ಪ್ರಾಣವನ್ನು ಹುಲ್ಲಿಗಿಂತ ಕಡೆ ಎಂದು ತಿಳಿದು ಸೇನೆಯನ್ನು ನಡಿಸುವ, ಇಳಿಸುವ, ಒಡ್ಡುವ, ಜಗಳವಾಡಿಸುವ ಕೆಲಸಗಳನ್ನು ತಿಳಿದವರಾಗಿ ಇರುವ ದಳವಾಯಿಗಳನ್ನು ಇಟ್ಟು ಕೊಂಡು, ಶೂರರಿಗೆ ಅವಮಾನವನ್ನು ಮಾಡದೆ, ಹೇಡಿಗಳಿಗೆ ಬಹುಮಾನವನ್ನು ಮಾಡದೆ ಇದ್ದೀಯಾ? ಮತ್ತು ವೈದ್ಯ ಶಾಸ್ತ್ರದಲ್ಲಿ ಘಟ್ಟಿಗರಾಗಿ, ವಂಚಕರಲ್ಲದೆ, ಹಣದ ಆಶೆಗಳಿಲ್ಲದೆ, ಎಲ್ಲರಲ್ಲಿಯೂ ಒಂದೇ ಪ್ರಕಾರವಾಗಿ ಪಶ್ಚಾತ್ತಾಪವೂ ದಯೆಯೂ ಉಳ್ಳ ವೈದ್ಯರನ್ನು ಇಟ್ಟು ಕೊಂಡು ಇದ್ದೀಯಾ?

ನಿನ್ನ ಸೇನಾ ಜನರಿಗೆ ನಿಬಂಧನೇ ಮಾಡಿರುವ ಸಂಬಳಗಳನ್ನು ತಡೆಯದೆ, ತಿಂಗಳು ಗಟ್ಲೆಯಲ್ಲಿಯೂ ಸಲ್ಲಿಸುತ್ತಾ, ಜಗಳದಲ್ಲಿ ನಿನಗಾಗಿ ಸತ್ತ ಭಟರ ಕುಟುಂಬವನ್ನು, ಅವರವರ ಯೋಗ್ಯತಾನುಸಾರವಾಗಿ, ರಕ್ತ ಕೊಡಗಿಗಳನ್ನೂ ಸಂಬಳಗಳನ್ನೂ ಕೊಟ್ಟು, ಕಾಪಾಡುತ್ತೀಯಾ? ಮತ್ತು ನಿನ್ನ ಆಜ್ಞೆಗಳು ಪಟ್ಟಣದಲ್ಲಿ ತಡೆ ಇಲ್ಲದೆ ನಡೆಯುತ್ತಾ ಇವೆಯೋ? ಎಂದು, ಇವು ಮೊದಲಾದ ರಾಜ ನೀತಿಗಳ ಪ್ರಶ್ನೆಯನ್ನು ಮಾಡಿದನು.

ಅದಕ್ಕೆ ಧರ್ಮರಾಯನು—ಜೀಯಾ, ಮುನೀಂದ್ರನೇ, ತಮ್ಮಿಂದ ಕೇಳಿದ ರಾಜ ಕಾರ್ಯಗಳಲ್ಲಿ ನನ್ನ ಯಥಾ ಶಕ್ತಿ ನಿಮ್ಮಂಥ ದೊಡ್ಡವರ ಅನುಗ್ರಹದಿಂದ ನಡೆಯುತ್ತೇನೆ. ನೀವು ಎಲ್ಲಾ ಲೋಕಗಳಲ್ಲಿಯೂ ನೋಡದೆ ಇರುವದು ಒಂದೂ ಇಲ್ಲ. ಆದರೆ ಎಲ್ಲಿಯಾದರೂ ಇಂಥಾ ಓಲಗದ ಚಾವಡಿಯನ್ನು ನೋಡಿ ಇದ್ದರೆ, ಅಪ್ಪಣೇ ಕೊಡಿಸ ಬೇಕೆಂದು, ಕೇಳಿದನು. ನಾರದನು ಅದರ ಅಂದ ಚಂದಕ್ಕೆ ಆಶ್ಚರ್ಯ ಪಟ್ಟು—ಇಂಥಾ ಸಭೆಯು ಮನುಷ್ಯ ಲೋಕದಲ್ಲಿ ಎಲ್ಲಿಯೂ ನೋಡಲಿಲ್ಲ. ಆದರೆ ಇಂದ್ರ, ಯಮ, ವರುಣ, ಕುಬೇರರ ಒಡ್ಡೋಲಗಕ್ಕೆ ನಾನು ಹೋಗಿರುವದುಂಟು. ಆ ಸಭೆಗಳು ಇಷ್ಟು ಚಲುವಾಗಿಲ್ಲ. ಇದು ಭೂಲೋಕದಲ್ಲಿ ಇರುವ ಬ್ರಹ್ಮನ ಸಭೆಯಂತೆ ಹೊಳೆಯುತ್ತದೆ. ಇಂಥ ಸಭೆಯಲ್ಲಿ ದಿವ್ಯ ಸಿಂಹಾಸನದಲ್ಲಿ ಕುಳಿತು, ಧರ್ಮದಿಂದ ರಾಜ್ಯಗಳನ್ನು ಪರಿಪಾಲಿಸುತ್ತಾ, ಸಕಲ ದೇಶದ ಅರಸುಗಳಲ್ಲಿಯೂ ಕಪ್ಪ ಕಾಣಿಕೆಗಳನ್ನು ತೆಗೆದು ಕೊಳ್ಳುತ್ತಾ, ನೀನು ಇರುವದನ್ನೂ, ನಿನ್ನ ತಮ್ಮಂದಿರು ಭಿನ್ನ ಭೇದವಿಲ್ಲದೆ ಲೋಕೈಕ ವೀರರಾಗಿ ಒಂದೇ ಮನಸ್ಸಿನಿಂದ ನಡೆಯುವದನ್ನೂ, ಯಮ ಲೋಕದಲ್ಲಿ ಇರುವ ನಿಮ್ಮ ತಂದೆಯಾದ ಪಾಂಡು ಮಹಾರಾಯನು ಕೇಳಿ, ನಾನು ಸ್ವಲ್ಪ ದಿವಸದಲ್ಲಿ ಅಲ್ಲಿಗೆ ಹೋಗಿದ್ದದರಿಂದ ನನ್ನನ್ನು ಕಂಡು, ಕಣ್ಣೀರನ್ನು ಬಿಡುತ್ತಾ, ಅಂಗಲಾಚಿ ಕೊಂಡು,—ಹರಿಶ್ಚಂದ್ರ ರಾಯನು ರಾಜಸೂಯವೆಂಬ ಮಹಾ ಯಜ್ಞವನ್ನು ಮಾಡಿದ್ದರಿಂದ, ಇಂದ್ರನ ಸಭೆಯಲ್ಲಿ ಆತನ ಅರ್ಧಾಸನದಲ್ಲಿ ಕುಳಿತು, ಸಕಲ ಭೋಗಗಳನ್ನು ಅನುಭವಿಸುತ್ತಾನೆ. ನಾನು ಅಂಥಾ ಭಾಗ್ಯಕ್ಕೆ ಪಾತ್ರನಾಗಲಿಲ್ಲ. ನನ್ನ ಮಕ್ಕಳು ಐದು ಜನವು ದೇವತೆಗಳ ಅಂಶದಿಂದ ಹುಟ್ಟಿದವರಾದ್ದರಿಂದ, ಲೋಕೈಕ ವೀರರಾಗಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಅದು ಅಲ್ಲದೆ, ಭೂಮಿಯ ಭಾರವನ್ನು ಇಳಿಸುವದಕ್ಕೆ ಬ್ರಹ್ಮ ಮೊದಲಾದ ದೇವತೆಗಳಿಂದ ಯದು ಕುಲದಲ್ಲಿ ಕೃಷ್ಣನೆಂಬ ಹೆಸರಿನಿಂದ ಹುಟ್ಟಿರುವ ಮಹಾ ವಿಷ್ಣುವು ನನ್ನ ಮಕ್ಕಳಿಗೆ ನಂಟನಾಗಿಯೂ

ಸ್ನೇಹಿತನಾಗಿಯೂ ಪಾಲಕನಾಗಿಯೂ ಮಂತ್ರಿಯಾಗಿಯೂ ದೂತನಾಗಿಯೂ ಇದ್ದಾನೆ. ಅವರಿಗೆ ಯಾವ ಕಾರ್ಯವೂ ಅಸಾಧ್ಯವಲ್ಲ. ಆದ್ದರಿಂದ ನೀವು ನನ್ನ ಮೇಲೆ ಕನಿಕರವಿಟ್ಟು, ನನ್ನ ಮಗನಾದ ಧರ್ಮರಾಯನಿಗೆ ರಾಜಸೂಯ ಯಾಗವನ್ನು ಮಾಡುವಂತೆ ತಿಳಿಸಿರಿ. ಆತನು ಮಾಡಿದ್ದೇ ಆದರೆ, ನಾನು, ತಂದೆ, ಅಜ್ಜ, ಮುತ್ತಜ್ಜರ ಗುಂಪುಗಳೊಡನೆ ಸ್ವರ್ಗ ಲೋಕದಲ್ಲಿ ನಿತ್ಯ ಸುಖದಿಂದ ಇರುವೆನೆಂದು, ಬೇಡಿ ಕೊಂಡನು. ಆತನ ಮಾತುಗಳನ್ನು ನಿನಗೆ ಹೇಳುವದಕ್ಕೆ ಬಂದೆನು. ನಿನ್ನ ತಂದೆ, ತಾತ, ಮುತ್ತಾತಂದಿರು ದಿಗ್ವಿಜಯದಿಂದ ಸಂಪಾದಿಸಿದ ದ್ರವ್ಯಗಳಿಂದ ನಾಲ್ಕು ವರ್ಣದವರನ್ನು ಕಾಪಾಡಿ, ಬಹಳ ಯಾಗಗಳನ್ನು ಮಾಡಿ, ಇಂದ್ರನ ಸಭೆಯಲ್ಲಿ ಇರುವರು. ಅವರ ಹಾಗೆ ನೀನು ಈ ರಾಜಸೂಯ ಯಾಗವನ್ನು ಮಾಡು. ಈ ಯಜ್ಞವು ಬಹಳ ಕಷ್ಟವು. ಇದರಿಂದ ನಿನಗೆ ಬಹಳ ಅರಸುಗಳೊಡನೆ ಜಗಳ ಉಂಟಾಗಿ, ಅವರನ್ನು ಜೈಸಿದರೆ, ನಿನಗೆ ಬಹು ಕೀರ್ತಿಯು ಬರುವದೆಂದು ಹೇಳಿ, ದೇವಲೋಕಕ್ಕೆ ಹೋದನು.

ತರುವಾಯ ಯುಧಿಷ್ಠಿರನು, ಕೃಷ್ಣದ್ವೈಪಾಯನ ಮುನಿಯೂ ಧೌಮ್ಯನೂ ನಂಟ ಇಷ್ಟರೂ ಮಂತ್ರಿ ಜನಗಳೂ ಇವರ ಮುಂದೆ ತನ್ನ ತಮ್ಮಂದಿರೊಡನೆ ಹೀಗಂದನು—ಪ್ರಪಂಚದಲ್ಲಿ ಜನರು ಮಕ್ಕಳನ್ನು ಪಡೆದು, ಅವರಿಂದ ತಮಗೆ ಸಂತೋಷ ಉಂಟಾಗುವದು ಎಂದು, ನಿಜವಾಗಿ ತಿಳಿದಿರುವರು. ಆದಕಾರಣ ಒಳ್ಳೆ ಮಗನು ತನ್ನ ತಂದೆಯ ಸಂಕಲ್ಪವನ್ನು ಈಡೇರಿಸುವದು ಅಗತ್ಯವಾದ ಕೆಲಸವಾಗಿಯೂ ನೀತಿಯಾಗಿಯೂ ಇರುವದು. ಪರಲೋಕದಲ್ಲಿ ಇರುವ ನಮ್ಮ ತಂದೆಗೆ ಈ ಯಾಗವು ಹಿತವಾಗಿರುವದು. ತಂದೆಯ ಹಿತಕ್ಕಾಗಿ ಈ ಯಾಗವನ್ನು ಮಾಡ ಬೇಕೆಂದು ಬುದ್ಧಿಯು ಉಂಟು. ಇದರಿಂದ ಎಲ್ಲಾ ಅರಸುಗಳೊಡನೆ ಜಗಳ ಉಂಟಾಗುವದು ಎಂದು ಭಯವೂ ಉಂಟು. ಇದಕ್ಕೆ ಹ್ಯಾಗೆ ಮಾಡ ಬೇಕೆಂದು ಕೇಳಿದನು. ಆ ಮಾತನ್ನು ಕೇಳಿ, ಧೌಮ್ಯ ಮೊದಲಾದವರು—ಎಲೈ, ಧರ್ಮರಾಯನೇ, ಈ ಯಾಗದಿಂದ ಎಲ್ಲಾ ಪಾಪಗಳು ಹರಿದು ಹೋಗುವವು; ಎಲ್ಲಾ ಅರಸುಗಳ ಐಶ್ವರ್ಯವು ನಿನ್ನನ್ನು ಹೊಂದುವದು; ಮೂರು ಲೋಕದಲ್ಲಿಯೂ ನಿನ್ನ ಕೀರ್ತಿಯು ಪ್ರಸಿದ್ಧಿಯಾಗುವದು. ನಿನಗೆ ದೈವ ಸಹಾಯವು ಇರುವ ಕಾರಣ, ಈ ಕೆಲಸದಲ್ಲಿ ಸಂದೇಹ ಪಡದೆ, ರಾಜಸೂಯ ಯಾಗವನ್ನು ಮಾಡೆಂದು ಹೇಳಿದರು. ಧರ್ಮರಾಯನು ಅವರ ಮಾತುಗಳನ್ನು ಒಪ್ಪಿ ಕೊಂಡು—ಈ ಯಜ್ಞವು ತಡೆ

ಇಲ್ಲದೆ ನಡಿಸುವದಕ್ಕೆ ಕೃಷ್ಣನೊಬ್ಬನೇ ಯೋಗ್ಯನೇ ಹೊರ್ತು, ಮತ್ತೊಬ್ಬರಿಗೆ ಸಾಮರ್ಥ್ಯವಿಲ್ಲವೆಂದು ಎಣಿಸಿ, ಮಂತ್ರಿಗಳನ್ನು ಕರೆದು,–ನಿಮ್ಮಲ್ಲಿ ಯಾರಾದರೂ ಒಬ್ಬನು ಚುರುಕಾಗಿ ನಡೆಯುವ ಕುದುರೆಗಳನ್ನು ಹೂಡಿರುವ ತೇರನ್ನು ಏರಿ, ಬೇಗ ಹೋಗಿ, ಕೃಷ್ಣನನ್ನು ಕರೆದು ಕೊಂಡು ಬನ್ನಿ, ಎಂದು ಅಪ್ಪಣೆಯನ್ನು ಕೊಟ್ಟು ಕಳುಹಿಸಿ, ಕೃಷ್ಣನ ಬರುವಿಕೆಯನ್ನು ಕಾದು ಕೊಂಡು ಇದ್ದನು.

ಇತ್ತ, ಕಳುಹಿಸಿದ ಮಂತ್ರಿಯು ದ್ವಾರಕಾವತಿಗೆ ಹೋಗಿ, ಕೃಷ್ಣನಿಗೆ ಧರ್ಮರಾಯನ ಮಾತುಗಳನ್ನು ಅರಿಕೆ ಮಾಡಿದ್ದರಿಂದ, ಆತನು ಸಂತೋಷ ಪಟ್ಟು, ದ್ವಾರಕಾ ಪಟ್ಟಣದಿಂದ ಹೊರಟು, ದಾರಿಯಲ್ಲಿ ಒಂದು ದಿನವಾದರೂ ನಿಲ್ಲದೆ, ಪ್ರಯಾಣದ ಮೇಲೆ ಪ್ರಯಾಣದಿಂದ ಬಂದು, ಇಂದ್ರಪ್ರಸ್ಥ ಪಟ್ಟಣವನ್ನು ಹೊಕ್ಕು, ಸೋದರತ್ತೆಯಾದ ಕುಂತೀ ದೇವಿಗೂ ಭಾವನಾದ ಧರ್ಮರಾಯನಿಗೂ ವಂದನೆಯನ್ನು ಮಾಡಿ, ತನ್ನ ಜೊತೇ ಪ್ರಾಯದವನಾದ ಭೀಮನನ್ನು ತಬ್ಬಿ ಕೊಂಡು, ತನಗೆ ಕಿರಿಯವರಾದ ಅರ್ಜುನ ನಕುಲ ಸಹದೇವರು ಬಂದು, ನಮಸ್ಕರಿಸಲು; ಅವರಿಗೆ ಆಶೀರ್ವಾದವನ್ನು ಮಾಡಿ, ಆ ತರುವಾಯ ಧರ್ಮರಾಯನು ತೋರಿಸಿದ ದಿವ್ಯ ಸಿಂಹಾಸನದಲ್ಲಿ ಕುಳಿತು ಕೊಂಡನು. ಆಗ ಯುಧಿಷ್ಠಿರನು ಅಶೇಷ ಲೋಕಗಳಿಗೆ ಗುರುವಾದ ಕೃಷ್ಣನನ್ನು ದೇವೋಪಚಾರಗಳಿಂದ ಪೂಜಿಸಿ, ಎಲ್ಲಾ ಲೋಕಗಳ ಯೋಗ ಕ್ಷೇಮವನ್ನು ಯಾವಾಗಲೂ ಪರಾಂಬರಿಸುತ್ತಿರುವ ಅಂಥಾ ಕೃಷ್ಣ ದೇವರ ಯೋಗ ಕ್ಷೇಮವನ್ನು ತಾನು ಕೇಳಿ, ಸಂತೋಷದಿಂದ ತುಂಬಿದ ಕೃಷ್ಣನನ್ನು ಕುರಿತು–ಎಲೈ, ಮಹಾನುಭಾವನೇ, ನೀನು ಸಕಲ ಪ್ರಾಣಿಗಳ ಹೃದಯಗಳಲ್ಲಿ ನಿತ್ಯವು ಇರುವದರಿಂದ, ಸಕಲ ಪ್ರಾಣಿಗಳ ಅಂತಸ್ಥವಾದ ವಿಚಾರಗಳಲ್ಲಿ ನಿನಗೆ ತಿಳಿಯದೆ ಇರುವದು ಒಂದೂ ಇಲ್ಲ. ಆದಾಗ್ಯೂ, ಬಿನ್ನವಿಸುತ್ತೇನೆ; ಲಾಲಿಸು. ಯಮ ಲೋಕದಲ್ಲಿ ಇರುವ ನನ್ನ ತಂದೆಯಾದ ಪಾಂಡು ರಾಯನು ಕಳುಹಿಸಿದ ಕಾರಣ, ನನ್ನ ಬಳಿಗೆ ನಾರದ ಮುನೀಂದ್ರನು ಬಂದು, ಈ ಓಲಗದ ಚಾವಡಿಯಲ್ಲಿ ಎಲ್ಲರ ಮುಂದೆಯೂ–ರಾಜಸೂಯ ಯಾಗವನ್ನು ಮಾಡಿ, ನಿಮ್ಮ ತಂದೆಗೆ ಸಂತೋಷ ಮಾಡೆಂದು ಹೇಳಿದನು. ನನಗೆ ಅಂಥಾ ಶಕ್ತಿಯು ಇರುವದೆಂದು ತಿಳಿದು ಹೇಳಿದನೋ? ತಿಳಿಯದೆ ಹೇಳಿದನೋ? ನಾನು ಅರಿಯೆನು. ಸತ್ಯ ಸಂಕಲ್ಪನಾದ ನೀನು ನನ್ನ ಹೃದಯದಲ್ಲಿ ಇದ್ದು, ಪ್ರೇರಿಸಿದ್ದರಿಂದ, ನಾನು ಆ ಕ್ರತುವನ್ನು ಮಾಡುತ್ತೇನೆಂದು ಒಪ್ಪಿ ಕೊಂಡೆನು. ಅದಕ್ಕೋಸ್ಕರ ನಿನ್ನನ್ನು ಬೇಗ ಕರಿಸಿ

ದೆನು. ಈಗ ಅದಕ್ಕೆ ನನಗೆ ಏನು ಅಪ್ಪಣೆಯನ್ನು ಕೊಡುತ್ತೀ? ಎಂದು ಕೇಳಿದನು.

ಆಗ ಕೃಷ್ಣನು ಧರ್ಮರಾಯನನ್ನು ಕುರಿತು—ಹಗೆಗಳನ್ನು ಮರ್ದಿಸುವ ನಿನ್ನ ತಮ್ಮಂದಿರ ಸಹಾಯದಿಂದಲೂ ನಿನ್ನ ಸತ್ಯದಿಂದಲೂ ಘನವಾದ ರಾಜಸೂಯ ಯಾಗವನ್ನು ಮಾಡುವದಕ್ಕೆ ನೀನೇ ತಕ್ಕವನಲ್ಲದೆ ಮತ್ತೊಬ್ಬನೂ ಇಲ್ಲ. ಆದರೆ ಮೊದಲು ಪರಶುರಾಮನಿಂದ ಈ ಭೂಮಿಯ ಕ್ಷತ್ರಿಯರೆಲ್ಲಾ ಹಾಳಾದ ಕಾಲದಲ್ಲಿ, ಯದು ವಂಶವೂ ಇಕ್ಷ್ವಾಕು ವಂಶವೂ ಈ ಎರಡೇ ಉಳಿದವು. ಇವುಗಳಲ್ಲಿ ನೂರೊಂದು ಕುಲಗಳು ಹೆಚ್ಚಾದವು. ಮತ್ತು ಯಯಾತಿಯ ಮಕ್ಕಳಾದ ಯದು ಭೋಜರ ವಂಶಗಳಲ್ಲಿ ಹನ್ನೊಂದು ಕುಲಗಳು ಆದವು. ಈ ಕ್ಷತ್ರಿಯ ಕುಲದವರನ್ನೆಲ್ಲಾ ಜೈಸಿದಂಥ ಜರಾಸಂಧನೆಂಬ ಒಬ್ಬ ಅರಸು ಇದ್ದಾನೆ. ಅವನ ಸಾಮರ್ಥ್ಯವನ್ನು ಹೇಳುತ್ತೇನೆ, ಕೇಳು. ಆತನಿಗೆ ಬಹಳ ಗರ್ವಿಷ್ಠನಾದ, ಬಹಳ ಬಲಿಷ್ಠನಾದ ಚೇದಿ ದೇಶಾಧಿಪತಿಯಾದ ಶಿಶುಪಾಲ ನೆಂಬ ಮಹಾ ವೀರನು ದಳಪತಿಯಾಗಿ, ಎಡೆ ಬಿಡದೆ ಆತನನ್ನು ಓಲಗಿಸುತ್ತಿರು ವನು. ಮತ್ತು ಆಯುಧಗಳಿಂದ ಹತರಾಗದಂಥ ರಾಕ್ಷಸರ ಮಾಯೆಯುಳ್ಳಂಥ ಹಂಸನೂ, ಡಿಬಿಕನೂ ಪರಮ ಸ್ನೇಹಿತರಾಗಿ, ಮಂತ್ರಿಗಳಾಗಿ, ಅವನನ್ನು ಸೇವಿ ಸುವರು. ಮತ್ತು ಕೌಶಿಕ, ಚಿತ್ರಸೇನನು ಎಂಬ ಇಬ್ಬರು ಅರಸುಗಳು ಮಹಾ ಸೇನೆಗಳಿಂದ ಕೂಡಿ ಕೊಂಡು, ಆತನಿಗೆ ಎಡ ಬಲದ ತೋಳುಗಳ ಹಾಗೆ ಇರು ವರು. ಮತ್ತು ಮಹಾ ಬಲಪರಾಕ್ರಮಿಯಾದಂಥ ಪ್ರಾಗ್ಜ್ಯೋತಿಷ ನಗರದ ಒಡೆಯನಾದ, ನಿನ್ನ ತಂದೆಗೆ ಸ್ನೇಹಿತನಾಗಿಯೂ ನಿನಗೆ ಬೇಕಾದವನಾಗಿಯೂ ಇರುವ ಭಗದತ್ತನು ಕೂಡ ಭಯದಿಂದ ಆತನನ್ನು ಓಲೈಸುತ್ತಿರುವನು. ಅಂ ಗ, ವಂಗ, ಮಹೇಂದ್ರ, ಕಿರಾತ ಪತಿಗಳು, ಪೌಂಡ್ರಕವಾಸುದೇವನು, ದಕ್ಷಿಣ ದೇಶಾಧಿಪತಿಗಳಾದ ಪುರಜಿತ್ತನು, ಕರೂಶನು, ಕಲಭನು, ನಕುಲನು, ಕರುಷ ಣನು, ಸೂಪಹಿತನು, ಮಣಿದತ್ತನು, ಚಕ್ರನು, ಶಾಲ್ಲೇಯನು, ಸರ್ವಪಾಂಚಾ ಲರೂ, ಶೂರಸೇನ, ಪುಷ್ಕರ, ಪುಳಿಂದ, ಕಳಿಂಗ, ಕುಂತಳ, ಮತ್ಸ್ಯ, ಆಂಧ್ರ ದೇಶಗಳ ಅರಸರು, ಇವರೆಲ್ಲಾ ಆತನ ಭಯದಿಂದ ತಮ್ಮ ತಮ್ಮ ದೇಶಗಳ ನ್ನು ಬಿಟ್ಟು, ಓಲಗಿಸುತ್ತಿರುವರು.

ಇನ್ನೊಂದು ವಿಶೇಷವನ್ನು ಕೇಳು. ದುಷ್ಟನಾದ ನನ್ನ ಸೋದರ ಮಾವನಾದ ಕಂಸನು ತನ್ನ ತಂದೆಯಾದ ಉಗ್ರಸೇನನಿಗೂ, ತನ್ನ ತಂಗಿಯಾದ ದೇವಕಿ ಗೂ, ನನ್ನ ತಂದೆಯಾದ ವಸುದೇವನಿಗೂ, ನಿರ್ಬಂಧದಲ್ಲಿ ಇಟ್ಟು, ಬಹಳ

ತೊಂದರೆಯನ್ನು ಪಡಿಸುತ್ತಾ, ಲೋಕಕ್ಕೆ ಒಂದು ಮುಳ್ಳಾಗಿದ್ದದರಿಂದ, ಅವನನ್ನು ನಾನು ಕೊಂದು ಹಾಕಿದೆನು. ಅವನು ಆ ಜರಾಸಂಧನಿಗೆ ಅಳಿಯನಾದ್ದರಿಂದ, ತನ್ನ ಹೆಣ್ಣು ಮಕ್ಕಳ ದುಖ್ಖವನ್ನು ಕೇಳಿ, ರೌದ್ರಾಕಾರನಾಗಿ, ನನಗೆ ಬಹಳ ಉಪದ್ರಗಳನ್ನು ಮಾಡಲಾರಂಭಿಸಿ, ಹಂಸ, ಡಿಬಿಕರು, ಮೊದಲಾದ ಶೂರರೊಡನೆ ಕೂಡಿ, ಲೆಖ್ಖವಿಲ್ಲದ ಸೇನೆಯನ್ನು ಕರ ಕೊಂಡು, ನನ್ನ ಪಟ್ಟಣವಾದ ಮಥುರೆಗೆ ಬಂದು, ಮುತ್ತಿಗೆ ಹಾಕಿದನು. ನಾವುನ್ನೂ ಮಹಾ ವೀರರಾದ ಯದು, ವೃಷ್ಣಿ, ಭೋಜ, ಅಂಧಕ ಸೈನ್ಯದೊಡನೆ ಹೊರಟು, ಜಗಳವನ್ನು ಮಾಡುತ್ತಾ, ಆ ಜರಾಸಂಧನು ನನ್ನಿಂದ ಸಾಯುವವನಲ್ಲವೆಂದು ತಿಳಿದು, ಸಹಾಯ ಹೀನನಾಗ ಮಾಡ ಬೇಕೆಂದು ನೆನೆದು, ಉಪಾಯದಿಂದ ಹುಯ್ಲಲ್ಲಿ ಹಂಸನು ಹತನಾದನೆಂದು ಡಿಬಿಕನಿಗೆ ತಿಳಿಯ ಮಾಡಿಸಿದೆನು. ಆ ಮಾತು ಕೇಳಿ, ಅವನು ದುಖ್ಖಪಟ್ಟು—ಹಂಸನಿಲ್ಲದೆ ನಾನು ಇರ ಬಾರದೆಂದು, ಕಡಲಲ್ಲಿ ಬಿದ್ದು, ಕಾಲನ ಮನೆಗೆ ಹೋದನು. ಆ ಸುದ್ದಿಯನ್ನು ಹಂಸನು ಕೇಳಿ, ಹೆಚ್ಚಾದ ತಮ್ಮನ ಮೇಲಣ ಸ್ನೇಹದಿಂದ ವಿಷವನ್ನು ಕುಡಿದು, ಸತ್ತನು. ಆ ಮೇಲೆ ಜರಾಸಂಧನು ಸಹಾಯ ಹೀನನಾಗಿ, ಮುತ್ತಿಗೆಯನ್ನು ತೆಗೆದು, ತನ್ನ ಪಟ್ಟಣಕ್ಕೆ ಹೋದನು. ನಾವು ಆತನ ಭಯದಿಂದ ಮಥುರಾ ಪಟ್ಟಣವನ್ನು ಬಿಟ್ಟು, ಕಡಲ ನಡುವೆ ದ್ವಾರಕೆ ಎಂಬ ದುರ್ಗವನ್ನು ಮಾಡಿ ಕೊಂಡು, ಅಲ್ಲಿ ಇರುತ್ತೇವೆ.

ಮತ್ತು ಆ ಜರಾಸಂಧನ ಕೆಟ್ಟ ನಡತೆಗಳೇನಂದರೆ—ಮಹಾ ಪಾಪಾತ್ಮನಾಗಿ, ಅನೇಕರಾದ ಅರಸು ಮಕ್ಕಳನ್ನು ಹಿಡಿದು ಕೊಂಡು ಬಂದು, ಗಿರಿವ್ರಜವೆಂಬ ಪುರದಲ್ಲಿ ಶೆರೇ ಹಾಕಿ, ಪಾಪಕ್ಕೆ ಹೆದರದೆ, ತಾನು ಭೈರವ ಪೂಜೆಯನ್ನು ಮಾಡುತ್ತಾ, ದಿನ ಚರಿ ಒಂದೊಂದು ನರ ಬಲಿಯನ್ನು ಕೊಡುತ್ತಾ ಇದ್ದಾನೆ. ಅಂಥಾ ಕ್ರೂರ ಕೆಲಸವನ್ನು ಮಾಡುವ ಆ ಕೆಟ್ಟ ಜರಾಸಂಧನೊಬ್ಬನನ್ನು ಮಾತ್ರ ನೀನು ಯುದ್ಧದಲ್ಲಿ ಕೊಂದು ಹಾಕಿದರೆ, ಸಮಸ್ತ ಸಾಂಬ್ರಾಜ್ಯವು ನಿನ್ನನ್ನು ಶೇರುವದು; ರಾಜಸೂಯ ಯಾಗವನ್ನು ನೀನು ತಡೆ ಇಲ್ಲದ ಹಾಗೆ ಮಾಡ ಕೂಡುವದು. ಆದರೆ ಆ ಮಗಧೇಶನಾದ ಜರಾಸಂಧನನ್ನು ಯುದ್ಧದಲ್ಲಿ ಆಯುಧಗಳಿಂದ ಜೈಸದ ಹಾಗೆ ಆತನಿಗೆ ಈಶ್ವರನ ವರ ಉಂಟು. ಆದಾಗ್ಯೂ ಬಲಿಷ್ಠನಾದ ನಿನ್ನ ತಮ್ಮನಾದ ಈ ಭೀಮಸೇನನು ಮಲ್ಲ ಯುದ್ಧವನ್ನು ಮಾಡಿ, ಆಯಾಸವಿಲ್ಲದೆ ಅವನನ್ನು ಕೊಂದು ಹಾಕುವನು. ರಕ್ಷಣೆಯಿಂದ ಭಗೀರಥನೂ, ಸಹಾಯ ಸಂಪತ್ತಿನಿಂದ ಯುವನಾಶ್ವನೂ, ಬಲದಿಂದ ಭರತನೂ, ತಪಸ್ಸಿನಿಂದ ಕಾರ್ತವೀರ್ಯನೂ, ಬುದ್ಧಿಯಿಂದ ಮರುತ್ತನೂ,

ಮೊದಲು ಸಕಲ ಸಾಂಬ್ರಾಜ್ಯವನ್ನು ಪಡೆದರು. ಈಗ ಅವಷ್ಟು ನಿನಗಿರುವದ ರಿಂದ, ಆ ದುರಾತ್ಮನು ಎಷ್ಟು ಬಲಿಷ್ಠನಾದರೂ, ಎಂಥ ಶ್ರೇಷ್ಠನಾದರೂ, ಅವನ ಪಾಪಕರ್ಮಗಳಿಂದ ಅವನ ಐಶ್ವರ್ಯವೆಲ್ಲಾ ಮಿಂಚಿನ ಹಾಗೆ ಹಾರಿ ಹೋಗು ವದು. ಅವನನ್ನು ಜೈಸುವದು ನಿನಗೆ ಸುಲಭವಾಗಿರುವದೆಂದು, ಹೇಳಿದನು.

ಆ ಸಮಯದಲ್ಲಿ ಆ ಮಾತನ್ನು ಕೇಳಿ, ಭೀಮಸೇನನು ಧರ್ಮರಾಯನೊಡನೆ ಹೀಗೆಂದನು—ಪ್ರಪಂಚದಲ್ಲಿ ಎಷ್ಟು ಅಧಿಕನಾದರೂ ಒಂದು ಕೆಲಸಕ್ಕೆ ಉದ್ಯೋ ಗಿಸಿ, ಮಾಡದೆ ಬಿಟ್ಟರೆ, ಅವನು ಐಶ್ವರ್ಯ ಕೀರ್ತಿಗಳನ್ನು ಪಡೆಯಲಾರನು. ಹೀನನಾದರೂ ಪ್ರಾರಂಭಿಸಿದ ಕೆಲಸವನ್ನು ಎಷ್ಟು ತಡೆ ಬಂದಾಗ್ಯೂ, ಚಪಲ ಬುದ್ಧಿಯಿಂದ ಬಿಡದೆ, ಪೂರೈಸಿ ಮಾಡಿದರೆ, ಎಂಥಾ ಬಲಿಷ್ಠರನ್ನೂ ಜೈಸುವನು. ಅಧಿಕ ಪರಾಕ್ರಮಿಯ ಸಂಗಡ ಜಗಳವನ್ನು ಮಾಡಿ ಸೋತರೂ, ಹೊಗಳುಂ ಟು. ಕೀಳನನ್ನು ಜೈಸಿದಾಗ್ಯೂ ಹೊಗಳಿಲ್ಲ. ಆದ್ದರಿಂದ ಈ ಕೃಷ್ಣನ ಕರುಣೆ ಯಿಂದಲೂ, ಅರ್ಜುನನ ಸಹಾಯದಿಂದಲೂ, ನಿನ್ನ ಆಶೀರ್ವಾದದಿಂದಲೂ, ಜಗ ದ್ರೋಹಿಯಾದ ಜರಾಸಂಧನನ್ನು ಜಗಳದಲ್ಲಿ ಜೈಸಲಾಪೆನು. ಮತ್ತು ಆಹವ ನೀಯ, ಗಾರ್ಹಪತ್ಯ, ದಾಕ್ಷಿಣಾತ್ಯಗಳೆಂಬ ಮೂರು ಅಗ್ನಿಗಳೋಪಾದಿ ಯಲ್ಲಿ ನಾವು ಮೂರು ಜನವು ನಿನ್ನ ಮಹಾ ಯಜ್ಞದ ಕೆಲಸವನ್ನು ವಿಘ್ನವಿಲ್ಲದ ಹಾಗೆ ನಡಿಸುವೆವು. ಈ ಜರಾಸಂಧನೆಂಬ ಪಶುವನ್ನು ನನ್ನ ಭುಜ ಬಲವೆಂಬ ಬೆಂಕಿಗೆ ಆಹುತಿ ಮಾಡುವೆನು, ಎಂದು ಹೇಳಿದನು.

ಆ ಬಳಿಕ ಅರ್ಜುನನು—ಓ ರಾಜೇಂದ್ರನೇ, ನೀನು ಎಲ್ಲಾ ಅರಸುಗಳನ್ನು ಜೈಸು! ನಿನ್ನ ಹೆಸರು ಪ್ರಸಿದ್ಧಿ ಆಗುವ ಹಾಗೆ ರಾಜ ಸೂಯವನ್ನು ಮಾಡು! ನನ್ನ ಭುಜ ವೀರ್ಯಕ್ಕೆ ತಕ್ಕ ಹಾಗೆ ಉಂಟಾಗಿರುವ ಈ ಗಾಂಡೀವವೆಂಬ ಬಿಲ್ಲೂ, ಅಕ್ಷಯ ಬಾಣವುಳ್ಳ ಬತ್ತಳಿಕೆಯೂ, ದಿವ್ಯ ಬಾಣಗಳೂ, ದುರ್ಜಯವಾದ ರಥಾಶ್ವಗಳೂ, ಈ ಓಲಗದ ಚಾವಡಿಯೂ ಸಾರ್ಥಕವಾಗಲಿ! ಮತ್ತು ಪರಾಕ್ರಮಿಯಾದವನಿಗೆ ಒಳ್ಳೇ ಕುಲವೂ ರೂಪೂ ಗುಣವೂ ದ್ರವ್ಯವೂ ಉಂಟಾದರೆ, ಪ್ರಕಾಶಿಸುವದು. ಹೇಡಿಗೆ ಏನು ದೊರಕಿದರೂ ವ್ಯರ್ಥವಾ ಗುವದು. ಈ ರಾಜಸೂಯ ನಿಮಿತ್ತವಾಗಿ ಪರಾಕ್ರಮದಿಂದ ಮಗಧನನ್ನು ಮರ್ದಿಸಿ, ಶೆರೆಯಲ್ಲಿರುವ ಅರಸು ಮಕ್ಕಳನ್ನು ಕಾಪಾಡಿದರೆ, ಅದಕ್ಕಿಂತ ಹೆಚ್ಚಾದ ಹೊಗಳೂ ಧರ್ಮವೂ ಏನಿರುವದು? ಎಂದು ಹೇಳಿದನು.

ಹೀಗೆ ಶೌರ್ಯ ವಚನಗಳನ್ನು ನುಡಿದ ನರ ವೃಕೋದರರ ನುಡಿಗೆ ನಾರಾಯ ಣನು ಸಂತೋಷ ಪಟ್ಟು—ಅಯ್ಯಾ, ಪ್ರಪಂಚದಲ್ಲಿ ಮನುಷ್ಯನಿಗೆ ಬುದ್ಧಿಯೂ

ಧೈರ್ಯವೂ ಇದ್ದರೆ, ಪರೋಪಕಾರದಲ್ಲಿ ಮನವನ್ನಿಟ್ಟು, ಪರಾಕ್ರಮವನ್ನು ಮಾಡಿದರೆ, ಅದಕ್ಕೆ ದೈವವು ಸಹಾಯುವಾಗುವದು. ಆದ್ದರಿಂದ ನಾವು ಮೂರು ಮಂದಿಯೂ ವಿನಯದಿಂದಲೂ ಪರಾಕ್ರಮದಿಂದಲೂ ಸಾಹಸದಿಂದಲೂ ಜರಾಸಂಧನನ್ನು ತಗಲಿ, ಹೊಳೆಯು ತನ್ನ ವೇಗದಿಂದ ಮರವನ್ನು ಬೇರು ಸಹಿತ ಕೀಳುವ ಹಾಗೆ ಅವನನ್ನು ನಿರ್ಮೂಲನ ಮಾಡುವೆವು, ಅಂದನು. ಆಗ ಧರ್ಮರಾಯನು,—ಎಲೈ, ದನುಜ ಮರ್ದನನೇ, ನಿನಗೆ ಹಗೆಯಾದರೂ, ನಿನ್ನೊಡನೆ ಜಗಳವನ್ನು ಮಾಡಿ, ಬೆಂಕಿಯಲ್ಲಿ ಬಿದ್ದ ಮಿಡತೆಯ ಹಾಗೆ ಸುಟ್ಟು ಹೋಗದೆ ಬದುಕಿ ಸುಖದಿಂದ ಇರುವದಕ್ಕೆ, ಅಂಥಾ ಭುಜ ವಿಕ್ರಮವನ್ನು ಜರಾಸಂಧನು ಹ್ಯಾಗೆ ಪಡೆದನು? ಅವನ ಹುಟ್ಟುವಿಕೆ ಹ್ಯಾಗೆ? ನನಗೆ ಹೇಳ ಬೇಕೆಂದು ಕೇಳಲು; ಮುರಾರಿಯು,—ಕೇಳೈಯ್ಯಾ, ಯುಧಿಷ್ಠಿರನೇ, ಬೃಹದ್ರಥನೆಂಬ ಅವನ ತಂದೆಯು ಮಗಧ ದೇಶಕ್ಕೆ ಒಡೆಯನಾಗಿಯೂ, ಬಹು ಘಟ್ಟಿಗನಾಗಿಯೂ, ಮೂರಕ್ಷೋಹಿಣೀ ಬಲವುಳ್ಳವನಾಗಿಯೂ, ಶೀಮೆಯನ್ನು ಕಾಪಾಡುತ್ತಿದ್ದು, ಕಾಶೀ ರಾಜನ ಕುವರಿಗಳಾದ ಇಬ್ಬರು ಮಕ್ಕಳನ್ನು ಮದುವೆಯಾಗಿ, ಅತ್ಯಂತ ಸೌಖ್ಯವನ್ನು ಅನುಭವಿಸುತ್ತಾ, ಮಕ್ಕಳಿಲ್ಲದೆ, ಪುತ್ರಕಾಮೇಷ್ಟಿಯನ್ನು ಮಾಡಿಯೂ ಪಡೆಯದೆ, ಸಂತತಿ ಇಲ್ಲದ ಸಂಪತ್ತು ಹೆಣಕ್ಕೆ ತೊಡಿಸಿದ ಚಿನ್ನದ ಒಡವೆಯಂತೆ ವ್ಯರ್ಥವೆಂದು ಎಣಿಸಿ, ಸಕಲ ಸಂಪತ್ತುಗಳನ್ನು ಬಿಟ್ಟುಬಿಟ್ಟು, ಇಬ್ಬರು ಹೆಂಡರೊಡನೆ ಕೂಡಿ, ಕಾಡಿಗೆ ಹೋಗಿ, ಅಲ್ಲಿ ಮೋಕ್ಷದ ಅಪೇಕ್ಷೆಯಿಂದ, ಒಂದು ಮರದ ಕೆಳಗೆ ಉರಿಯುವ ಬೆಂಕಿಯಂತೆ ತೇಜೋವಂತನಾಗಿ, ತಪಸ್ಸು ಮಾಡುತ್ತಿರುವ ಗೌತಮ ಕುಲದಲ್ಲಿ ಹುಟ್ಟಿದ ಚಂಡಕೌಶಿಕನೆಂಬ ಮುನಿಯನ್ನು ನೋಡಿ, ಸಂತೋಷ ಪಟ್ಟು, ಬಹಳ ಭಯ ಭಕ್ತಿಯಿಂದ ಆತನನ್ನು ಅನೇಕ ದಿವಸಗಳ ಮಟ್ಟಿಗೂ, ಆಶ್ರೈಸಿ, ಸೇವೆಯನ್ನು ಮಾಡುತ್ತಾ ಬಂದನು. ಆ ಮುನೀಂದ್ರನು ರಾಯನ ಭಕ್ತಿಗೆ ಮೆಚ್ಚಿ,—ನಿನಗೆ ಬೇಕಾದದ್ದನ್ನು ಬೇಡಿಕೋ, ಕೊಡುವೆನೆಂದು ಹೇಳಲು; ಬೃಹದ್ರಥರಾಯನು ಸಾಷ್ಟಾಂಗ ವಂದನೆಯನ್ನು ಮಾಡಿ—ಜೀಯಾ, ಮುನೀಂದ್ರನೇ, ನನಗೆ ಸಮಸ್ತ ಸಂಪತ್ತುಗಳು ಉಂಟಾಗಿ, ಸಂತಾನದ ಸಮೃದ್ಧಿಯು ಇಲ್ಲದ್ದರಿಂದ ಎಲ್ಲಾ ವ್ಯರ್ಥವೆಂದು ತಿಳಿದು, ತಪಸ್ಸು ಮಾಡ ಬೇಕೆಂದು ಇಲ್ಲಿಗೆ ಬಂದೆನು. ನೀವು ನನಗೆ ಕನಿಕರದಿಂದ ಮಕ್ಕಳಾಗುವಂತೆ ಅನುಗ್ರಹಿಸಿದರೆ, ಕೃತಾರ್ಥನು ಆಗುವೆನೆಂದು, ಬೇಡಿ ಕೊಂಡನು.

ಆಗ ಮುನೀಂದ್ರನ ವರದಿಂದ ಅವನಿಗೆ ಒಬ್ಬ ಮಗನು ಹುಟ್ಟಲು; ಅವ

ನಿಗೆ ಜರಾಸಂಧನೆಂಬ ಹೆಸರಿಕ್ಕಿ, ಅವನನ್ನು ಬಹು ಪ್ರೀತಿಯಿಂದ ಕಾಪಾಡುತ್ತಾ ಬಂದನು. ಅವನು ಬಿದಿಗೇ ಚಂದ್ರನಂತೆ ದಿನ ದಿನಕ್ಕೆ ಹೆಚ್ಚಾಗಿ ಬೆಳೆಯುತ್ತಾ, ಬೇಸಿಗೆಯ ನಡು ಹಗಲ ಸೂರ್ಯನಂತೆ ತೇಜಃ ಪುಂಜನಾಗಿರಲು; ಚಂಡಕೌಶಿಕ ಮುನಿಯು ಆ ಪಟ್ಟಣಕ್ಕೆ ಬಂದು, ರಾಯನಿಂದ ಪೂಜಿತನಾಗಿ—ರಾಕ್ಷಸಿಯು ನಿನಗೆ ಮಾಡಿದ ಉಪಕಾರವನ್ನು ಜ್ಞಾನ ದೃಷ್ಟಿಯಿಂದ ತಿಳಿದೆನು. ಈ ಕುಮಾರನು ಶಿವನನ್ನು ಪ್ರತ್ಯಕ್ಷ ಮಾಡಿ ಕೊಂಡು, ಅಸ್ತ್ರಶಸ್ತ್ರಗಳಿಂದ ಹತನಾಗದಂತೆ, ವರವನ್ನು ಹೊಂದುವನು. ಇವನೊಡನೆ ಜಗಳಕ್ಕೆ ಬಂದ ಹಗೆಗಳು ಬೆಂಕಿಯಲ್ಲಿ ಬಿದ್ದ ಮಿಡತೆಗಳ ಹಾಗೆ ನಾಶವಾಗುವರು. ಗರುಡನ ಗತಿಯನ್ನು ಮಿಕ್ಕ ಹಕ್ಕಿಗಳು ಜೈಸದ ಹಾಗೆ, ದೇಶದ ಅರಸುಗಳೆಲ್ಲಾ ಇವನ ಶೌರ್ಯವನ್ನು ಗೆಲ್ಲಲಾರರು. ತೇಜೋವಂತರಲ್ಲಿ ಸೂರ್ಯನು ಹ್ಯಾಗೆ ಹೆಚ್ಚಾವನೋ, ಹಾಗೆ ಅರಸುಗಳಲ್ಲಿ ಇವನು ಹೆಚ್ಚಾಗುವನು. ಕೀಳು ಹೊಳೆಗಳು ಬೆಟ್ಟಗಳನ್ನು ಹ್ಯಾಗೆ ಭೇದಿಸಲಾರವೋ, ಹಾಗೆ ಎಲ್ಲಾ ದಿವ್ಯಾಯುಧಗಳು ಇವನ ಒಡಲನ್ನು ಭೇದಿಸಲಾರವು. ಎಲ್ಲಾ ಹೊಳೆಗಳು ಕಡಲಿನಲ್ಲಿ ಶೇರುವ ಹಾಗೆ, ಪರ ರಾಯರ ಸಂಪತ್ತುಗಳೆಲ್ಲಾ ಇವನಲ್ಲಿ ಶೇರುವವು ಎಂಬದಾಗಿ, ಮುಂದೆ ಬರುವ ಜರಾಸಂಧನ ಅಭಿವೃದ್ಧಿಯನ್ನು ಹೇಳಿ, ಹೊರಟು ಹೋದನು. ತರುವಾಯ ಬೃಹದ್ರಥರಾಯನು ಕೆಲವು ಕಾಲ ರಾಜ್ಯ ಭಾರವನ್ನು ಮಾಡಿ, ಪ್ರಾಯದವನಾದ ಮಗನಿಗೆ ಪಟ್ಟಾಭಿಷೇಕವನ್ನು ಮಾಡಿ, ತಾನು ರಾಣಿಗಳೊಡನೆ ತಪೋ ವನಕ್ಕೆ ಹೋದನು.

ಜರಾಸಂಧನು, ಮುನಿ ಅಪ್ಪಣೆ ಕೊಟ್ಟ ಹಾಗೆ, ಶಿವನನ್ನು ಪೂಜಿಸಿ, ಮೆಚ್ಚಿಸಿ, ವರಗಳನ್ನು ಪಡೆದು ಪರ ಚಕ್ರವರ್ತಿಗಳನ್ನೆಲ್ಲಾ ಜೈಸಿ, ಮಹಾ ದುಷ್ಟನಾಗಿದ್ದಾನೆ. ಇವನಿಗೆ ಸಹಾಯರಾಗಿದ್ದ ಹಂಸ ಡಿಬಕರನ್ನು ನಾನು ಭಿನ್ನ ತಂತ್ರದಿಂದ ಕೊಂದು ಹಾಕಿದ ಕಾರಣ, ಈಗ ಆ ದುಷ್ಟನು ರೆಕ್ಕೆಗಳಿಲ್ಲದ ಹಕ್ಕಿಯ ಹಾಗಿದ್ದಾನೆ. ಅವನು ಮಹಾ ಪಾಪಾತ್ಮನಾಗಿರುವದರಿಂದ, ಸತ್ಯವಂತನಾದ ನಿನಗೆ ಅವನನ್ನು ಜೈಸುವದು ಅಗಾಧವಲ್ಲ. ಈ ಅರ್ಜುನನ ಅಸ್ತ್ರ ಬಲವೂ ಭೀಮನ ಭುಜ ಬಲವೂ ನನ್ನ ನೀತಿಯ ಬಲವೂ ನಿನಗಿರುವಲ್ಲಿ, ಯಾವ ಕಾರ್ಯ ತಾನೇ ಅಸಾಧ್ಯವಾಗುವದು? ನನ್ನ ಮಾತಿನಲ್ಲಿ ನಂಬಿಕೆಯೂ ನನ್ನ ಭರವಸವೂ ನಿನಗೆ ಇದ್ದರೆ, ನನ್ನೊಡನೆ ಭೀಮಾರ್ಜುನರನ್ನು ಕಳುಹಿಸು, ಎಂದು ಹೇಳಿದನು. ಆಗ ಧರ್ಮರಾಯನು—ಎಲೈ, ಕೃಷ್ಣನೇ, ನನಗೆ ಭೀಮಾರ್ಜುನರಿಬ್ಬರು ಎರಡು ಕಣ್ಣುಗಳು; ನೀನು ನನ್ನ ಹೃದಯವು. ಈ

ಮೂರು ಮಂದಿಯನ್ನು ಬಿಟ್ಟು ಹ್ಯಾಗಿರಲಿ? ಎಂದು, ಇದೊಂದು ಆಲೋಚನೆಯೇ ಹೊರ್ತು, ಇನ್ನೊಂದು ಯೋಚನೆಯೂ ಇಲ್ಲ. ನೀನು ಸಹಾಯವಾಗಿರುವಲ್ಲಿ ಭೀಮಸೇನನು ಆ ಜರಾಸಂಧನನ್ನು ಜೈಸುವದು ಅತಿಶಯವೇನು? ಎಂದು ಹೇಳಿ, ಭೀಮಾರ್ಜುನರನ್ನು ಕರೆದು, ಕೃಷ್ಣನ ಕೈಯಲ್ಲಿ ಕೊಟ್ಟನು. ಆಗ ಇವರು ಮೂರು ಮಂದಿಯು ಯುಧಿಷ್ಠಿರನಿಗೆ ಅಡ್ಡ ಬಿದ್ದು, ಆತನ ಹರಕೆಯನ್ನು ಕೈ ಕೊಂಡು, ಹೊರಟು, ಬಹಳವಾದ ಬೆಟ್ಟ ಗುಡ್ಡಗಳನ್ನೂ, ಎಡೆ ಬಿಡದೆ ದಟ್ಟವಾಗಿ ಬೆಳೆದಿರುವ ಕಾಡುಗಳನ್ನೂ, ಹರಿಯುವ ಹೊಳೆ ಹಳ್ಳ ಕೊಳ್ಳಗಳನ್ನೂ ದಾಟಿ, ಸರಯೂ ನದಿಯನ್ನು ಹಾದು, ಪೂರ್ವ ಕೋಸಲ ಮಿಥಿಲಾ ದೇಶಗಳನ್ನು ಕಳೆದು, ಗಂಗಾ ನದಿಯನ್ನು ಅತಿಕ್ರಮಿಸಿ, ನಿತ್ಯ ಪ್ರಯಾಣಗಳಿಂದ ಮಗಧ ದೇಶವನ್ನು ಹೊಕ್ಕು, ಗೋರಥವೆಂಬ ಬೆಟ್ಟವನ್ನು ಏರಿ, ಗಿರಿವ್ರಜ ಪರ್ವತವನ್ನು ನೋಡಿ, ಅದರ ಅಪೂರ್ವವಾದ ಚಂದಕ್ಕೂ ಸಮೃದ್ಧಿಗೂ ಆಶ್ಚರ್ಯ ಪಟ್ಟು, ಭೀಮಾರ್ಜುನರೊಡನೆ ಕೃಷ್ಣನು—ಗೋರಥವೂ ಋಷಭವೂ ವೈಹಾರವೂ ಋಷಿಗಿರಿಯೂ ಚೈತ್ರಕಾದ್ರಿಯೂ ಎಂಬ ಐದು ಪರ್ವತಗಳು ಭಟರ ಹಾಗೆ ಈ ಪರ್ವತಕ್ಕೆ ಸುತ್ತಲು ಇರುವದರಿಂದ, ಈ ಪಟ್ಟಣಕ್ಕೆ ಗಿರಿವ್ರಜವೆಂದು ಹೆಸರಾಯಿತು. ಮೊದಲು ಈ ಸ್ಥಳದಲ್ಲಿ ಗೌತಮ ಮಹಾ ಮುನಿಯು ತನ್ನ ತಪೋ ಮಹಿಮೆಯಿಂದ ಹದಿನಾರು ಮಂದಿ ಋಷಿಗಳನ್ನು ಸೃಷ್ಟಿ ಮಾಡಿದನು. ಅವರ ಅನುಗ್ರಹದಿಂದಲೂ ಈ ದುರ್ಗದ ಬಲದಿಂದಲೂ, ಇಲ್ಲಿನ ಅರಸುಗಳನ್ನು ಯಾರೂ ಗೆಲ್ಲಲಾರರು ಎಂದು ಹೇಳುತ್ತ, ಬಾಗಿಲುಗಳಲ್ಲಿ ಹೊಗದೆ, ಚೈತ್ರ ಗಿರಿಯ ಶಿಖರವನ್ನು ಏರಿ, ಅಲ್ಲಿ ಇದ್ದ ಮೂರು ಭೇರಿಗಳನ್ನು ಕಂಡು—ಮೊದಲು ಮಾಗಧರು ಮಾನುಷಾದವೆಂಬ ಎತ್ತನ್ನು ಕೊಂದು, ಅದರ ಚರ್ಮದಿಂದ ಇವುಗಳನ್ನು ಮಾಡಿ ಇದ್ದಾರೆ. ಇವು ಋಷಿಗಳ ಮಹಿಮೆಯಿಂದ, ಈ ಪಟ್ಟಣಕ್ಕೆ ಹಗೆಗಳಾದವರು ಹೊಕ್ಕರೆ, ತಮ್ಮಿಂದ ತಾವೇ ಶಬ್ದಗಳನ್ನು ಮಾಡುವವು ಎಂದು ತಿಳಿಸಿ, ತರುವಾಯ ಮೂರು ಮಂದಿಯು ತಮ್ಮ ಘಟ್ಟಿಯಾದ ಮುಷ್ಟಿಗಳಿಂದ ಅವುಗಳನ್ನು ಒಡೆದು, ಅಲ್ಲಿನ ಬಾಗಿಲಲ್ಲಿ ಊರೊಳಗೆ ಬಂದು, ಹೂವಾಡಿಗನ ಮನೆಗೂ ಗಂಧಿಗನ ಮನೆಗೂ ನುಗ್ಗಿ, ಬಲಾತ್ಕಾರದಿಂದ ಹೂವಿನ ಮಾಲಿಕೆಗಳನ್ನೂ ಪರಿಮಳ ದ್ರವ್ಯಗಳನ್ನೂ ತೆಗೆದು ಕೊಂಡು, ಅಲಂಕರಿಸಿ ಕೊಂಡು, ರಾಜ ಬೀದಿಯಲ್ಲಿ ಬಂದು, ಯಾವಾಗಲೂ ಬ್ರಾಹ್ಮಣರು ಹೊಗುವದಕ್ಕೆ ಸುಲಭವಾದ ಜರಾಸಂಧನ ಮಂದಿರದ ಗೋವಾಸವನ್ನು, ಸಿಂಹಗಳು ಹಿಮವತ್ಪರ್ವತದ ಗುಹೆಯನ್ನು ಹೊಗುವ ಹಾಗೆ, ಬ್ರಾಹ್ಮಣ ವೇಷಗಳಿಂದ ಹೊಕ್ಕರು.

ಆಗ ಅರ್ಧ ರಾತ್ರಿಯಲ್ಲಿಯಾದರೂ ಅಭ್ಯಾಗತರಾಗಿ ಬ್ರಾಹ್ಮಣರು ಬಂದರೆ,
ಆ ಕ್ಷಣದಲ್ಲಿಯೇ ಎದುರ್ಗೊಂಡು ಹೋಗಿ, ಪೂಜೆಯನ್ನು ಮಾಡುವಂಥ
ಪದ್ಧತಿಯನ್ನು ಮಾಡಿರುವ ಜರಾಸಂಧನು ಈ ಮೂರು ಮಂದಿಯನ್ನು ಬ್ರಾಹ್ಮ
ಣರೆಂದೇ ತಿಳಿದು, ಎದುರಾಗಿ ಬಂದು, ಸಂತೋಷದಿಂದ ಪೂಜೆಗಳನ್ನು
ಮಾಡಲು; ಅವುಗಳನ್ನು ಕೈ ಕೊಳ್ಳದೆ, ಗರ್ವದಿಂದ ನಿಂತಿರುವವರನ್ನು ನೋಡಿ,
ಕಪಟಿಗಳೆಂದು ತಿಳಿದು, ಇವರನ್ನು ಕುರಿತು—ಐಯ್ಯಾ, ನೀವು ಸ್ನಾತಕರಾ
ಗಿದ್ದರೆ, ಬಲ್ಮೆಯಿಂದ ಹೂಗಂಧಗಳನ್ನು ತೆಗೆದು ಕೊಂಡು, ಹೊಗುವದಕ್ಕೆ
ಆಟಂಕವಾದ ಬಾಗಿಲಲ್ಲಿ ಬಂದು, ನನಗೆ ಅಪಕಾರವನ್ನು ಮಾಡಿದ್ದಲ್ಲದೆ,
ನಾನು ಮಾಡುವ ಪೂಜೆಯನ್ನು ಕೈ ಕೊಳ್ಳದೆ ಇರುವದೇನು? ನೀವು ವೇಷ
ಧಾರಿಗಳಾಗಿರುವಿರಿ. ನಿಮ್ಮಲ್ಲಿ ವೇಷದಿಂದ ಬ್ರಾಹ್ಮಣತ್ವವೂ, ಉದ್ದವಾಗಿ
ಯೂ ದಪ್ಪವಾಗಿಯೂ ಇರುವ ತೋಳುಗಳೂ, ಅಗಲವಾದ ಎದೆಗಳೂ, ರಾಜ
ಲಕ್ಷಣಗಳೂ ಉಳ್ಳದ್ದರಿಂದ, ಕ್ಷತ್ರಿಯತ್ವವೂ ಇರುವ ಹಾಗೆ ತೋರುತ್ತದೆ
ಎಂದು ಹೇಳಿದನು. ಅದಕ್ಕೆ ಕೃಷ್ಣನು,—ಎಲೈ, ಅರಸೇ, ನಾವು ಕ್ಷತ್ರಿಯ
ಜಾತಿಯ ಸ್ನಾತಕರಾಗಿರುವೆವು. ಮತ್ತು ಆಟಂಕವಾದ ಬಾಗಿಲಲ್ಲಿ ಹೊಗು
ವದು ಹಗೆಗಳ ಮನೆಗೆ ಬರುವ ಬಾಹು ವೀರ್ಯ ಸಂಪನ್ನರಾದ ಕ್ಷತ್ರಿಯರಿಗೆ
ಧರ್ಮವು. ಹೂಗಂಧಗಳಲ್ಲಿ ಲಕ್ಷ್ಮಿ ಇರುವ ಕಾರಣ, ಅವುಗಳನ್ನು ಬಲ್ಮೆ
ಯಿಂದ ತೆಗೆದು ಕೊಂಡೆವು. ನಿನ್ನಲ್ಲಿ ನಮಗೆ ಬೇರೆ ಕೆಲಸವಿರುವದರಿಂದ,
ಈಗ ನೀನು ಮಾಡುವ ಪೂಜೆಗಳನ್ನು ಕೈ ಕೊಳ್ಳದೆ ಬಿಟ್ಟೆವು, ಎಂದು
ಹೇಳಿದನು.

ಅದನ್ನು ಕೇಳಿ, ಜರಾಸಂಧನು—ನೀವು ನನಗೂ ನಾನು ನಿಮಗೂ, ಎಂದಿ
ಗೂ ದ್ರೋಹಾ ಮಾಡಿದ್ದಿಲ್ಲ. ಸುಮ್ಮನೆ ನಿಮಗೂ ನನಗೂ ಹಗೆತನವು ಹ್ಯಾಗೆ
ಆಯಿತು? ಮತ್ತು ನಾನು ದೇವತೆಗಳಿಗೂ ಮುನಿಗಳಿಗೂ ಬ್ರಾಹ್ಮಣರಿಗೂ
ಭಕ್ತನಾಗಿ, ಉತ್ತಮವಾದ ಕ್ಷತ್ರಿಯ ಕುಲಾಚಾರದವನಾಗಿ ಇದ್ದೇನೆ, ಎಂದು
ಹೇಳಿದನು. ಅದಕ್ಕೆ ಕೃಷ್ಣನು—ಐಯ್ಯಾ, ನಾವು ಈಗ, ತನ್ನ ಹೆಚ್ಚಾಗಿ ಬಾಳು
ವಿಕೆಗೆ ಎಲ್ಲಾ ನೃಪ ಕುಲದವರನ್ನು ಪಾಪ ಬುದ್ಧಿಯಿಂದ ದಿನಚರಿಯಲ್ಲಿಯೂ
ಕೊಲ್ಲುವ ದುಷ್ಟನನ್ನು ಕೊಲ್ಲುವದಕ್ಕೆ ಬಂದೆವು. ನೀನು ಬಹಳ ಉತ್ತಮ
ಕ್ಷತ್ರಿಯನೆಂದು, ಹೇಳಿ ಕೊಂಡೆಯಲ್ಲ! ನಿನ್ನ ಪ್ರಯೋಜನಕ್ಕೋಸ್ಕರ ಉತ್ತ
ಮರಾದ ಅರಸು ಮಕ್ಕಳನ್ನು ಹಿಡಿದು, ಶೆರೆಯಲ್ಲಿ ಹಾಕಿ, ದಿನವಹಿ ಭೈರವ
ನಿಗೆ ನರ ಬಲಿಯನ್ನು ಕೊಡುವ ನಿನ್ನ ಹಾಗೆ ಹಿಂದೆ ಯಾರಾದರೂ ಅರಸುಗಳು

ಮಾಡಿದರೇ? ಇದಕ್ಕಿಂತಲೂ ಹೆಚ್ಚಾದ ಪಾಪ ಉಂಟೇ? ಈ ಪ್ರಕಾರ ಪಾಪಾಚರಣೆಯಿಂದ ಭೈರವ ಪೂಜೆಯನ್ನು ಮಾಡಿದರೆ, ಸದ್ಗತಿಯನ್ನು ಹೊಂದಲಾರಿ. ಆದಕಾರಣ ನಿನಗೆ ಬುದ್ಧಿ ಇದ್ದರೆ, ನನ್ನ ಮಾತಿನ ಪ್ರಕಾರ ಬೇಗ ಶೆರೆಯಲ್ಲಿ ನೀನು ಇಟ್ಟಿರುವ ಅರಸು ಮಕ್ಕಳನ್ನು ಬಿಟ್ಟು, ಕಳುಹಿಸು. ನಾನು ಕೃಷ್ಣನು. ಇವನು ಭೀಮನು. ಈತನು ಅರ್ಜುನನು. ಇದರ ಮೇಲೂ ನೀನು ಮೂರ್ಖನಾಗಿ ಅರಸುಗಳನ್ನು ಬಿಡದೆ ಇದ್ದರೆ, ಈ ಕ್ಷಣದಲ್ಲಿಯೇ ಈ ಪಾಂಡವರು ನಿನ್ನನ್ನು ಕೊಂದು, ಅವರನ್ನು ಬಿಡಿಸುವರು, ಎಂದು ಹೇಳಿದನು.

ಆ ಮಾತನ್ನು ಕೇಳಿ, ಜರಾಸಂಧನು ಹಸಿದ ಹುಲಿಯಂತೆ ರೌದ್ರಾಕಾರನಾಗಿ—ಎಲೈ, ಕೃಷ್ಣನೇ, ನನ್ನನ್ನು ನೀನು ಮೊದಲು ಕಂಡು ಇಲ್ಲವು. ಕ್ಷತ್ರಿಯನಾಗಿ ಹುಟ್ಟಿದವನಿಗೆ, ಸಕಲ ಅರಸುಗಳನ್ನು ಗೆದ್ದು ಪ್ರಸಿದ್ಧನಾಗುವದು ಧರ್ಮವೇ. ದೇವತಾ ನಿಮಿತ್ಯವಾಗಿ ನಾನು ಹಿಡಿತಂದು ಇರುವ ಅರಸುಗಳನ್ನು ನಾನು ಬಿಡುವದಿಲ್ಲ. ಸನ್ನದ್ಧರಾಗಿ ನಿಮ್ಮ ಸೇನೆಯೂ ನಮ್ಮ ಸೇನೆಯೂ ಕೂಡಿ, ಜಗಳವನ್ನು ಮಾಡ ಬೇಕೋ? ಇಲ್ಲವೆ ನೀವು ಮೂವರ ಸಂಗಡಾಗಲಿ, ಒಬ್ಬನ ಸಂಗಡಲಾಗಲಿ, ಯುದ್ಧವನ್ನು ಮಾಡ ಬೇಕೋ? ನಿಮಗೆ ಪ್ರೀತಿ ಇದ್ದ ಮೇರೆ ಯುದ್ಧಕ್ಕೆ ಬರುವೆನು, ಎಂದು ಹೇಳಲು; ಕೃಷ್ಣನು ನಕ್ಕು, ಒಬ್ಬನೊಡನೆ ಮೂರು ಮಂದಿಯು ಕಾದುವದು ನ್ಯಾಯವಲ್ಲ. ನಾವು ಮೂವರಲ್ಲಿ ನೀನು ಒಬ್ಬನನ್ನು ಅಪೇಕ್ಷಿಸಿದರೆ, ಅವನು ಮಲ್ಲ ಯುದ್ಧವನ್ನು ಮಾಡಿ, ನಿನ್ನನ್ನು ಗೆಲ್ಲುವನೆಂದು ಹೇಳಿದನು. ಜರಾಸಂಧನು ಗರ್ವದಿಂದ—ಭೀಮಸೇನನೊಡನೆ ಮಲ್ಲ ಯುದ್ಧವನ್ನು ಮಾಡುವೆನು ಎಂದು ಹೇಳಿ, ತನ್ನ ಮಗನಾದ ಸಹದೇವನಿಗೆ ತನ್ನ ರಾಜ್ಯದ ಪಟ್ಟಾಭಿಷೇಕವನ್ನು ಮಾಡಿ, ಯುದ್ಧ ರಂಗ ಸ್ಥಳದಲ್ಲಿ ಬಂದು ನಿಂತನು. ಆಗ ಭೀಮಸೇನನು ಬಂದು, ಎದುರಾಗಿ ನಿಂತನು. ಆಗ ಇಬ್ಬರು ತೋಳುಗಳನ್ನು ತಟ್ಟಿ ಕೊಂಡು, ಒಬ್ಬರೊಬ್ಬರು ತಗಲಿ, ಹದಿನೈದು ದಿವಸ ಜಗಳವನ್ನು ಮಾಡುತ್ತಿರುವಲ್ಲಿ, ಭೀಮಸೇನನು ತನ್ನ ತಂದೆಯಾದ ವಾಯುವನ್ನು ನೆನೆದು, ಕೃಷ್ಣನ ಅನುಗ್ರಹದಿಂದ ಬಹು ಸಾಹಸವನ್ನು ಮಾಡಿ, ಜರಾಸಂಧನನ್ನು ಹಿಡಿದು ಕೊಂಡು, ಮೇಲಕ್ಕೆ ಎತ್ತಿ, ಮೂಗಿನಲ್ಲಿಯೂ ಬಾಯಿಯಲ್ಲಿಯೂ ಕಿವಿಗಳ ಕನ್ನಗಳಲ್ಲಿಯೂ ರಕ್ತ ಧಾರೆಗಳು ಸುರಿಯುವ ಹಾಗೆ ಚಕ್ರಾಕಾರವಾಗಿ ತಿರುವಿ, ಭೂಮಿಯಲ್ಲಿ ಬಡಿದು, ಅಂಗಾಂಗಗಳನ್ನು ಮುರಿದು, ಕಾಲುಗಳಿಂದ ಭೂಮಿಯಲ್ಲಿ ಅರೆದು, ಕೊಂದು ಹಾಕಿದನು.

ಆಗ ಕೃಷ್ಣನು ಆತನ ಮಗನಾದ ಸಹದೇವನಿಗೆ ಅಭಯ ದಾನವನ್ನು

ಮಾಡಿ, ಜರಾಸಂಧನು ಶೆರೆಯಲ್ಲಿ ಹಾಕಿದ್ದ ಆ ಧೊರೆಗಳನ್ನೆಲ್ಲಾ ಬಿಡಿಸಿ–ನೀವು ಚಕ್ರವರ್ತಿಯಾದ ಧರ್ಮರಾಯನ ರಾಜಸೂಯ ಯಾಗಕ್ಕೆ ನಿಮ್ಮಲ್ಲಿರುವ ವಸ್ತುಗಳನ್ನು ತೆಗೆದು ಕೊಂಡು ಬರುವದೆಂದು ಕಟ್ಟು ಮಾಡಿ, ನಿಮ್ಮ ನಿಮ್ಮ ಪಟ್ಟಣಕ್ಕೆ ಹೋಗಿರಿ ಎಂದು, ಅಪ್ಪಣೆ ಕೊಟ್ಟು, ಕಳುಹಿಸಿದನು. ಆ ಮೇಲೆ ಜರಾಸಂಧನ ಮಗನಾದ ಸಹದೇವನು ಕೊಟ್ಟ ಕೈ ಗಾಣಿಕೆಗಳನ್ನು ತೆಗೆದು ಕೊಂಡು, ಆತನಿಗೂ ಧರ್ಮರಾಯನ ಯಜ್ಞಕ್ಕೆ ಬರುವಂತೆ ಅಪ್ಪಣೆ ಕೊಟ್ಟು, ಆ ಜರಾಸಂಧನ ರಥವನ್ನು ತೆಗೆದು ಕೊಂಡು, ಗರುಡನನ್ನು ನೆನಸಿ, ಕರತರಿಸಿ, ಅವನನ್ನು ಸಾರಥ್ಯದಲ್ಲಿ ನಿಯೋಗಿಸಿ, ಭೀಮಾರ್ಜುನರು ಸಹಿತವಾಗಿ ಇಂದ್ರಪ್ರಸ್ಥಕ್ಕೆ ಬಂದು, ಧರ್ಮರಾಯನನ್ನು ಕಂಡು, ಕೃಷ್ಣನು ಮೂರು ದಿವಸ ಅಲ್ಲಿ ಇದ್ದು, ಧರ್ಮರಾಯನ ಅಪ್ಪಣೆಯನ್ನು ತೆಗೆದು ಕೊಂಡು, ಅಲ್ಲಿಂದ ಹೊರಟು, ದ್ವಾರಕಾ ಪಟ್ಟಣಕ್ಕೆ ಬಂದು, ಜರಾಸಂಧನನ್ನು ಕೊಂದು ಹಾಕಿದ ಸುದ್ದಿಯನ್ನು ತನ್ನವರಿಗೆಲ್ಲಾ ಹೇಳಲು; ಅವರೆಲ್ಲರು ಸಂತೋಷ ಪಟ್ಟರು.

ಇತ್ತಲಾ ಧರ್ಮರಾಯನು ಮೂಡಣ ದಿಕ್ಕಿಗೆ ಭೀಮಸೇನನನ್ನು, ಬಡಗಣ ದಿಕ್ಕಿಗೆ ಅರ್ಜುನನನ್ನು, ಪಡುವಣ ದಿಕ್ಕಿಗೆ ನಕುಲನನ್ನು, ತೆಂಕಣ ದಿಕ್ಕಿಗೆ ಸಹದೇವನನ್ನು, ಕಳುಹಿಸಲು; ಆ ನಾಲ್ಕು ಮಂದಿಯೂ ಸಕಲ ಸೇನಾ ಸಮೇತರಾಗಿ, ತಮಗೆ ಕಟ್ಟು ಮಾಡಿದ ದಿಕ್ಕುಗಳಿಗೆ ಹೋಗಿ, ಆಯಾಯ ದಿಕ್ಕಿನ ಅರಸುಗಳನ್ನು ಗೆದ್ದು, ಅನೇಕ ದ್ರವ್ಯ ವಸ್ತು ವಾಹನ ಮೊದಲಾದವುಗಳನ್ನು ಅವರುಗಳಿಂದ ಕಪ್ಪವಾಗಿ ತೆಗೆದು ಕೊಂಡು, ತಿರಿಗಿ ಇಂದ್ರಪ್ರಸ್ಥಕ್ಕೆ ಬಂದು, ತಾವು ತಾವು ತಂದ ಮಿತಿ ಇಲ್ಲದ ಧನ ಕನಕಾದಿ ಸಮಸ್ತ ಪದಾರ್ಥಗಳನ್ನು ಒಪ್ಪಿಸಲು; ಆ ಬಳಿಕ ಕಪ್ಪದ ಪದಾರ್ಥಗಳಿಂದ ಇಂದ್ರಪ್ರಸ್ಥ ಪಟ್ಟಣವೆಲ್ಲಾ ತುಂಬಿ ಹೋಯಿತು.

ಆಗ ದ್ವಾರಕಾ ಪಟ್ಟಣದಿಂದ ಶ್ರೀ ಕೃಷ್ಣನು ವಸುದೇವ ಬಲರಾಮ ಅಕ್ರೂರ ಸಾತ್ಯಕಿ ಮೊದಲಾದ ಬಂಧುಗಳೊಡನೆಯೂ, ದೇವಕೀ ರೋಹಿಣಿ ರುಕ್ಮಿಣಿ ಸತ್ಯಭಾಮೆ ಮೊದಲಾದ ರಾಣಿವಾಸಗಳೊಡನೆಯೂ ಬಂದು, ಬಹಳ ಧನ ಕನಕ ರತ್ನ ವಸ್ತು ವಾಹನಾದಿಗಳನ್ನು ಧರ್ಮರಾಯನಿಗೆ ಒಪ್ಪಿಸಿ, ಆತನಿಂದ ಪೂಜಿತನಾದನು. ಹಾಗೆಯೇ ಸಕಲ ದೇಶದ ಅರಸುಗಳು ಬಂದು, ಅಪರಿಮಿತವಾದ ಕಪ್ಪ ಕಾಣಿಕೆಗಳನ್ನು ಧರ್ಮರಾಯನಿಗೆ ಒಪ್ಪಿಸಿ, ಆತನಿಂದ ಪೂಜಿತರಾಗಿ, ಆತನು ಮಾಡಿಸಿ ಕೊಟ್ಟ ಬಿಡಾರಗಳಲ್ಲಿ ಇಳಿದು ಕೊಂಡರು. ಆ ಮೇಲೆ ಧರ್ಮರಾಯನು ಕೃಷ್ಣನ ಸಮೀಪಕ್ಕೆ ಬಂದು,–ನಿನ್ನ ಕಟಾಕ್ಷ

ದಿಂದ ನನ್ನ ತಮ್ಮಂದಿರು ಸಕಲ ದೇಶಗಳನ್ನು ಜೈಸಿ, ಕಪ್ಪಗಳನ್ನು ತೆಗೆದು ಕೊಂಡು ಬಂದರು. ಇನ್ನು ನನಗೆ ರಾಜಸೂಯ ಯಾಗವನ್ನು ಮಾಡುವ ದಕ್ಕೆ ಅಪ್ಪಣೆ ಕೊಡು ಎಂದು ಬಿನ್ನವಿಸಿ, ಆತನ ಅಪ್ಪಣೇ ಪ್ರಕಾರ ಯಜ್ಞಾ ವನ್ನು ಮಾಡಲಾರಂಭಿಸಿ, ಸಹದೇವನನ್ನು ಕರೆದು,–ನೀನು ನಮ್ಮ ಪುರೋ ಹಿತರಾದ ಧೌಮ್ಯರು ಹೇಳಿದ ಪ್ರಕಾರ ಯಜ್ಞ ಸಾಧನಗಳಾದ ಸಾಮಗ್ರಿಗ ಳನ್ನೂ, ಶಿಲ್ಪಿಗಳನ್ನೂ, ಇನ್ನು ಇವರಲ್ಲದೆ ಅವರು ಹೇಳಿದ್ದ ಕೆಲಸಗಳನ್ನೆಲ್ಲಾ ಸಿದ್ಧ ಪಡಿಸಿ ಕೊಡುವ ಹಾಗೆ, ಇಂದ್ರಸೇನ ಮೊದಲಾದವರನ್ನೂ ಅರ್ಜುನನ ಸಾರಥಿಯಾದ ರುಕ್ಮನನ್ನೂ ನಿಯೋಗಿಸು. ಯಜ್ಞಶಾಲೆಯ ಸುತ್ತಲು, ನಾನಾ ದೇಶದಿಂದ ಬಂದಿರುವ ಅರಸುಗಳಿಗೆ ಮನೆಗಳನ್ನು ಸಿದ್ಧಾ ಮಾಡಿಸು. ಸಕಲ ಭೂಮಂಡಲಗಳಲ್ಲಿರುವ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿ ಸಕಲ ಜಾತಿ ಯವರನ್ನು ಕರಿಸೆಂದು, ಅಪ್ಪಣೆ ಕೊಡಿಸಿದನು. ಸಹದೇವನು ಆ ಪ್ರಕಾರ ಇಂದ್ರಸೇನಾದಿಗಳನ್ನೂ ಅನೇಕ ಶಿಲ್ಪಿಗಳನ್ನೂ ನಿಯೋಗಿಸಿದನು. ಅವರು ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಎಲ್ಲರ ಕಣ್ಣಿಗೂ ಚೆಲುವಾಗಿರುವಂತೆ ಯಜ್ಞಾ ಶಾಲೆಯನ್ನು ನಿರ್ಮಿಸಿ, ಅದರೊಳಗೆ ಎಲ್ಲಾ ಯಜ್ಞದ ಸಾಮಗ್ರಿಗಳನ್ನು ತಂದು, ಒಟ್ಟಿ, ಆ ಶಾಲೆಯ ಸುತ್ತಲು ಬಹಳ ಮನೆಗಳನ್ನು ಚೆಲುವಾಗಿ ಕಲ್ಪಿಸಿ, ಅವು ಗಳಲ್ಲಿ ಎಲ್ಲಾ ಸಂಭಾರಗಳನ್ನು ತುಂಬಿ, ಮತ್ತು ಇಂದ್ರಪ್ರಸ್ಥ ಪುರದ ಸುತ್ತು ಮುತ್ತಲು ಬಹು ವಿಧವಾದ ನೋಟದ ಮನೆಗಳನ್ನೂ ಹೂದೋಟಗಳನ್ನೂ ಭಾವಿಗಳನ್ನೂ ಕೊಳಗಳನ್ನೂ ಕಲ್ಪಿಸಿದರು. ಮತ್ತು ಹೆಂಡತಿ ಮಕ್ಕಳೂ, ಅಣ್ಣ ತಮ್ಮಂದಿರೂ, ನಂಟ ಇಷ್ಟರೂ, ಪರಿವಾರ ಜನರೂ ಮೊದಲಾದವರನ್ನು ಕೂಡಿ ಬಂದಿರುವ ನಾನಾ ದೇಶಗಳ ಅರಸುಗಳೂ, ಸಮುದ್ರದ ದ್ವೀಪದಲ್ಲಿ ಇರುವ ಅರಸುಗಳೂ, ಹಿಮವತ್ಪರ್ವತದಲ್ಲಿರುವ ಹದಿನಾರು ಮಂದಿ ಅರಸು ಗಳೂ ಮೊದಲ್ಗೊಂಡು ನಾಲ್ಕು ಸಮುದ್ರಗಳಿಂದ ಕೂಡಿರುವ ಭೂಮಂಡಲದ ಭೂಪತಿಗಳೆಲ್ಲರೂ, ಎಲ್ಲಾ ವೇದ ವೇದಾಂಗ ಪಾರಂಗತರಾದ ಬ್ರಾಹ್ಮಣರೂ, ಕೋಮಟಿಗರೂ, ಶೂದ್ರರೂ ಮೊದಲಾದ ಸರ್ವರಿಗೂ ಮನೆಗಳನ್ನು ಕಲ್ಪಿಸಿ, ಆಯಾಯ ಮನೆಗಳಲ್ಲಿ ಸಕಲ ಸಾಮಗ್ರಿಗಳನ್ನು ತುಂಬಿಸಿ, ಹೇಳಿದ ಕೆಲಸವನ್ನು ಮಾಡುವದಕ್ಕೆ ದಾಸ ದಾಸೀ ಜನಗಳನ್ನು ನೇಮಿಸಿ ಇಟ್ಟು, ಅವರವರ ಯೋಗ್ಯತಾನುಸಾರವಾಗಿ ಆಯಾಯ ಮನೆಗಳಲ್ಲಿ ಇಳಿಸಿ, ಪರಾಂಬರಿಕೆ ತೆಗೆದು ಕೊಳ್ಳುತ್ತಾ ಬಂದನು.

ಆ ಬಳಿಕ ಧರ್ಮರಾಯನು ಭೀಷ್ಮಾದಿ ತನ್ನ ಬಂಧು ಜನಗಳನ್ನು ಕರೆದು,

ಕೊಂಡು ಬರುವದಕ್ಕೆ ನಕುಲನನ್ನು ಕಳುಹಿಸಿದನು. ಆಗ ರಾಜಸೂಯ ಯಾಗವನ್ನು ನೋಡ ಬೇಕೆಂಬ ಆಶೆಯಿಂದ ಬೇಕಾದಷ್ಟು ಧನಗಳನ್ನು ತೆಗೆದು ಕೊಂಡು, ಹಸ್ತಿನಾವತಿಯಿಂದ ಇಂದ್ರಪ್ರಸ್ಥ ಪಟ್ಟಣಕ್ಕೆ ಬಂದ ಭೀಷ್ಮ, ಧೃತರಾಷ್ಟ್ರ, ವಿದುರ, ದ್ರೋಣ, ಕೃಪ, ಅಶ್ವತ್ಥಾಮ, ಬಾಹ್ಲೀಕ, ಸೋಮದತ್ತ, ಭೂರಿಶ್ರವ, ಶಕುನಿ, ಸೈಂಧವ, ದುರ್ಯೋಧನ, ದುಶ್ಶಾಸನ, ಮೊದಲಾದವರನ್ನು ಧರ್ಮರಾಯನು ಬಹಳ ಪ್ರೀತಿ ಮರ್ಯಾದೆಗಳಿಂದ ಪೂಜಿಸಿ—ನಿಮ್ಮ ಸಹಾಯ ದಿಂದ ಈ ಮಹಾ ಯಜ್ಞವನ್ನು ಮಾಡಲಾರಂಭಿಸಿದ್ದೇನೆ. ನೀವೆಲ್ಲರು ಈ ಭಾರವನ್ನು ಹೊತ್ತು, ಕೊಂಚವಾದರೂ ನ್ಯೂನತೆ ಇಲ್ಲದ ಹಾಗೆ ತಡೆ ಇಲ್ಲದೆ ಈ ಕೆಲಸವನ್ನು ನೆರವೇರಿಸ ಬೇಕೆಂದು, ಬೇಡಿ ಕೊಂಡು, ಆ ಮೇಲೆ ಕೃಷ ನ ಅನುಮತಿಯಿಂದ ಚಿನ್ನ ಬೆಳ್ಳಿ ರತ್ನಗಳ ಕೊಡುವ ಕೆಲಸದಲ್ಲಿ ಕೃಪಾ ಚಾರ್ಯ ಕೃತವರ್ಮರನ್ನು,—ಇದು ಆಯಿತು, ಇದು ಆಗಲಿಲ್ಲವೆಂದು ವಿಚಾರಿಸಿ ಕೊಳ್ಳುವ ಕೆಲಸದಲ್ಲಿ ಭೀಷ್ಮ ದ್ರೋಣರನ್ನು,—ನವಧಾನ್ಯಗಳ ಒದಗಿಸುವದು ಉಚಿತವಾಗಿ ವೆಚ್ಚ ಮಾಡುವದು, ಈ ಕೆಲಸದಲ್ಲಿ ವಿದುರನನ್ನು—ನಾನಾ ದೇಶದಿಂದ ಬಂದ ಅರಸುಗಳು ತಂದ ಧನ ಕನಕ ವಸ್ತು ವಾಹನಗಳನ್ನು ಉಚಿತವಾದ ಸ್ಥಳಗಳಲ್ಲಿ ಶೇರಿಸಿ, ಇಡಿಸಿ, ಪ್ರಕೃತವಿದ್ದ ಹಾಗೆ ವೆಚ್ಚ ಮಾಡುವ ಕಾರ್ಯದಲ್ಲಿ ಕೌರವನನ್ನೂ,—ಭಕ್ಷ್ಯ ಭೋಜ್ಯ ವಿನಿಯೋಗ ಮಾಡಿಸ ದುಶ್ಶಾಸನನನ್ನೂ ನಿಯೋಗಿಸಿ, ಯಜ್ಞಕ್ಕೆ ದೀಕ್ಷಿತನಾಗಿ, ಬ್ರಾಹ್ಮಣ ಜ್ಞಾತಿ ಗಳ ಗುಂಪಿನೊಡನೆ ಮಹದೈಶ್ವರ್ಯದಿಂದ ಯಜ್ಞಶಾಲೆಯನ್ನು ಹೊಕ್ಕನು.

ಆ ಯಜ್ಞ ಶಾಲೆಯಲ್ಲಿ ವೇದ ಘೋಷಗಳಿಂದಲೂ ಬ್ರಾಹ್ಮಣರ ಆಶೀ ರ್ವಾದ ಧ್ವನಿಗಳಿಂದಲೂ, ಅನೇಕವಾದ ವಾದ್ಯಗಳ ನಾದಗಳಿಂದಲೂ, ಒಬ್ಬರ ಮಾತು ಮತ್ತೊಬ್ಬರು ತಿಳಿಯದ ಹಾಗೆ ಇತ್ತು. ಆ ಸಮಯದಲ್ಲಿ ವೇದ ಮೂರ್ತಿಗಳಾದ ಪೈಲ ಧೌಮ್ಯರು ಹೊರತಾಗಿ, ಯಾಜ್ಞವಲ್ಕ್ಯ ಋಷಿಯು ಅಧ್ವರ್ಯನಾಗಿಯೂ, ದ್ವೈಪಾಯನನು ಬ್ರಹ್ಮನಾಗಿಯೂ, ಸುನಾಮನು ಉದ್ಗಾತೃವಾಗಿಯೂ, ಮಿಕ್ಕ ಮಹಾ ಮುನಿಗಳೆಲ್ಲಾ ಬ್ರಾಹ್ಮಣ್ಯರಾಗಿಯೂ, ನಾರದಾದಿ ಮಹಾ ಮುನೀಂದ್ರರು ಸದಸ್ಯರಾಗಿಯೂ, ಭೀಷ್ಮಾದಿ ರಾಜ ಋಷಿ ಗಳು ಸಭಾಸದರಾಗಿಯೂ, ಕುಳಿತು ಕೊಂಡು, ಆ ಮಹಾ ಯಜ್ಞವು ಮಂತ್ರಲೋಪ ಕ್ರಿಯಾಲೋಪ ಮೊದಲಾದವುಗಳು ಸ್ವಲ್ಪವಾದರೂ ಉಂಟಾ ಗದೆ, ಸಕಲ ಜನ ಸಮ್ಮತಿಯಿಂದ ನಿರ್ವಿಘ್ನವಾಗಿ ಬೆಳೆಯಿತು.

ಆಗ ಯಜ್ಞದಲ್ಲಿ, ಅಗ್ನಿ ಮುಖದಲ್ಲಿ ವಿಸ್ತಾರವಾದ ಮಂತ್ರಾಹುತಿಗಳಿಂದ

ಸಕಲ ದೇವತೆಗಳೂ, ಸಂಪೂರ್ಣವಾದ ದಕ್ಷಿಣೆಗಳ ಕೊಡುವಿಕೆಯಿಂದ ಬ್ರಾಹ್ಮಣರೂ, ಯೋಗ್ಯವಾದ ಮನ್ನಣೆಗಳಿಂದ ಎಲ್ಲಾ ಅರಸುಗಳೂ, ಇಷ್ಟವಾದ ಭೋಜನ ವಸ್ತ್ರಾಭರಣಗಳು ಮೊದಲಾದವುಗಳಿಂದ ಭೂಮಿಯ ಪ್ರಜೆಗಳೂ, ಬೇಡಿದ ವಸ್ತುಗಳ ಕೊಡುವಿಕೆಯಿಂದ ಸಕಲ ಯಾಚಕರೂ ದಣಿದರು. ಮತ್ತು ಧರ್ಮರಾಯನು, ಯಜ್ಞವನ್ನು ಮಾಡಿಸುವದಕ್ಕೆ ನೇಮಕರಾಗಿದ್ದ ಅಧ್ವರಿಯು, ಬ್ರಹ್ಮ, ಉದ್ಗಾತೃ, ಬ್ರಾಹ್ಮಣ್ಯರು, ಸದಸ್ಯರು, ಮೊದಲಾದ ಬ್ರಾಹ್ಮಣ ಸಮೂಹಕ್ಕೆ ಬಹಳವಾಗಿ ಕೊಟ್ಟ ಧನ ಕನಕಾದಿ ವಸ್ತುಗಳನ್ನು ಹೊರೆಗಳ ಕಟ್ಟಿ ಕೊಂಡು, ಕೆಲರು ಹೆಗಲಲ್ಲಿಯೂ, ಕೆಲರು ಶಿಷ್ಯರ ನೆತ್ತಿಗಳಲ್ಲಿಯೂ, ಹೊರಿಸಿ ಕೊಂಡು, ಧರ್ಮರಾಯನಿಗೆ ಆಶೀರ್ವಾದವನ್ನು ಮಾಡಿ, ಹೊರಟು ಹೋದರು. ಆ ಬಳಿಕ ಸಕಲವನ್ನು ತಿಳಿದಂಥ ಕೌರವ ಪಾಂಡವರೆರಡು ಕುಲಕ್ಕೆ ಅಜ್ಜನಾದ ಭೀಷ್ಮಾಚಾರ್ಯರ ಬಳಿಗೆ ಬಂದು, ನಮಸ್ಕರಿಸಿ, ಧರ್ಮರಾಯನು ಆತನನ್ನು ಕುರಿತು—ಎಲೈ, ಪ್ರಾಜ್ಞನೇ, ಈ ರಾಜ ಸಭೆಯಲ್ಲಿ ಶಿವನಿಗೆ ಸಮಾನರಾಗಿರುವ ಅನೇಕ ಭೂಪಾಲರು ನೆರೆದಿರುವರು. ಇವರಲ್ಲಿ ಮೊದಲು ಯಾರಿಗೆ ಪೂಜೆ ಮಾಡ ಬೇಕು? ಎಂದು ಕೇಳಲು; ಭೀಷ್ಮನು ಧರ್ಮರಾಯನನ್ನು ಕುರಿತು—ಕೇಳೈಯಾ, ಯುಧಿಷ್ಠಿರನೇ, ನಕ್ಷತ್ರಗಳೂ ನವಗ್ರಹಗಳೂ ಇವುಗಳಲ್ಲಿ ಸೂರ್ಯನನ್ನು ಬಿಟ್ಟರೆ, ಮತ್ತಾರ್ಯರು? ದೇವತೆಗಳಲ್ಲಿ ಶಿವನನ್ನು ಬಿಟ್ಟರೆ, ಬೇರೆ ಯಾರು? ದಿಕ್ಪಾಲರಲ್ಲಿ ದೇವೇಂದ್ರನನ್ನು ಬಿಟ್ಟರೆ, ಮತ್ತೆ ಪೂಜ್ಯರ್ಯಾರು? ಪರ್ವತಗಳಲ್ಲಿ ಮೇರುವಿನಂತೆಯೂ, ಸಮುದ್ರಗಳಲ್ಲಿ ಕ್ಷೀರ ಸಮುದ್ರದಂತೆಯೂ, ದೇವಾಸುರ ನರೋರಗ ಸಮೂಹದಲ್ಲಿ ಕೃಷ್ಣನೇ ದೊಡ್ಡವನಾದ್ದರಿಂದ, ಆತನನ್ನು ಬಿಟ್ಟು, ಮತ್ತೊಬ್ಬರು ಈ ಸಭೆಯಲ್ಲಿ ಅಗ್ರ ಪೂಜೆಗೆ ಯೋಗ್ಯರು ಯಾರಿದ್ದಾರೆ? ವ್ಯಾಸರೂ ನಾರದರೂ ರೋಮಶಾದಿ ಸಕಲ ಮುನೀಂದ್ರರೂ ಇದ್ದಾರೆ. ಕೃಷ್ಣನು ಅಗ್ರ ಪೂಜೆಗೆ ಯೋಗ್ಯನೋ, ಅಲ್ಲವೋ? ಬೇಕಾದರೆ ಕೇಳು, ಎನಲು; ಅವರೆಲ್ಲರು ಭೀಷ್ಮ ಹೇಳಿದ ಮಾತಿಗೆ ಒಡಂಬಡಲು; ಆಗ ಸಹದೇವನು ಚಿನ್ನದ ಮಂಚದ ಮೇಲಕ್ಕೆ ಕೃಷ್ಣನಿಗೆ ಕೈಗೊಟ್ಟು, ಕರೆದು ಕೊಂಡು ಬಂದು, ದಿವ್ಯ ಸಿಂಹಾಸನದಲ್ಲಿ ಕುಳ್ಳಿರಿಸಿ, ಹರಿವಾಣದಲ್ಲಿ ಗಂಗೆಯ ನೀರನ್ನು ತಂದು, ಕೃಷ್ಣನ ಕಾಲುಗಳನ್ನು ತೊಳೆದು, ಹದಿನಾರು ವಿಧವಾದ ಪೂಜೆಗಳಿಂದ ಪೂಜಿಸಿದನು. ಆಗ ದೇವ ಮುನಿಗಳೂ ಬ್ರಹ್ಮ ಋಷಿಗಳೂ—ಜಯ, ಜಯ! ಎಂದು ಹೊಗಳಿದರು. ದೇವದುಂದುಭಿಗಳು ಮೊಳಗಿದವು.

ಆಗ ಅದನ್ನು ನೋಡಿ, ಅರಸುಗಳೆಲ್ಲಾ ಒಬ್ಬರ ಮುಖಗಳನ್ನು ಒಬ್ಬರು ನೋಡುತ್ತಾ, ಕೆಲರು ಪಾಂಡವರ ಸ್ನೇಹದಲ್ಲಿ, ಕೆಲರು ಕೃಷ್ಣನ ಒಲ್ಮೆಯಲ್ಲಿ, ಕೆಲರು ಭಯದಲ್ಲಿ, ಕೆಲರು—ನಮಗೇಕೆ? ಹ್ಯಾಗಾದರೂ ಆಗಲಿ ಎಂದು, ಉದಾಸೀನದಲ್ಲಿ ಸುಮ್ಮನಿದ್ದರು. ಅವರೊಳಗೆ ಖಳ ಶಿರೋಮಣಿಯಾದ ಶಿಶುಪಾಲನು ಮಹಾ ಕೋಪಿಷ್ಠನಾಗಿ, ಸಹದೇವನನ್ನು ಕುರಿತು—ಏನೆಲಾ, ಸಹದೇವ, ವಸುಧೆಯ ಮಾನ ನಿಧಿಗಳ ಮುಂದೆ ಗೊಲ್ಲರ ಹುಡುಗನಿಗೆ ಸಿಂಹಾಸನದ ಮೇಲೆ ಕೂರಿಸಿ, ಮೊದಲು ಪೂಜೆಯೇ? ಸೀನು ಅರಿಯದವನು. ನಿಮ್ಮ ಯಾಗಕ್ಕೆ ಹಾನಿಯಲ್ಲವೇ? ನಿಮ್ಮ ಹಿರಿಯರು ಇದೇನ ಹೇಳದರು? ಪಾಂಡುವಿನ ಮಕ್ಕಳು ಬುದ್ಧಿ ಇಲ್ಲದವರೆಂದು ಚನ್ನಾಗಿ ತಿಳಿಯಿತು. ಒಂದು ವೇಳೆ ಈ ಕೃಷ್ಣನು ಯದು ವಂಶದಲ್ಲಿಯೇ ಹುಟ್ಟಿದವನಾದಾಗ್ಯೂ, ಯದು ಕುಲದವರು ಸಿಂಹಾಸನಕ್ಕೆ ಹೊರಗು ಎಂದು ಜಗವೆಲ್ಲ ತಿಳಿದಿರುವದಲ್ಲ! ಹೀಗೆಂದು ಪಾಂಡವರನ್ನು ನಿಂದಿಸಿ, ಭೀಷ್ಮನನ್ನು ಕುರಿತು—ನೀನು ಮುದುಕನೂ ಜ್ಞಾನ ವೃದ್ಧನೂ ಆಗಿ, ಈ ಹಸು ಕರುಗಳ ಕಾಯ್ದ ಗೊಲ್ಲನಿಗೆ ಮೊದಲು ಪೂಜೆಯನ್ನು ಈ ಪ್ರಕಾರ ಹ್ಯಾಗೆ ಮಾಡಿಸಿದೆ? ನೀನು ಸಕಲ ವೇದ ಪುರಾಣ ಇತಿಹಾಸಗಳನ್ನು ಓದಿದ್ದು, ನೀರಿನಲ್ಲಿ ಹೋಮ ಮಾಡಿದ ಹಾಗಾಯಿತು. ಆದ್ದರಿಂದ ನಿನ್ನನ್ನು ಶುದ್ಧ ಮೂಢನೆಂದು ತಿಳಿಯ ಬೇಕು. ಒಂದುವೇಳೆ ಹಿರಿಯನೆಂದು ಪೂಜಿಸ ಬೇಕಾದರೆ, ಇವನಪ್ಪನಾದ ವಸುದೇವನಿರಲಿಲ್ಲವೇ? ಲೋಕದಲ್ಲಿ ಹೆತ್ತವನೂ ಹೆಣ್ಣು ಕೊಟ್ಟವನೂ ಇಬ್ಬರು ತಂದೆಗಳಾದ್ದರಿಂದ, ಪಾಂಡವರಿಗೆ ಹೆಣ್ಣು ಕೊಟ್ಟ ಮಾವನಾದ ದ್ರುಪದರಾಯನಿಗಾದರೂ ಪೂಜೆಯನ್ನು ಮಾಡಿದಿರಾ? ಆಚಾರ್ಯನೆಂದು ಪೂಜಿಸ ಬೇಕಾದರೆ, ಇವರಿಗೆ ಧನುರ್ವಿದ್ಯೆಯನ್ನು ಹೇಳದ ದ್ರೋಣಾಚಾರ್ಯನನ್ನಾದರೂ ಪೂಜಿಸಿದಿರಾ? ಇನ್ನು ವೇದವ್ಯಾಸ ಮುನಿ ಶ್ರೇಷ್ಠನೂ ಅಶ್ವತ್ಥಾಮನೂ ಕೃಪಾಚಾರ್ಯನೂ ನಿಮಗೆ ಸೋದರ ಮಾವನಾದ ಶಲ್ಯನೂ ಇನ್ನು ಸಕಲ ದೇಶಾಧೀಶ್ವರರು ಇರುವಲ್ಲಿ, ಇವರಿಗೆಲ್ಲಾ ಅವಮಾನವನ್ನು ಮಾಡಿ, ಜಾರ ಚೋರರಿಗೆಲ್ಲಾ ಗುರುವಾದ ಈ ಕೃಷ್ಣನಿಗೆ ಅಗ್ರ ಪೂಜೆಯನ್ನು ಮಾಡಿದ್ದು ಬಹು ಚನ್ನಾಯಿತು! ಹೀಗೆ ಅಯೋಗ್ಯವಾದ ಕೆಲಸವನ್ನು ಮಾಡಿದ್ದರಿಂದ ಎಲ್ಲಾ ಅರಸುಗಳು ಕೂಡಿ, ನಿಮ್ಮ ಐವರನ್ನೂ ನಿಮಗೆ ಬುದ್ಧಿ ಹೇಳದ ಭೀಷ್ಮನನ್ನೂ ಪೂಜೆಯನ್ನು ಮಾಡಿಸಿ ಕೊಂಡ ಈ ಖೂಳ ಗೊಲ್ಲನನ್ನೂ ಕಡಿದು, ಭೂತ ಗಣಗಳಿಗೆ ತಿನ್ನಿಸ ಬೇಕು ಎಂದು, ನಾನಾ ಪ್ರಕಾರವಾಗಿ ದುರ್ಭಾ

ಷೆಗಳನ್ನು ಆಡುತ್ತಾ, ಇರಲು; ಅದನ್ನು ಕೇಳಿ, ಶಿಶುಪಾಲನೊಡನೆ ಸಕಲ ದೇಶದ ದುಷ್ಟ ಅರಸುಗಳೆಲ್ಲಾ ಯುದ್ಧಕ್ಕೆ ಸನ್ನದ್ಧರಾದರು.

ಇತ್ತ ಸಾತ್ಯಕಿ, ಅರ್ಜುನ, ಭೀಮ, ನಕುಲ, ದೃಷ್ಟದ್ಯುಮ್ನ, ಮೊದಲಾದವರು ಯುದ್ಧ ಸನ್ನದ್ಧರಾದರು. ಅದನ್ನು ಕಂಡು, ಧರ್ಮರಾಯನು ಮೂಗಿನಲ್ಲಿ ಬೆರ ಳಿಟ್ಟು, ತಲೆಯನ್ನು ಅಲ್ಲಾಡಿಸುತ್ತಾ, ಭೀಷ್ಮನ ಬಳಿಗೆ ಬಂದು,—ಸಮುದ್ರವು ಸುತ್ತಿದ ಭೂಮಿಯ ಅರಸುಗಳೆಲ್ಲರು ಯುದ್ಧಕ್ಕೆ ಬರುತ್ತಾರಲ್ಲ! ಇನ್ನೇನು ಗತಿ? ಈ ವರಿಗೂ ಯಜ್ಞವು ತಡೆ ಇಲ್ಲದೆ ನಡೆಯಿತು. ಅವಭೃತ ಸ್ನಾನ ವಾಗುವಷ್ಟರಲ್ಲಿಯೇ ಇಂಥ ವಿಪತ್ತು ಬಂದೊದಗಿತಲ್ಲ! ಎಂದು, ಚಿಂತೆ ಪಡು ವದನ್ನು ಸಹದೇವನು ಕೇಳಿ,—ಈ ಬಣಗು ಅರಸುಗಳ ಗುಂಪಿಗೆ ಬೆದರಿ, ಯಾಕೆ ಕಳವಳ ಪಡುತ್ತೀಯೇ? ಒಂದು ನಿಮಿಷ ಮಾತ್ರ ಸುಮ್ಮನೆ ಇರು ಎಂದು, ಧರ್ಮರಾಯನಿಗೆ ಹೇಳಲು; ಭೀಷ್ಮನು ಸಹದೇವ ಹೇಳಿದಂತೆ ಧರ್ಮ ರಾಯನಿಗೆ ಸಮಾಧಾನಾ ಮಾಡುತ್ತಿರುವಷ್ಟರಲ್ಲಿಯೇ ಕೃಷ್ಣನ ಚಕ್ರವು ಬಂದು, ಶಿಶುಪಾಲನ ತಲೆಯನ್ನು ಕಡಿದು ಹಾಕಲು; ಕೂಡಿದ ಅರಸುಗಳೆಲ್ಲರು ಸುಮ್ಮ ಗಾಗಿ ಧರ್ಮರಾಯನಿಗೆ ವಿಧೇಯರಾದರು. ಧರ್ಮರಾಯನು ದೇಶದ ಅರಸು ಗಳಿಗೆಲ್ಲಾ ಸತ್ಕಾರವನ್ನು ಮಾಡಿ, ಅವರನ್ನೆಲ್ಲಾ ಕಳುಹಿಸಿ ಕೊಟ್ಟು, ಕೃಷ್ಣನೇ ಮೊದಲಾದ ಯಾದವರೊಡನೆಯೂ, ಭೀಷ್ಮನು ಮೊದಲಾದ ಕೌರವರೊಡ ನೆಯೂ, ಬಹಳ ಸಂತೋಷದಿಂದ ಅವಭೃತ ಸ್ನಾನವನ್ನು ಮಾಡಿ, ಪಟ್ಟಣ ವನ್ನು ಬಹು ಸಂಭ್ರಮದಿಂದ ಸೇರಿದನು.

### 64. The Romance of Nala and Damayanti.

### ೬೪. ನಳ ದಮಯಂತಿಯರ ಕಥೆ.

ಮಹಮ್ಮೇರು ಪರ್ವತದ ತೆಂಕಣ ದಿಕ್ಕಿನಲ್ಲಿರುವ ಜಂಬೂ ದ್ವೀಪದಲ್ಲಿ ಐವ ತ್ತಾರು ದೇಶಗಳುಂಟು. ಅವುಗಳೊಳಗೆ, ಹೊಳೆ, ತೊರೆಗಳಿಂದಲೂ, ಕೆರೆ, ಕಟ್ಟೆ, ಕಾಲುವೆಗಳಿಂದಲೂ ಕೂಡಿ, ಭತ್ತ ಮೊದಲಾದ ಎಲ್ಲಾ ಪೈರುಗಳಿಂದ ಕೂಡಿರುವ ಗದ್ದೇ ಹೊಲಗಳಿಂದಲೂ; ಅಡಿಕೆ, ತೆಂಗು, ಬಾಳೆ ಮೊದಲಾದ ಫಲ ಗಳಿಂದ ಕೂಡಿ ಬೆಳೆದಿರುವ ಮರಗಳುಳ್ಳ ತೋಟಗಳಿಂದಲೂ; ಒಂದು ಬಳಿ ಯಲ್ಲಿಯಾದರೂ ಪಾಳುಗಳಿಲ್ಲದೆ ಒಕ್ಕಲುಗಳಿಂದ ತುಂಬಿರುವ ಹಳ್ಳಿ, ಊರು, ಪಟ್ಟಣಗಳಿಂದಲೂ, ಚಂದವಾದ ನಿಷಧವೆಂಬ ಒಂದು ದೇಶವಿರುವದು. ಆ ದೇಶದಲ್ಲಿ ವೀರಸೇನನೆಂಬ ಒಬ್ಬ ಅರಸು ಧರ್ಮದಿಂದ ಧೊರೆತನವನ್ನು ಮಾಡಿ ಕೊಂಡು, ತನ್ನ ದೇಶದ ಜನರನ್ನೂ ತನ್ನ ಪರಿವಾರಗಳನ್ನೂ ಮಕ್ಕಳಿಗಿಂತ

ಹೆಚ್ಚಾಗಿ ಕಾಪಾಡುತ್ತಿದ್ದನು. ಆತನ ಪಟ್ಟದ ಹೆಂಡತಿಯಲ್ಲಿ ಬಹಳ ಚೆಲುವ
ನಾದ ಒಬ್ಬ ಗಂಡು ಮಗನು ಹುಟ್ಟಿ, ಬಿದಿಗೇ ಚಂದ್ರನಂತೆ ದಿನ ದಿನಕ್ಕೆ ಬೆಳೆ
ಯುತ್ತಾ ಇದ್ದನು. ಆತನಿಗೆ ತಂದೆಯು ಜಾತಕರ್ಮವನ್ನು ಮಾಡಿ, ನಳ
ನೆಂದು ಹೆಸರಿಟ್ಟು, ಚೌಲ ಉಪನಯನಗಳನ್ನು ಮಾಡಿ, ಎಲ್ಲಾ ಓದನ್ನು ತಿಳಿದು
ಬಹಳ ಜಾಣನಾಗಿರುವ ಉಪಾಧ್ಯನ ಬಳಿಯಲ್ಲಿ ಓದು ಕಲಿಯುವದಕ್ಕೆ ಮಠ
ಕ್ಕೆ ಹಾಕಿದನು. ಆಗ ಆ ನಳನು ಬಹು ಬೇಗ ಅರುವತ್ತು ನಾಲ್ಕು ವಿದ್ಯಗಳ
ನ್ನು ಕಲಿತು, ಧನುರ್ವೇದವನ್ನು ಓದಿ, ಕುದುರೆಗಳ ಲಕ್ಷಣಗಳನ್ನು ತಿಳಿದು,
ಬಲವಂತನಾಗಿ, ಘಟ್ಟಿಗನಾಗಿ, ಸತ್ಯವಂತನಾಗಿ, ಅಡಿಗೆ ಮಾಡುವ ವಿದ್ಯೆಯನ್ನು
ಚನ್ನಾಗಿ ಕಲಿತವನಾಗಿ, ತಂದೆಯ ಮುಂದೆ ತಾನು ಕಲಿತ ವಿದ್ಯಗಳನ್ನು ಪರೀ
ಕ್ಷೆ ಕೊಟ್ಟು, ಆತನ ಅಪ್ಪಣೆಯನ್ನು ತೆಗೆದು ಕೊಂಡು, ಒಂದು ಅಕ್ಷೋಹಿಣಿ
ಬಲವನ್ನು ಕೂಡಿ, ದಿಕ್ಕುಗಳನ್ನು ಜೈಸುವದಕ್ಕೆ ಹೊರಟು, ತನ್ನನ್ನು ಬಂದು
ಕಾಣಿಸಿ ಕೊಂಡು, ಕಪ್ಪವನ್ನು ಕೊಟ್ಟ ದೇಶದ ಧೊರೆಗಳನ್ನು ಮನ್ನಿಸಿ, ತನಗೆ
ಎದುರು ಬಿದ್ದ ಧೊರೆಗಳನ್ನು ಜೈಸಿ, ಅವರಿಂದ ಕಾಣಿಕೆ ಕಪ್ಪಗಳನ್ನು ತೆಗೆದು
ಕೊಂಡು, ತಿರಿಗಿ ತನ್ನ ಪಟ್ಟಣಕ್ಕೆ ಬಂದು, ತಂದೆಗೆ ನಮಸ್ಕರಿಸಿ, ದೇಶದ ಅರ
ಸುಗಳು ಕೊಟ್ಟ ಕಪ್ಪ ಕಾಣಿಕೆಗಳನ್ನು ಒಪ್ಪಿಸಿದನು. ಆಗ ವೀರಸೇನ ರಾಯ
ನು ಮಗನ ಪರಾಕ್ರಮಕ್ಕೂ ವಿನಯಕ್ಕೂ ಬುದ್ಧಿಗೂ ಸತ್ಯಕ್ಕೂ ಮೆಚ್ಚಿ,
ಸಂತೋಷದಿಂದ ಆತನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಆ ಮೇಲೆ ಈ
ಯುವರಾಜನಾದ ನಳಚಕ್ರವರ್ತಿಯು ರಾಜ್ಯವನ್ನು ಪಾಲಿಸುತ್ತಾ ಇದ್ದನು.

ಹೀಗಿರುವಲ್ಲಿ ವಿದರ್ಭ ದೇಶದಲ್ಲಿ ಕುಂಡಿನವೆಂಬ ಹೆಸರುಳ್ಳ ಪಟ್ಟಣವನ್ನು
ಆಳುತ್ತಲಿರುವ ಭೀಮರಾಯನು—ತನಗೆ ಮಕ್ಕಳಿಲ್ಲವಲ್ಲಾ ಎಂದು ಚಿಂತೆ ಪಡು
ತ್ತಿರುವ ವೇಳೆಯಲ್ಲಿ ಬ್ರಹ್ಮ ಋಷಿ ಶ್ರೇಷ್ಠನಾದ ದಮನೆಂಬ ಒಬ್ಬ ಮುನಿಯು
ಆತನ ಬಳಿಗೆ ಬರಲು; ಆತನು ಹೆಂಡತಿಯೊಡನೆ ಕೂಡಿ ಬಂದು, ಮುನೀಶ್ವರನ
ನ್ನು ಬಹಳವಾಗಿ ಪೂಜಿಸಿದನು. ಆ ಮುನಿಯು ಆತನ ಪೂಜೆಗೆ ಪ್ರೀತಿ ಪಟ್ಟು,
ಮಕ್ಕಳ ಬಯಕೆಯಿಂದಿರುವ ಅವನಿಗೆ—ದಮಯಂತಿ ಎಂಬ ಒಬ್ಬ ಮಗಳೂ,
ದಮನು, ದಾಂತನು, ದಮನನು ಎಂಬ ಮೂರು ಮಂದಿ ಗಂಡು ಮಕ್ಕಳೂ
ಆಗುವರು ಎಂದು ವರವನ್ನು ಕೊಟ್ಟು, ತನ್ನ ಆಶ್ರಮಕ್ಕೆ ಹೋದನು. ಆ
ಬಳಿಕ ಆತನ ವರದಿಂದ ಆ ಭೀಮರಾಯನ ಪಟ್ಟದ ರಾಣಿಯು ಬಸುರಾಗಿ,
ಮೊದಲು ದಮಯಂತಿ ಎಂಬ ಹೆಣ್ಣು ಮಗಳನ್ನು ಹೆತ್ತು, ಆ ಹಿಂದೆ ಕ್ರಮವಾಗಿ
ಮೂರು ಮಂದಿ ಗಂಡು ಮಕ್ಕಳನ್ನು ಹೆತ್ತಳು. ಆ ದಮಯಂತಿಯು ದಿನ

ದಿನಕ್ಕೆ ಬೆಳೆದು, ಪ್ರಾಯದವಳಾಗಿ, ಚೆಲುವಿನಿಂದಲೂ ಲಕ್ಷಣಗಳಿಂದಲೂ ಆಕಾರದಿಂದಲೂ ರತಿದೇವಿಗೆ ಸರಿಯಾಗಿ, ಮುತ್ತು, ಹವಳ, ವಜ್ರ, ವೈಢೂರ್ಯ ಮೊದಲಾದ ರತ್ನಗಳನ್ನು ಕೆತ್ತಿರುವ ಒಡವೆಗಳನ್ನು ಇಟ್ಟು ಕೊಂಡು, ಒಳ್ಳೇ ಹೊಂಬಣ್ಣವಾದ ಶೀರೆಯನ್ನು ಉಟ್ಟು ಕೊಂಡು, ನಿರಾಜಿ ರವಿಕೆಯನ್ನು ತೊಟ್ಟು, ಲಕ್ಷ್ಮಿದೇವಿಯ ಹಾಗೆ ಒಪ್ಪುತ್ತಿದ್ದಳು. ದೇವತೆಗಳು, ಗಂಧರ್ವರು, ಯಕ್ಷರು, ನಾಗರು, ಮನುಷ್ಯರು, ಇವರೊಳಗೆ ಅವಳಂತೆ ಚಂದವುಳ್ಳ ಹೆಂಗಸರು ಯಾರೂ ಇಲ್ಲದ್ದರಿಂದ, ಇವಳನ್ನು ನೋಡಿದ ಜನರುಗಳು ಬಹಳ ಆಶ್ಚರ್ಯ ಪಡುತ್ತಾ ಇದ್ದರು. ಈ ದಮಯಂತಿಯ ಸಂಗಾತಿಗಳು ಆಕೆಯೊಡನೆ—ನೀನು ಮದುವೆಯಾಗುವದಕ್ಕೆ ನಿನ್ನ ಚೆಲುವಿಗೆ ಸರಿಯಾದ ಪುರುಷನು ಜಗತ್ತಿನಲ್ಲಿ ಯಾರೂ ಇಲ್ಲ. ನಿಷಧ ದೇಶದ ವೀರಸೇನ ರಾಯನ ಮಗನಾದ ನಳನು ಚೆಲುವಿನಿಂದ ಮನ್ಮಥನಿಗೆ ಎಂಟು ಮಡಿ ಹೆಚ್ಚಾಗಿ ಇರುವನು ಎಂದು, ಕೇಳಿರುವದರಿಂದ, ಅವನನ್ನೇ ನೀನು ಮದುವೆಯಾಗ ಬೇಕು ಎಂದು, ಅವನ ರೂಪು ರೇಖೆ ಜಾಣತನ ಶಕ್ತಿ ಪರಾಕ್ರಮಗಳನ್ನು ವಿವರಿಸುತ್ತಾ ಬಂದದರಿಂದ, ಆ ದಮಯಂತಿಗೆ ನಳನ ಮೇಲೆ ಮನಸ್ಸಾಗಿತ್ತು.

ಇತ್ತ ನಳಚಕ್ರವರ್ತಿಗೆ ಬೇಹಿನವರು ಬಂದು, ಈ ದಮಯಂತಿಯ ರೂಪು ಲಾವಣ್ಯಗಳನ್ನು ತಿಳಿಸಿದ್ದರಿಂದ, ಈತನು ಆಕೆಯನ್ನೇ ಮದುವೆಯಾಗ ಬೇಕೆಂದು ಎಣಿಸಿ ಕೊಂಡು ಇದ್ದನು. ಹೀಗೆ ಒಬ್ಬರೊಬ್ಬರಿಗೆ ಮೋಹವು ಹುಟ್ಟಿ ಇರುವಾಗ, ನಳನಿಗೆ ದಮಯಂತಿಯಲ್ಲಿ ಮನಸ್ಸಿನ ಪ್ರೀತಿಯು ಹೆಚ್ಚುತ್ತಿರುವಲ್ಲಿ ನಳನು ಆಕೆಯ ವಿರಹವನ್ನು ತಡೆಯಲಾರದೆ, ಕಾಲವನ್ನು ಕಳೆಯುವದಕ್ಕೆ ಹೂವಿನ ತೋಟಕ್ಕೆ ಹೋಗಿ, ತಿರುಗುತ್ತಿರುವಲ್ಲಿ, ಚಿನ್ನದ ರೆಕ್ಕೆಗಳಿಂದ ಒಪ್ಪುತ್ತಲಿರುವ ಕೆಲವು ಹಂಸ ಪಕ್ಷಿಗಳನ್ನು ನೋಡಿ, ಮೆಲ್ಲ ಮೆಲ್ಲನೆ ಆ ಪಕ್ಷಿಗಳ ಬಳಿಗೆ ಹೋಗಿ, ಅವುಗಳೊಳಗೆ ಒಂದು ರಾಜ ಹಂಸವನ್ನು ಹಿಡಿದು ಕೊಳ್ಳಲು; ಅದು ಮನುಷ್ಯರ ಹಾಗೆ ಆತನನ್ನು ಕುರಿತು—ಎಲೈ, ಅರಸೇ, ನನ್ನನ್ನು ಯಾತಕ್ಕೆ ಹಿಂಸೆ ಮಾಡುತ್ತೀಯೋ? ನಾನು ದಮಯಂತಿಯ ಬಳಿಗೆ ಹೋಗಿ, ನಿನ್ನ ಅಂದ ಚಂದಗಳನ್ನೂ ನಿನ್ನ ಒಳ್ಳೇ ಗುಣಗಳನ್ನೂ ಆಕೆಗೆ ತಿಳಿಸಿ, ಲೋಕದಲ್ಲಿರುವ ಅಷ್ಟು ಮಂದಿ ಅರಸು ಮಕ್ಕಳನ್ನು ಬಿಟ್ಟು, ನಿನ್ನನ್ನೇ ಮದುವೆಯಾಗುವ ಹಾಗೆ ಮಾಡಿ, ನಿನಗೆ ಬಹಳ ಹಿತವನ್ನು ಮಾಡುತ್ತೇನೆಂದು ಹೇಳಿತು. ನಳನು ಅದರ ಮಾತುಗಳಿಗೆ ಆಶ್ಚರ್ಯವನ್ನು ಪಟ್ಟು—ಹಾಗೆ ಮಾಡು ಎಂದು, ಬಿಟ್ಟು ಬಿಟ್ಟನು.

ಆ ರಾಜ ಹಂಸವು ತನ್ನ ಕುಲದ ಹಕ್ಕಿಗಳೊಡನೆ ಕೂಡಿ, ಆಕಾಶ ಮಾರ್ಗಕ್ಕೆ ಹಾರಿ, ಬಹಳ ರಾಷ್ಟ್ರಗಳನ್ನು ದಾಟಿ, ವಿದರ್ಭ ದೇಶದ ಕುಂಡಿನ ಪಟ್ಟಣಕ್ಕೆ ಹೋಗಿ, ಆಕಾಶದಲ್ಲಿ ನಿಂತು, ರಾಣೀ ವಾಸದ ಹೂವಿನ ತೋಟದಲ್ಲಿ ಸಂಗಾತಿಗಳ ಜೊತೆಯಲ್ಲಿ ಆಡುತ್ತಲಿರುವ ದಮಯಂತಿಯನ್ನು ಕಂಡು, ಆ ತೋಟದ ಒಳಗೆ ತನ್ನ ಹಕ್ಕಿಗಳ ಗುಂಪಿನೊಡನೆ ಕೂಡಿ, ಇಳಿಯಿತು. ದಮಯಂತಿಯೂ ಆಕೆಯ ಸಖಿಗಳೂ ಚಿನ್ನದ ಗರಿಗಳಿಂದ ಕೂಡಿರುವ ಈ ಹಂಸ ಪಕ್ಷಿಗಳ ಚೆಲುವನ್ನು ನೋಡಿ, ಇವುಗಳನ್ನು ಹಿಡಿದು ಕೊಳ್ಳ ಬೇಕೆಂದು ಎಣಿಸಿ, ಸಖಿಗಳೆಲ್ಲಾ ಹಕ್ಕಿ ಗುಂಪುಗಳನ್ನು ಬೆನ್ನು ಹತ್ತಿ ಹೋದರು. ದಮಯಂತಿಯು ಮುಖ್ಯವಾದ ರಾಜ ಹಂಸೆಯನ್ನು ಹತ್ತಿ ಹೋಗಲು; ಅದು ತನ್ನನ್ನು ಹಿಂಬಾಲಿಸಿ ಬರುವ ಅರಸಿನ ಮಗಳನ್ನು ನೋಡಿ, ಹತ್ತರಕ್ಕೆ ಬರುತ್ತಾ, ಹಿಡಿಯುವದಕ್ಕೆ ಬಂದರೆ, ಬಳ್ಳಿಗಳ ಪೊದೆಗಳನ್ನು ಹೊಗುತ್ತಾ, ತಿರಿಗಿ ಇನ್ನೇನು? ಶಿಕ್ಕಿತು! ಎಂಬುವಂತೆ ಅವಳ ಮನಸ್ಸಿಗೆ ತೋರ ಪಡಿಸುವ ಹಾಗೆ ಸಮೀಪಕ್ಕೆ ಬರುತ್ತಾ, ಹಿಡಿಯುವದಕ್ಕೆ ಬಂದರೆ, ಸ್ವಲ್ಪ ದೂರಕ್ಕೆ ಹಾರುತ್ತಾ, ಹೀಗೆ ಆಕೆಯನ್ನು ಬಹಳ ದೂರ ಎಳ ಕೊಂಡು ಹೋಗಿ, ಮನುಷ್ಯರ ಪ್ರಕಾರ ಆಕೆಯನ್ನು ನೋಡಿ—ಎಲೈ, ಅರಸು ಮಗಳೇ, ನೀನು ಚಿಕ್ಕತನದಿಂದ ಬುದ್ಧಿ ಇಲ್ಲದವಳ ಹಾಗೆ ಕಾಣಿಸುತ್ತೀ. ಯಾಕಂದರೆ ನಾನು ಆಕಾಶದಲ್ಲಿಯೂ ಭೂಮಿಯಲ್ಲಿಯೂ ತಿರುಗುವ ಹಕ್ಕಿಯು; ನೀನು ಭೂಮಿಯಲ್ಲಿ ಮಾತ್ರ ತಿರುಗುವಂಥಾವಳು. ನಿನಗೆ ನನ್ನನ್ನು ಹಿಡಿಯ ಬೇಕೆಂದು ಆಶೆ ಹುಟ್ಟುವದು ಹುಚ್ಚುತನವಲ್ಲವೋ? ನಾನು ಸಾಧಾರಣವಾದ ಹಂಸ ಪಕ್ಷಿಯಲ್ಲ; ಎಲ್ಲಾ ಲೋಕಗಳನ್ನು ಉಂಟು ಮಾಡಿದ ಬ್ರಹ್ಮ ದೇವನ ವಾಹನವಾದ ಹಂಸ ಕುಲದ ಹಕ್ಕಿಯು. ನಾನು ಭೂಲೋಕವನ್ನು ತಿರುಗುವದಕ್ಕೆ ಬ್ರಹ್ಮ ದೇವನ ಅಪ್ಪಣೆಯನ್ನು ತೆಗೆದು ಕೊಂಡು, ಎಲ್ಲಾ ಲೋಕಗಳನ್ನು ತಿರಿಗಿ, ನೋಡಿ, ಇಲ್ಲಿಗೆ ಬಂದೆನು. ಇಂಥಾ ನಾನು ನಿನ್ನ ಕೈಗೆ ಶಿಕ್ಕುವೆನೇ? ಆದರೆ ನೀನು ನನಗಾಗಿ ಬಹಳ ಆಯಾಸ ಪಟ್ಟೆ. ಆದ್ದರಿಂದ ನಿನಗೊಂದು ಹಿತವಾದ ಬುದ್ಧಿಯನ್ನು ಹೇಳುತ್ತೇನೆ; ಕೇಳು. ನಾನು ತಿರುಗದ ಲೋಕವಿಲ್ಲ. ಎಲ್ಲಾ ಲೋಕಗಳಲ್ಲಿಯೂ ನಿನ್ನ ರೂಪು ರೇಖೆ ಸೌಂದರ್ಯ ಮುಂತಾದ್ದಕ್ಕೆ ಸರಿಯಾದ ಒಬ್ಬ ಹೆಣ್ಣು ಮಗಳನ್ನು ನೋಡಲಿಲ್ಲ. ಹೀಗೆಯೇ ನಿಷಧ ದೇಶದ ಯುವರಾಜನಾದ ನಳಚಕ್ರವರ್ತಿಗೆ ಸರಿಯಾದ ಸೊಬಗುಳ್ಳ ಪುರುಷನನ್ನು ನೋಡಲಿಲ್ಲ. ಆದ್ದರಿಂದ ನಮ್ಮೊಡೆಯನಾದ ಸೃಷ್ಟಿ ಕರ್ತನಾದ

ಬ್ರಹ್ಮನು ನಿನಗೆ ಆ ನಳನೇ ಗಂಡನಾಗಿಯೂ, ಆತನಿಗೆ ನೀನೇ ಹೆಂಡತಿಯಾಗಿಯೂ ಆಗ ಬೇಕೆಂದು ಎಣಿಸಿ, ನಿಮ್ಮಿಬ್ಬರನ್ನು ಸೃಷ್ಟಿಸಿ ಇದ್ದಾನೆಂದು, ನನ್ನ ಮನಸ್ಸಿನಲ್ಲಿ ಎಣಿಸಿ ಇದ್ದೇನೆ. ನೀನು ಆ ಮಹಾ ರಾಯನನ್ನು ಮದುವೆಯಾದರೆ, ನಿನ್ನ ಚೆಲುವೂ ಜನ್ಮವೂ ಸಫಲವಾಗುವದು. ಅವನು ಗಂಡಸರಲ್ಲಿ ಸೊಬಗುಳ್ಳವನಾಗಿಯೂ, ನೀನು ಹೆಂಗಸರಲ್ಲಿ ಚೆಲುವುಳ್ಳವಳಾಗಿಯೂ ಇರುವದರಿಂದ, ನೀವಿಬ್ಬರು ಗಂಡ ಹೆಂಡರಾಗಿ ಕೂಡಿದರೆ, ಇದಕ್ಕಿಂತಲು ಹೆಚ್ಚಾದ ಸಂತೋಷವು ನಿಮ್ಮಿಬ್ಬರಿಗೂ ಇಲ್ಲ. ನೀನು ಒಪ್ಪಿದರೆ, ಆ ಅರಸು ಮಗನ ಬಳಿಗೆ ಹೋಗಿ, ನನ್ನ ಬುದ್ಧಿ ಚಮತ್ಕಾರದಿಂದ ಆತನು ನಿನ್ನನ್ನು ಮದುವೆಯಾಗುವ ಹಾಗೆ ಮಾಡುವೆನು ಎಂದು ಹೇಳಿತು. ಆಗ ದಮಯಂತಿಯು— ಎಲೈ, ಪಕ್ಷಿಕುಲೋತ್ತಮನೇ, ನಿನ್ನ ಮಾತನ್ನು ಕೇಳಿ, ನನಗೆ ಬಹಳ ಹೆಚ್ಚಳವಾಯಿತು. ನೀನು ಬಹು ಜಾಣನಾಗಿ ಕಾಣಿಸುತ್ತೀಯೇ. ನಾನು ನಿನ್ನ ಮಗಳು ಎಂದು ಎಣಿಸಿ, ನನ್ನ ಮೇಲಣ ಕನಿಕರದಿಂದ ಆತನ ಬಳಿಯಲ್ಲಿ ಹ್ಯಾಗೆ ಹೇಳ ಬೇಕೋ, ಹಾಗೆ ಹೇಳಿ, ನನ್ನ ಮೇಲೆ ಆ ರಾಯನಿಗೆ ಮನಸ್ಸು ಉಂಟಾಗುವಂತೆ ಮಾಡ ಬೇಕು ಎಂದು ಕೈ ಮುಗಿದು, ಬೇಡಿ ಕೊಂಡಳು. ಹಂಸ ಪಕ್ಷಿಯು ದಮಯಂತಿಗೆ ಸಮಾಧಾನವನ್ನು ಮಾಡಿ—ಹಾಗೆ ಮಾಡುವೆನೆಂದು ನಂಬಿಕೆ ಕೊಟ್ಟು, ಆಕಾಶಕ್ಕೆ ಹಾರಿ, ನಿಷಧ ಪಟ್ಟಣಕ್ಕೆ ಬಂದು, ನಳನೊಡನೆ ತಾನು ಮಾಡಿದ ಕಾರ್ಯವನ್ನೂ ದಮಯಂತಿಯ ಮನೋಭಾವವನ್ನೂ ತಿಳಿಸಿತು.

ಇಲ್ಲಿ ದಮಯಂತಿಯು ಹಂಸದ ಮಾತನ್ನು ಕೇಳಿದ್ದು ಮೊದಲು ಗೊಂಡು ನಳನಲ್ಲಿ ಶಿಕ್ಕಿರುವ ಮನಸ್ಸು ಉಳ್ಳವಳಾಗಿ, ಯಾವಾಗಲೂ ನಳನನ್ನೇ ಹಂಬಲಿಸುತ್ತಾ, ಊಟ ಉಪಚಾರಗಳನ್ನು ಬಿಟ್ಟು, ನಿಟ್ಟುಸುರುಗಳನ್ನು ಬಿಡುತ್ತಾ, ಕಂದಿದ ಮೊಗವುಳ್ಳವಳಾಗಿ, ಬಡವಾದ ಮೈಯುಳ್ಳವಳಾಗಿ, ರಾತ್ರೆ ಹಗಲು ಚಿಂತೆ ಪಡುತ್ತಾ, ಬಾರಿ ಬಾರಿಗೂ ಹಾ ಎಂದು ಬಾಯಿ ಬಿಟ್ಟು, ನಿದ್ರೆ ಇಲ್ಲದೆ, ಒಂದು ವೇಳೆ ಏನಾದರೂ ಸ್ವಲ್ಪ ನಿದ್ರೆ ಹೋದರೆ, ಕನಸಿನಲ್ಲಿ ಆ ನಳನನ್ನು ಕಂಡು, ಫಕ್ಕನೆ ಎದ್ದು, ತಾನು ಕನಸಿನಲ್ಲಿ ಕಂಡ ನಳನ ಭಾವ ಚಿತ್ರವನ್ನು ಪಟದಲ್ಲಿ ಬರೆದು, ಅದನ್ನೇ ಯಾವಾಗಲೂ ನೋಡುತ್ತಾ, ಮುದ್ದಿಡುತ್ತಾ, ಹೀಗೆ ನಳನ ವಿರಹ ವೇದನೆಯನ್ನು ತಾಳಲಾರದೆ ಇರಲು; ಈಕೆಯ ಸಂಗಾತಿಗಳು ಭೀಮರಾಯನಲ್ಲಿಗೆ ಹೋಗಿ, ಈ ವಿವರವನ್ನು ಅರಿಕೆ ಮಾಡಲು; ಆತನು ತನ್ನ ಮನಸ್ಸಿನಲ್ಲಿ ಬಹು ಪ್ರಕಾರವಾಗಿ ವಿಚಾರಿಸಿ, ಪ್ರಾಯದ

ವಳಾದ ನನ್ನ ಮಗಳಿಗೆ ಬೇಗ ಸ್ವಯಂವರವನ್ನು ಸಾರಿಸ ಬೇಕೆಂದು ಎಣಿಸಿ,–ದಮಯಂತಿಯ ಸ್ವಯಂವರಕ್ಕೆ ಬನ್ನೀ ಎಂದು ಎಲ್ಲಾ ಅರಸುಗಳನ್ನು ಕರಿಸಲು; ಅವರೆಲ್ಲಾ ಆನೆ, ಕುದುರೆ, ತೇರು, ಕಾಲಾಳುಗಳು ಮೊದಲಾದ ಸೇನೆಯನ್ನು ಕೂಡಿ ಕೊಂಡು, ಕುಂಡಿನ ನಗರಕ್ಕೆ ಬಂದು, ಭೀಮರಾಯನಿಂದ ಮಾನಿತರಾಗಿ, ಆತನು ಮಾಡಿಸಿ ಕೊಟ್ಟ ಬಿಡಾರಗಳಲ್ಲಿ ಇಳಿದು ಕೊಂಡರು.

ಹೀಗಿರುವಲ್ಲಿ ಮೂರು ಲೋಕಗಳಲ್ಲಿಯೂ ತಿರುಗುವ ನಾರದನು ಸ್ವರ್ಗಕ್ಕೆ ಹೋಗಿ, ದೇವೇಂದ್ರನನ್ನು ಕಾಣಿಸಿ ಕೊಳ್ಳಲು; ಆತನು ಈತನಿಗೆ ಪೂಜೆಯನ್ನು ಮಾಡಿ, ಆತನ ಕ್ಷೇಮವನ್ನು ಕೇಳಿ–ಭೂಮಿಯಲ್ಲಿರುವ ಅರಸುಗಳು ಜಗಳದಲ್ಲಿ ಬೆನ್ನು ಕೊಡದೆ, ಪ್ರಾಣಗಳಲ್ಲಿ ಆಶೆಯನ್ನು ಇಡದೆ, ಹಗೆಗಳೊಡನೆ ಹೋರಿ, ಶಸ್ತ್ರಾಸ್ತ್ರಗಳಿಂದ ಕೊಲ್ಲಲ್ಪಟ್ಟು, ಇಲ್ಲಿಗೆ ಬಂದರೆ, ನನ್ನ ಅಮರಾವತೀ ಪಟ್ಟಣವು ತುಂಬಿ, ನನಗೆ ಸಂತೋಷವಾಗಿರುವದು. ಈಗ ಅಂಥಾ ಅರಸು ಒಬ್ಬರೂ ತನ್ನ ಪಟ್ಟಣಕ್ಕೆ ಬರುವದಿಲ್ಲ. ಇದಕ್ಕೆ ಕಾರಣವೇನೆಂದು ಕೇಳಿದನು. ನಾರದನು–ಎಲೈ, ಇಂದ್ರನೇ, ಕೇಳು! ಭೂಲೋಕದಲ್ಲಿ ವಿದರ್ಭ ದೇಶಕ್ಕೆ ಅರಸಾದ ಭೀಮ ಭೂಪಾಲಕನಿಗೆ ಮಗಳಾಗಿರುವ ದಮಯಂತಿ ಎಂಬ ಒಂದು ಕನ್ಯಾ ರತ್ನ ಉಂಟು. ಅವಳು ತನ್ನ ಸೊಬಗಿನ ಅತಿಶಯದಿಂದ ಎಲ್ಲಾ ಹೆಂಗಸರುಗಳಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದಾಳೆ. ಅವಳಿಗೆ ಸರಿಯಾದ ರೂಪವತಿಯು ಹದಿನಾಲ್ಕು ಲೋಕಗಳಲ್ಲಿಯೂ ಇಲ್ಲ. ಈಗ ಆಕೆಗೆ ಸ್ವಯಂವರವು ಸಾರಿ ಇರುವದರಿಂದ, ಎಲ್ಲಾ ದೇಶಗಳ ಅರಸುಮಕ್ಕಳು ಅವಳನ್ನು ಮದುವೆಯಾಗ ಬೇಕೆಂಬ ಆಶೆಯಿಂದ ಜಗಳಗಳನ್ನು ಬಿಟ್ಟು, ಆ ಭೀಮರಾಯನ ಪಟ್ಟಣಕ್ಕೆ ಹೋಗಿ ಇದ್ದಾರೆ, ಎಂದು ಹೇಳಿದನು.

ಆ ಮಾತನ್ನು ಇಂದ್ರ, ಯಮ, ವರುಣ, ಯಜ್ಞೇಶ್ವರರು ಕೇಳಿ, ನಾವಷ್ಟು ಮಂದಿಯು ಸ್ವಯಂವರಕ್ಕೆ ಹೋಗುವಾ ಎಂದು ನಿಶ್ಚೈಸಿ ಕೊಂಡು, ತಮ್ಮ ತಮ್ಮ ವಾಹನಗಳನ್ನು ಏರಿ ಬರುವ ದಾರಿಯಲ್ಲಿ ಅದೇ ಸ್ವಯಂವರಕ್ಕೆ ಬರುತ್ತಲಿರುವ ನಳನನ್ನು ನೋಡಿ, ಈ ನಾಲ್ಕು ಜನ ದಿಕ್ಪಾಲಕರು–ಇವನ್ಯಾರು? ಮೈಯಿಂದ ಕೂಡಿರುವ ಮನ್ಮಥನ ಹಾಗೆಯೂ, ನೆತ್ತಿಯಲ್ಲಿ ಕಣ್ಣು ಇಲ್ಲದ ಶಿವನ ಹಾಗೆಯೂ, ನಾಲ್ಕು ತೋಳುಗಳಿಲ್ಲದ ನಾರಾಯಣನ ಹಾಗೆಯೂ, ಸುಡುವಿಕೆ ಇಲ್ಲದ ಸೂರ್ಯನ ಹಾಗೆಯೂ, ಪ್ರಾಯದವನಾಗಿಯೂ, ಇರುವನು. ಇವನು ಸ್ವಯಂವರಕ್ಕೆ ಹೋದಲ್ಲಿ, ಇವನ ರೂಪು ರೇಖೆ ಅಂದ ಚಂದಗಳನ್ನು

ನೋಡಿ, ಆ ಕನ್ನಿಕೆಯು ಇವನನ್ನೇ ವರಿಸುವಳು. ನಮ್ಮ ಮನೋರಥವು ವ್ಯರ್ಥವಾಗುವದು ಎಂದು, ಕೆಲವು ಹೊತ್ತು ಚಿಂತಿಸಿ, ಎಲ್ಲರು ಕೂಡಿ, ಒಂದು ಗುಡ್ಡಾಳೋಚನೆಯನ್ನು ಮಾಡಿ ಕೊಂಡು, ಆಕಾಶದಿಂದ ಭೂಲೋಕಕ್ಕೆ ಇಳಿದು, ನಳಚಕ್ರವರ್ತಿಯನ್ನು ಕುರಿತು—ಎಲೈ, ನರೇಂದ್ರನೇ, ನೀನು ಕನಸಿನೊಳಗಾದರೂ ಸುಳ್ಳಾಡದೆ ಇರುವಂಥಾವನು, ನಮಗೆ ದೌತ್ಯವನ್ನು ಮಾಡಿ, ಸ್ವಯಂವರದಲ್ಲಿ ದಮಯಂತಿಯು ನಮ್ಮನ್ನು ವರಿಸುವ ಹಾಗೆ ನೀನು ಪ್ರಯತ್ನವನ್ನು ಮಾಡ ಬೇಕು, ಅಂದರು. ಅದಕ್ಕೆ ನಳಚಕ್ರೇಶ್ವರನು—ಎಲೈ, ಮಹಾತ್ಮರುಗಳಿರಾ, ಈ ಕೆಲಸವನ್ನು ನಾನು ಅವಶ್ಯವಾಗಿ ಮಾಡುತ್ತೇನೆ. ನೀವು ಯಾರು? ನನಗೆ ತಿಳಿಸ ಬೇಕೆಂದು ಕೇಳಲು; ದೇವೇಂದ್ರನು ಆತನನ್ನು ಕುರಿತು—ನಾವು ದಮಯಂತಿಯ ನಿಮಿತ್ತವಾಗಿ ಬಂದ ದಿಕ್ಪಾಲಕರು ಎಂದು ತಿಳಿ. ನಾನು ಇಂದ್ರನು; ಈತನು ಎಲ್ಲಾ ಪ್ರಾಣಿಗಳಿಗೂ ಸಾವನ್ನು ಉಂಟು ಮಾಡುವ ಯಮನು; ಇವನು ವರುಣನು; ಇವನು ಅಗ್ನಿಯು, ಎಂದು ತಿಳಿಸಲು; ಆಗ ನಳಚಕ್ರವರ್ತಿಯು ಕೈ ಮುಗಿದು—ಎಲೈ, ಮಹೇಂದ್ರನೇ, ನೀವು ಬಂದ ಹಾಗೆಯೇ ನಾನು ದಮಯಂತಿಯ ಸ್ವಯಂವರಕ್ಕೆ ಬಂದು ಇದ್ದೇನೆ. ನನ್ನನ್ನು ದೌತ್ಯ ಕೆಲಸಕ್ಕೆ ಕಳುಹಿಸುವದು ಯುಕ್ತವಲ್ಲ. ನನ್ನಲ್ಲಿ ಪ್ರೀತಿಯುಳ್ಳ ಅರಸಿನ ಮಗಳನ್ನು ನಾನೇ—ಮತ್ತೊಬ್ಬನನ್ನು ವರಿಸೆಂದು ನುಡಿಯುವದು ಹ್ಯಾಗೆ? ಎನಲು; ದೇವೇಂದ್ರನು ನಳನನ್ನು ಕುರಿತು—ನೀನು ಮೊದಲು—ನೀವು ಬಯಸಿದ ಕಾರ್ಯವನ್ನು ಅಗತ್ಯವಾಗಿ ನೆರವೇರಿಸುವೆನು ಎಂದು ಹೇಳಿ, ಈಗ ಹೀಗೆ ಹೇಳುವದು ತಕ್ಕದ್ದಲ್ಲ. ತಾಮಸಾ ಮಾಡದೆ, ಹೋಗಿ, ನಾವು ಬಂದಿರುವದನ್ನು ದಮಯಂತಿಗೆ ಅರಿಕೆ ಮಾಡು. ದೇವತೆಗಳ ಕೆಲಸವನ್ನು ಮಾಡಿದರೆ, ನಿನಗೆ ಎಲ್ಲಾ ಅಭೀಷ್ಟವು ಆಗುತ್ತದೆ, ಅಂದನು. ಆಗ ನಳನು—ಬಹಳ ಜನರು ಕಾವಲಾಗಿರುವ ಅರಸಿನ ಮಗಳ ರಾಣೀವಾಸಕ್ಕೆ ನಾನು ಯಾವ ಪ್ರಕಾರದಿಂದ ಹೋಗುವೆನು? ಎನಲು; ದೇವೇಂದ್ರನು—ನಮ್ಮ ವರದಿಂದ ಅಲ್ಲಿಗೆ ಹೋಗುವದಕ್ಕೆ ನಿನಗೆ ಸಾಮರ್ಥ್ಯವು ಉಂಟಾಗುತ್ತದೆ. ಶೀಘ್ರದಲ್ಲಿ ಹೋಗೆಂದನು.

ಆಗ ಸತ್ಯ ಸಂಧನಾದ ನಳನು ಬದಲು ಮಾತಾಡದೆ, ವಿದರ್ಭ ಪಟ್ಟಣಕ್ಕೆ ಹೋಗಿ, ಬಹಳ ತೊಟ್ಟಿಗಳನ್ನು ಕಳೆದು, ಕನ್ಯಾಂತಃಪುರಕ್ಕೆ ಹೋಗಿ, ಸಂಗಾತಿಗಳಿಂದ ಕೂಡಿರುವ ಕೋಮಲಾಂಗಿಯಾಗಿ, ಪ್ರಾಯದವಳಾಗಿ, ಚಕೋರಗಳ ಹಾಗೆ ಕಣ್ಣುಗಳುಳ್ಳವಳಾಗಿ, ಬಡ ನಡುವಿನಿಂದ ಬಳುಕುತ್ತಿರುವವಳಾಗಿ,

ಮುಗುಳು ನಗೆಯುಳ್ಳವಳಾಗಿ, ಮೊಗದಾವರೆಯುಳ್ಳವಳಾಗಿ, ಕಾಂತಾ ಶಿರೋಮಣಿಯಾದ ದಮಯಂತಿಯನ್ನು ನೋಡಿ, ಮನಗೆಟ್ಟು, ಮದನನ ಬಾಣಗಳಿಂದ ಪೀಡಿತನಾದರೂ, ಧೀರೋದತ್ತನಾಯಕನಾದ್ದರಿಂದಲೂ, ಸತ್ಯ ಸಂಧನಾದ್ದರಿಂದಲೂ, ತಿರಿಗಿ ಧೈರ್ಯವನ್ನು ಧರಿಸಿ, ನಿಂತಿರಲು; ದಮಯಂತಿಯ ಸಂಗಾತಿಗಳು ಈತನನ್ನು ಕಂಡು, ಶೀಘ್ರದಲ್ಲಿ ಎದ್ದು, ಆತನ ತೇಜಸ್ಸನ್ನು ನೋಡಿ, ಈ ದಿವ್ಯ ಪುರುಷನು ದೇವತೆಗಳೂ, ಯಕ್ಷರೂ, ಗಂಧರ್ವರೂ, ಉರಗರೂ, ಮೊದಲಾದವರೊಳಗೆ ಯಾರೋ? ತಿಳಿಯ ಕೂಡದು ಎಂದು, ತಮ್ಮ ತಮ್ಮ ಮನಸ್ಸುಗಳಲ್ಲಿ ಎಣಿಸುತ್ತಾ, ಮಾತನಾಡಿಸುವದಕ್ಕೂ ಶಕ್ತಿ ಸಾಲದೆ, ನಾಚಿಕೆಯಿಂದ ಬೊಗ್ಗಿಸಿ ಕೊಂಡಿರುವ ತಲೆಯುಳ್ಳವರಾಗಿ ಇರಲು; ದಮಯಂತಿಯು, ತನ್ನ ಅಂದ ಚಂದಗಳನ್ನು ನೋಡಿ, ಬೆರಗಾಗಿ ನಿಂತಿರುವ ಆತನ ರೂಪುಲಾವಣ್ಯಕ್ಕೆ ಆಶ್ಚರ್ಯ ಪಡುತ್ತಾ, ಮುಖದಲ್ಲಿ ಮುಗುಳು ನಗೆಯನ್ನು ತೋರಿಸುತ್ತಾ, ಕಡೆಗಣ್ಣಿ ನೋಟಗಳಿಂದ ಎವೆ ಹಾಕದೆ, ನೋಡಿ—ಎಲೈ, ಮಹಾ ಪುರುಷನೇ, ಮೈಯುಳ್ಳ ಮನ್ಮಥನೋಪಾದಿಯಲ್ಲಿ ಮೆರೆಯುವ ನಿನ್ನನ್ನು ನೋಡಿದ ಮಾತ್ರದಿಂದಲೇ ನನ್ನ ಮನಸ್ಸು ಕಲಕಾಗಿ ಇದೆ. ಅನೇಕ ಮಂದಿ ಕಾವಲುಗಾರರು ಕಾದಿರುವಲ್ಲಿ, ಈ ಅರಸುಗಳ ಹೆಂಡರಿರುವ ಅರಮನೆಗೆ ಹ್ಯಾಗೆ ಹೊಕ್ಕೆ? ನಿನ್ನನ್ನು ಯಾರೂ ಕಾಣದೆ ಇರುವದಕ್ಕೆ ಕಾರಣವೇನು? ನಮ್ಮ ತಂದೆಯಾದ ಭೀಮರಾಯನು ಉಗ್ರವಾದ ಆಜ್ಞೆಯುಳ್ಳವನು. ನೀನು ಬಂದ ಕೆಲಸವೇನು? ಬೇಗ ತಿಳಿಸಿ, ಬಂದ ಹಾಗೆ ಹೋಗು, ಅಂದಳು.

ಆಗ ಆತನು—ಎಲೈ, ಅರಸಿನ ಮಗಳೇ, ನಾನು ನಳನು. ದೇವತೆಗಳ ಕೆಲಸಕ್ಕಾಗಿ ನಿನ್ನ ಬಳಿಗೆ ದೂತನಾಗಿ ಬಂದು ಇದ್ದೇನೆ. ಇಂದ್ರ, ಯಮ, ವರುಣ, ಅಗ್ನಿ, ಈ ನಾಲ್ವರು ನಿನ್ನನ್ನು ವರಿಸುವದಕ್ಕೆ ಬಯಸಿ, ಬಂದು ಇದ್ದಾರೆ. ಇವರೊಳಗೆ ಯಾರಾದರೂ ಒಬ್ಬನನ್ನು ವರಿಸು. ಅವರ ವರದಿಂದ ನಾನು ನಿನ್ನ ಅಂತಃಪುರವನ್ನು ಹೊಗುವಾಗ, ಒಬ್ಬನಾದರೂ—ನೀನು ಯಾರೆಂದೂ, ಎಲ್ಲಿ ಹೋಗುತ್ತೀ ಎಂದೂ, ಕೇಳಿದವನಿಲ್ಲ. ಇಗೋ, ನಾನು ಬಂದ ಕೆಲಸವು ಇದು. ಇನ್ನು ನಿನ್ನ ಮನಸ್ಸಿಗೆ ತೋರಿದ ರೀತಿಗೆ ನಡಕೋ ಎಂದು ಹೇಳಿದನು. ಆ ಮಾತನ್ನು ಕೇಳಿ, ದಮಯಂತಿಯು ಆ ದೇವತೆಗಳನ್ನು ನೆನದು ನಮಸ್ಕರಿಸಿ, ಆತನನ್ನು ನೋಡಿ, ನಸುನಗೆಯನ್ನು ಬೀರುತ್ತಾ—ಎಲೈ, ಪ್ರಾಣವಲ್ಲಭನೇ, ನೀನೇ ಹೀಗೆ ಹೇಳಿದರೆ, ನಾನು ಏನು ಹೇಳ ಬೇಕು? ನನ್ನ ಮನೋರಥಕ್ಕೆ ಸರಿಯಾಗಿ ನೀನು ನಡೆಯ ಬೇಕಲ್ಲವೇ? ಮೊದಲು ಹಂಸೆಯು ಬಂದು,

ನಿನ್ನ ಮಹತ್ವವನ್ನು ಹೇಳಿದ್ದು ಮೊದಲು ಗೊಂಡು ನನ್ನ ಒಡವೆ ವಸ್ತುಗಳನ್ನೂ, ನನ್ನ ಒಡಲನ್ನೂ, ನನ್ನ ಪ್ರಾಣಗಳನ್ನೂ, ನಿನ್ನ ವಶಾ ಮಾಡಿ, ನೀನೇ ಪ್ರಾಣೇಶ್ವರನೆಂದು ನೆರೆ ನಂಬಿ, ನಿನ್ನ ವಿರಹದಿಂದ ಉಂಟಾದ ನೋವಿನಿಂದ ಹೊರಳುತ್ತಲಿದ್ದೇನೆ. ನಿನ್ನನ್ನು ಕರ ತರಿಸುವದಕ್ಕಲ್ಲವೇ ಸ್ವಯಂವರವೆಂಬ ನೆವದಿಂದ ಎಲ್ಲಾ ಅರಸುಗಳನ್ನು ಕರತರಿಸಿದ್ದು? ಹೀಗೆ ಇರುವ ನನ್ನನ್ನು ನೀನು ಕಡೆಗಣ್ಣಿನಿಂದ ನೋಡಿದರೆ, ವಿಷದಿಂದಲಾಗಲಿ, ಬೆಂಕಿಯಿಂದಲಾಗಲಿ, ನೀರಿನಿಂದಲಾಗಲಿ, ನೇಣಿನಿಂದಲಾಗಲಿ, ನಿನಗಾಗಿ ಈ ಒಡಲನ್ನು ಬಿಡುತ್ತೇನೆ ಎಂದು ನುಡಿಯಲು; ನಳನು—ಎಲೈ, ಕಾಂತಾ ಮಣಿಯೇ, ದಿಕ್ಪಾಲಕರೇ ನಿನ್ನನ್ನು ಬಯಸುವಾಗ ಅಲ್ಪ ಮನುಷ್ಯನಾದ ನನ್ನನ್ನು ಬಯಸುವದು ಉಚಿತವೇ? ಲೋಕ ಪಾಲಕರಾಗಿ, ಮಹಾತ್ಮರಾಗಿರುವ ಇಂದ್ರನೇ ಮೊದಲಾ ದೇವತೆಗಳ ಕಾಲ ಧೂಳಿಗಾದರೂ ಸರಿ ಹೋಗಲಾರದೆ ಇರುವ ನನ್ನನ್ನು ಯಾತಕ್ಕೆ ಬಯಸುತ್ತಿದ್ದೀಯೇ? ದೇವತೆಗಳನ್ನೇ ವರಿಸುದು ನಿನಗೆ ಬಹಳ ಒಳ್ಳೇದಾಗಿ ತೋರುತ್ತದೆ. ಇದಲ್ಲದೆ, ದೇವತೆಗಳ ಕೆಲಸಕ್ಕೆ ಯಾವನು ಅಡ್ಡೀ ಮಾಡುವನೋ, ಆತನು ಎಲ್ಲಾ ಸುಖಗಳನ್ನು ಕಳ ಕೊಂಡು, ಸತ್ತು ಹೋಗುವನು. ಅದರಿಂದ ಆ ನಾಲ್ವರೊಳಗೆ ಒಬ್ಬನನ್ನು ಒಪ್ಪಿ, ವರಿಸಿ, ನನ್ನನ್ನು ಕಾಪಾಡು. ದೇವತೆಗಳನ್ನು ವರಿಸಿದರೆ, ಬಹಳ ರಮ್ಯವಾದ ನುಣುಪಾದ ವಸ್ತ್ರಗಳೂ, ನವರತ್ನಗಳು ಕೆತ್ತಿದ ಒಡವೆಗಳೂ, ದಿವ್ಯಗಂಧ ಮಾಲಿಕೆಗಳೂ, ಇವಷ್ಟನ್ನು ಅನುಭವಿಸ ಬಹುದು. ಇಂಥಾ ದೇವತೆಗಳನ್ನು ಒಲ್ಲೆ ಎಂದು ನುಡಿಯುವ ನಿನ್ನಂಥಾ ಅವಿವೇಕಿಯು ಯಾರಾದರೂ ಉಂಟೇ? ಯಾವನ ದಂಡನೆಗೆ ಬೆದರಿ, ಎಲ್ಲಾ ಪ್ರಾಣಿಗಳು ನ್ಯಾಯದಿಂದ ನಡೆಯುತ್ತಾರೋ, ಅಂಥಾ ಯಮನನ್ನು ವರಿಸದೆ ಇರುವ ಹೆಂಗಸು ಉಂಟೇ? ಮೂರು ಲೋಕಗಳಿಗೂ ಒಡೆಯನಾಗಿ ಇರುವ ದೇವೇಂದ್ರನನ್ನು ವರಿಸುವದಕ್ಕಿಂತ ಇನ್ನೊಂದು ಭಾಗ್ಯವು ಏನದೆ? ರತ್ನಾಕರಗಳಿಗೆ ಅರಸಾಗಿ, ಸಕಲ ರತ್ನಗಳನ್ನು ಮನೆಯಲ್ಲಿ ತುಂಬಿ ಕೊಂಡಿರುವ ವರುಣನನ್ನಾದರೂ ಮದುವೆಯಾಗು. ಆತನನ್ನು ಒಲ್ಲದಿದ್ದರೆ, ತೇಜೋವಂತನಾದ ಅಗ್ನಿಯನ್ನಾದರೂ ಗಂಡನಾಗಿ ಮಾಡಿಕೋ. ನನ್ನ ನುಡಿಯನ್ನು ನಿರಾಕರಿಸ ಬೇಡ. ನಾನು ಸತ್ಯವಾಗಿ ಹೇಳುತ್ತೇನೆ, ಅಂದನು.

ದಮಯಂತಿಯು ಆತನ ಮಾತುಗಳನ್ನು ಕೇಳಿ, ಎದೆಯಲ್ಲಿ ಅಲಗು ನೆಟ್ಟಂತೆ ಧಾರಾಳವಾಗಿ ಸಂಕಟ ಪಡುತ್ತಾ, ನಿಟ್ಟುಸುರುಗಳನ್ನು ಬಿಡುತ್ತಾ, ನಳನನ್ನು ಕುರಿತು—ಎಲ್ಲಾ ದೇವತೆಗಳಿಗೂ ನಮಸ್ಕಾರವು! ನೀನು ಎಷ್ಟು ಹೇಳಿ

ದರೂ, ನಿನ್ನ ಮಾತು ನನ್ನ ಕಿವಿಗೆ ಬೀಳುವದಿಲ್ಲ, ನನ್ನ ಮನಸ್ಸು ಒಡಂಬಡುವದಿಲ್ಲ. ನೀನೇ ನನ್ನ ಗಂಡನು, ನನ್ನ ಪ್ರಾಣಕ್ಕೆ ಒಡೆಯನು. ನಿನ್ನನ್ನೇ ವರಿಸಿ ಇದ್ದೇನೆ. ಈಮಾತು ಸುಳ್ಳಲ್ಲ. ನಿನ್ನಲ್ಲಿ ನೆಟ್ಟಿರುವ ನನ್ನ ಮನಸ್ಸು ಎಂದಿಗೂ ಅಲುಗಲಾರದು ಎಂದು ನುಡಿದು, ಕೈ ಮುಗಿದು, ಕಣ್ಣೀರುಗಳ ಕೋಡಿಯನ್ನು ಹರಿಸುತ್ತಾ, ಗಡಗಡನೆ ನಡುಗುತ್ತಾ ಇರುವ ಆ ಕನ್ನಿಕೆಯನ್ನು ನೋಡಿ,—ದೂತನಾಗಿ ಬಂದ ನಾನು ಸ್ವಕಾರ್ಯದಲ್ಲಿ ಪ್ರವರ್ತಿಸುವದು ಯುಕ್ತವಲ್ಲವಷ್ಟೆ! ಅವಶ್ಯವಾಗಿ ನಿಮ್ಮ ಕಾರ್ಯವನ್ನು ಮಾಡುತ್ತೇನೆಂದು, ದೇವತೆಗಳೊಡನೆ ಪ್ರತಿಜ್ಞೆಯನ್ನು ಮಾಡಿ, ನಿನ್ನ ಬಳಿಗೆ ಬಂದು, ಇಂಥಾ ಕೆಟ್ಟ ಕೆಲಸವನ್ನು ಮಾಡುವದು ನನಗೆ ತಕ್ಕದಲ್ಲ. ಆದ್ದರಿಂದ ನನ್ನಲ್ಲಿ ದಯ ಮಾಡಿ, ಅವರಲ್ಲಿ ಯಾರನ್ನಾದರೂ ಒಬ್ಬನನ್ನು ಅಗತ್ಯವಾಗಿ ವರಿಸ ಬೇಕು ಎಂದು ಕೈ ಮುಗಿದು, ಬೇಡಿ ಕೊಂಡನು. ಆಗ ದಮಯಂತಿಯು ಕಣ್ಣೀರನ್ನು ಶರಗಿನಿಂದ ಒರಸಿ ಕೊಳ್ಳುತ್ತಾ, ಕಣ್ಣೀರಿನಿಂದ ತುಂಬಿದ ಕಣ್ಣುಗಳಿಂದ ನೋಡುತ್ತಾ—ಎಲೈ, ನರೇಂದ್ರನೇ, ನಿನಗಿಷ್ಟು ಭಯವೇತಕ್ಕೆ? ನಿನ್ನಲ್ಲಿ ತಪ್ಪು ಇಲ್ಲದೆ ಇರುವ ರೀತಿಗೆ ಒಂದು ಉಪಾಯವನ್ನು ಹೇಳುತ್ತೇನೆ, ಕೇಳು. ನೀನು ಇಂದ್ರನು ಮೊದಲಾದ ಲೋಕಪಾಲಕರು ಸ್ವಯಂವರಕ್ಕೆ ಬಂದ ಸಮಯದಲ್ಲಿ, ಎಲ್ಲಾ ದೇವತೆಗಳು ನೋಡಿತ್ತಿರಲು, ಅವರ ಅನುಗ್ರಹದಿಂದ ನಿನ್ನನ್ನೇ ವರಿಸುತ್ತೇನೆ. ಹೊರಟು ಹೋಗು, ಅಂದಳು.

ಆಗ ನಳನು ತಿರಿಗಿ ಇಂದ್ರನೇ ಮೊದಲಾದವರ ಬಳಿಗೆ ಬಂದು, ಬಾಡಿರುವ ಮುಖದಿಂದ ಕೈ ಮುಗಿದು, ನಿಂತಿರಲು; ದೇವೇಂದ್ರನು—ಎಲೈ, ಅರಸು ಮಗನೇ, ದಮಯಂತಿಯ ಬಳಿಗೆ ಹೋಗಿದ್ದಿಯಾ? ಅವಳಲ್ಲಿ ನಮ್ಮ ಬಯಕೆಯನ್ನು ತಿಳಿಸಿದಿಯಾ? ಅದಕ್ಕೆ ಅವಳು ಬದಲು ಏನು ಹೇಳಿದಳು? ಎಂದು ಕೇಳಲು; ನಳನು—ಎಲೈ, ಮಹಾತ್ಮನೇ, ನಾನು ನಿಮ್ಮ ಅಪ್ಪಣೆಯಿಂದ ಆ ಕನ್ನಿಕೆಯೂ ಆಕೆಯ ಸಂಗಾತಿಗಳೂ ಅಲ್ಲದೆ ಮಿಕ್ಕ ಕಾವಲುಗಾರರೊಬ್ಬರೂ ನನ್ನ ಅರಿಯದೆ ಹೋದ್ದರಿಂದ, ಆಕೆಯ ಬಳಿಗೆ ಹೋಗಿ, ನಿಜವಾಗಿ ನಿಮ್ಮ ನಾಲ್ವರಲ್ಲಿ ಒಬ್ಬರನ್ನು ವರಿಸು ಎಂದು ಎಷ್ಟು ಬಗೆಯಲ್ಲಿ ಕೈ ಮುಗಿದು, ಬೇಡಿ ಕೊಂಡಾಗ್ಯೂ, ಒಪ್ಪದೆ, ಅವಳು—ನಿನ್ನನ್ನೇ ಹೊರತಾಗಿ ಮತ್ತೊಬ್ಬರನ್ನು ವರಿಸುವದಿಲ್ಲ. ಸ್ವಯಂವರದಲ್ಲಿ ಆ ದೇವತೆಗಳ ಮುಂದೆಯೇ ಅವರ ಕಟಾಕ್ಷದಿಂದ ನಿನ್ನನ್ನೇ ವರಿಸುತ್ತೇನೆ. ಹಾಗಾದರೆ, ನಿನ್ನ ಮೇಲೆ ತಪ್ಪಿರುವದಿಲ್ಲ; ಹೋಗು ಎಂದು, ಖಂಡಿತವಾಗಿ ಹೇಳಿ, ಕಳುಹಿಸಿದಳು. ನಾನು ನಡೆದ ವಿವರವನ್ನು

ನಿಮಗೆ ನಿಜವಾಗಿ ತಿಳಿಸಿದ್ದೇನೆ. ನೀವು ಮಹಾತ್ಮರಾದ್ದರಿಂದಲೂ, ಎಲ್ಲಾ ಜನರ ಮನೋಭಾವಗಳನ್ನು ತಿಳಿಯುವಂಥಾವರಾದ್ದರಿಂದಲೂ, ನಾನು ನಿಜಗಾರನೋ, ಸುಳ್ಳುಗಾರನೋ, ಎಂಬುವದನ್ನು ನಿಮ್ಮ ಮನಸ್ಸಿನಲ್ಲಿ ನೀವೇ ತಿಳುಕೊಂಡು, ನಿಮ್ಮ ಬುದ್ಧಿಗೆ ತೋರಿದ ಹಾಗೆ ನಡೆಯ ಬಹುದು ಎಂದು ಹೇಳಿದನು. ಆಗ ಲೋಕಪಾಲಕರು ತಮ್ಮ ಮನಸ್ಸಿನಲ್ಲಿ, ಇವನಲ್ಲಿ ವಂಚನೆ ಇಲ್ಲ ಎಂದು ಎಣಿಸಿ, ಈತಗೆ ಅಪ್ಪಣೆಯನ್ನು ಕೊಟ್ಟು, ಕಳುಹಿಸಿದರು.

ಆ ಬಳಿಕ ಒಂದು ಶುಭ ದಿವಸದಲ್ಲಿ ಭೀಮ ಭೂಪಾಲಕನು ದಮಯಂತಿಯ ಸ್ವಯಂವರ ಮಂಟಪವನ್ನು ಶೃಂಗರಿಸಿ, ಎಲ್ಲಾ ಅರಸು ಮಕ್ಕಳನ್ನು ಸ್ವಯಂವರ ಮಂಟಪಕ್ಕೆ ಬರ ಹೇಳಿ ಕಳುಹಿಸಲು; ಅವರೆಲ್ಲರು ದಮಯಂತಿಯಲ್ಲಿ ಶಿಕ್ಕಿರುವ ಮನಸ್ಸುಳ್ಳವರಾಗಿ, ಉಡಿಗೆ ತೊಡಿಗೆಗಳನ್ನು ಉಟ್ಟು, ತೊಟ್ಟು, ತಮ್ಮ ತಮ್ಮ ಪರಿವಾರ ಜನಗಳೊಡನೆ ಕೂಡಿ, ಚಿನ್ನದ ಕಂಭಗಳಿಂದಲೂ, ಮಕರ ತೋರಣಗಳಿಂದಲೂ ಅಲಂಕರಿಸಿ ಇರುವ ಸ್ವಯಂವರ ಮಂಟಪವನ್ನು, ಸಿಂಹಗಳು ಪರ್ವತದ ಗುಹೆಗಳನ್ನು ಹ್ಯಾಗೋ, ಹಾಗೆ ಹೊಕ್ಕು, ಚಿನ್ನದ ಸಿಂಹಾಸನಗಳಲ್ಲಿ ಕುಳಿತು ಕೊಂಡು ಇರಲು; ಆ ರಂಗ ಮಂಟಪವು ನಾಗೇಂದ್ರರಿಂದ ಹೊಳೆಯುತ್ತಲಿರುವ ಭೋಗವತೀ ಪುರದ ಹಾಗೆಯೂ, ಹುಲಿಗಳಿಂದ ನಿಬಿಡವಾಗಿರುವ ಗಿರಿ ಗುಹೆಗಳ ಚಂದದಿಂದಲೂ ಹೊಳೆಯುತ್ತಿತ್ತು. ಆ ಸ್ವಯಂವರ ಮಂಟಪದಲ್ಲಿ ದೇವೇಂದ್ರನು ಮೊದಲಾದ ಲೋಕಪಾಲಕರು ಒಂದು ಸ್ಥಳದಲ್ಲಿ ಬಂದು ಕುಳಿತಿದ್ದರು. ಆಗ ಪೂರ್ಣ ಚಂದ್ರಮುಖಿಯಾದ ದಮಯಂತಿಯು ತನ್ನ ಅಂದ ಚಂದಗಳಿಂದ ಎಲ್ಲಾ ಅರಸು ಮಕ್ಕಳ ಹೃದಯಗಳಿಗೂ ಸಂತೋಷವನ್ನು ಸುರಿಯುತ್ತಾ, ಸಖೀ ಜನಗಳೊಡನೆ ಕೂಡಿ, ಸ್ವಯಂವರ ಮಂಟಪವನ್ನು ಹೊಕ್ಕು, ಬರುತ್ತಿರಲು; ಆ ರಾಜ ಕುಮಾರಕರ ಕಡೆಗಣ್ಣಿ ನೋಟಗಳು ಚೆಲುವೆಯಾದ ದಮಯಂತಿಯ ಅಂಗಾಂಗಗಳಲ್ಲಿ ಮೊದಲು ನೋಡಿದ ತಾವನ್ನು ಬಿಟ್ಟು, ಆಚೆಗೆ ಹೋಗದೆ ಹೋಯಿತು.

ಆ ಸಮಯದಲ್ಲಿ ಕಟ್ಟಿಗೆಯವರೇ ಮೊದಲಾದವರು ದಮಯಂತಿಯ ಸಮೀಪಕ್ಕೆ ಬಂದು, ಎಲ್ಲಾ ಅರಸು ಮಕ್ಕಳ ಕುಲಗಳನ್ನೂ ಹೆಸರುಗಳನ್ನೂ ಕೀರ್ತಿಗಳನ್ನೂ ಪ್ರತಾಪಗಳನ್ನೂ ವಿಂಗಡಿಸಿ, ವಿಂಗಡಿಸಿ ಹೇಳಿ, ತೋರಿಸುತ್ತಿರಲು; ಆ ದಮಯಂತಿಯು ಅವರೆಲ್ಲರನ್ನು ಕಡೆಗಣ್ಣಿನಲ್ಲಾದರೂ ನೋಡದೆ, ಅರಸು ಮಕ್ಕಳ ನಡುವೆ ನಳಾಕೃತಿಯನ್ನು ಧರಿಸಿ ಕೊಂಡಿರುವ ನಾಲ್ವರು ಲೋಕಪಾಲಕರ ಕೂಡ ನಳನು ಕುಳಿತಿರುವಲ್ಲಿಗೆ ಬಂದು, ಈ ಐವರು ಅಷ್ಟೇ

ದವಾಗಿ ವಯೋ ರೂಪುಗಳಿಂದ ಒಂದೇ ಪ್ರಕಾರವಾಗಿ ಇರುವದರಿಂದಲೂ, ದೊಡ್ಡವರು ಹೇಳುವಂಥ ದೇವತೆಗಳ ಗುರುತುಗಳೊಳಗೆ ಒಂದು ಗುರುತಾದರೂ ಕಾಣಿಸದೆ ಇರುವದರಿಂದಲೂ, ಈ ಐದು ಮಂದಿಯೊಳಗೆ ನಳನು ಯಾರೆಂದು ತಿಳಿಯುವೆನು? ಇದಕ್ಕೇನು ಮಾಡಲಿ? ಎಂದು, ಬಹಳ ಚಿಂತೆಯಿಂದ ತನ್ನ ಮನಸ್ಸಿನಲ್ಲಿ—ನಾನು ಈ ದೇವತೆಗಳನ್ನೇ ಶರಣವನ್ನು ಹೊಂದಿ ಬೇಡಿ ಕೊಳ್ಳುವದೇ ಉಚಿತವೆಂದು ಎಣಿಸಿ, ಅವರಿಗೆ ನಮಸ್ಕಾರವನ್ನು ಮಾಡಿ, ಕೈ ಮುಗಿದು, ಭಯದಿಂದ ನಡನಡುಗುತ್ತಾ—ಎಲೈ, ಮಹಾತ್ಮರುಗಳಿರಾ, ನಿಮ್ಮಿಂದಲೇ ಲೋಕದ ಜನರೆಲ್ಲಾ ಧರ್ಮಿಷ್ಠರಾಗಿಯೂ ಸತ್ಯವಂತರಾಗಿಯೂ ನಡೆಯುವರು. ಪಾಪಿಷ್ಠರಾಗಿಯೂ ಅಸತ್ಯವಂತರಾಗಿಯೂ ನಡೆಯುವಂಥಾ ಜನಗಳು ನಿಮ್ಮಿಂದಲೇ ಶಿಕ್ಷೆಯನ್ನು ಹೊಂದುವರು. ಇಂಥಾ ಧರ್ಮದೇವತೆಗಳು ನೀವಾದ್ದರಿಂದ, ನಿಮ್ಮ ಪಾದವನ್ನು ಶರಣವನ್ನಾಗಿ ಹೊಂದಿದ್ದೇನೆ. ನಿಮ್ಮ ದಾಸಿಯಾದ ನನ್ನನ್ನು ದಯದಿಂದ ಕಾಪಾಡ ಬೇಕು. ರಾಜ ಹಂಸವು ನನ್ನ ಸಮೀಪಕ್ಕೆ ಬಂದು, ನಳನ ರೂಪು ರೇಖೆಗಳನ್ನೂ ಸದ್ಗುಣಗಳನ್ನೂ ಹೇಳಿದ ಮೊದಲು ಗೊಂಡು—ಆತನೇ ನನಗೆ ಪ್ರಾಣಕಾಂತನೆಂದು, ನನ್ನ ತ್ರಿಕರಣ ಶುದ್ಧವಾಗಿ ನಿಶ್ಚೈಸಿ ಇದ್ದೇನೆ. ಆತನನ್ನು ಬಿಟ್ಟು, ಮತ್ತೊಬ್ಬನನ್ನು ಮದುವೆಯಾಗುವದಕ್ಕೆ ನನ್ನ ಮನಸ್ಸು ಬರುವದಿಲ್ಲ. ಸತ್ಯವಾಗಿ ನುಡಿಯುತ್ತೇನೆ. ನನಗೆ ನಳನೇ ಪ್ರಾಣನಾಯಕನೆಂದು ಮೊದಲೇ ನೀವು ನಿಯಮಿಸಿ ಇದ್ದದ್ದರಿಂದ ನನಗೂ ಹಾಗೇ ಅಪೇಕ್ಷೆ ಹುಟ್ಟಿತು. ನನ್ನ ಪಾತಿವ್ರತ್ಯವು ಕೆಡದ ಹಾಗೂ, ನನ್ನ ಅಭೀಷ್ಟವು ನೆರವೇರುವ ಹಾಗೂ, ನಿಮ್ಮ ಸಂಕಲ್ಪವು ಸತ್ಯವಾಗುವ ಹಾಗೂ, ನನ್ನ ಮೇಲೆ ದಯದಿಂದ ನಿಜವಾದ ನಳನ ರೂಪೇ ನನಗೆ ತೋರುವ ಹಾಗೆ ಅನುಗ್ರಹಿಸಿ ಎಂದು, ದೈನ್ಯದಿಂದ ಬೇಡಿ ಕೊಂಡಳು.

ಆ ಮಾತನ್ನು ಇಂದ್ರಾದಿ ಲೋಕಪಾಲಕರು ಕೇಳಿ, ಇದಷ್ಟೂ ನಿಜವೆಂದು ತಿಳಿದು, ಆಕೆಗೆ ನಳನ ಆಕಾರವು ತಿಳಿಯುವ ಹಾಗೆ ಅನುಗ್ರಹಿಸಿದರು. ಆಗ ದಮಯಂತಿಯು ಬೆವರಿಲ್ಲದ ಮೈಯುಳ್ಳವರಾಗಿ, ಎವೆಯನ್ನು ಹಾಕದೆ, ಬಾಡದೆ ಇರುವ ಹೂವಿನ ಮಾಲಿಕೆಗಳನ್ನು ಧರಿಸಿ, ಭೂಮಿಯಲ್ಲಿ ಇದ್ದರೂ, ಭೂಮಿಯನ್ನು ಮುಟ್ಟದೆ ಇರುವ ಗುರುತುಗಳನ್ನು ನೋಡಿ, ಇವರು ಲೋಕಪಾಲಕರೆಂದು ತಿಳಿದು, ತಲೆ ಬಾಗಿ, ಕೈ ಮುಗಿದು, ಆ ಬಳಿಕ ಬಾಡಿರುವ ಹೂ ಸರವನ್ನು ಮುಡಿದು, ಎವೆಯ ಹಾಕುವ ಕಣ್ಣುಗಳುಳ್ಳವನಾಗಿ, ಭೂಮಿಯನ್ನೊತ್ತಿ ಕುಳಿತಿರುವ ನಳನನ್ನು ನೋಡಿ—ಇವನೇ ನನ್ನ ಗಂಡನೆಂದು ವರಿಸಿ,

ತನ್ನ ಕೈಯಲ್ಲಿ ಇದ್ದ ಹೂವಿನ ಸರವನ್ನು ದೇವತೆಗಳ ಮುಂದೆಯೇ ಆತನ ಕುತ್ತಿಗೆಯಲ್ಲಿ ಹಾಕಿದಳು. ಆಗ ಇಂದ್ರನೇ ಮೊದಲಾದ ದೇವತೆಗಳು ಸಂತೋಷ ಪಟ್ಟು, ಆತನ ಯಜ್ಞ ಸಮಯದಲ್ಲಿ ಹವಿರ್ಭಾಗಗಳನ್ನು ಪ್ರತ್ಯಕ್ಷವಾಗಿ ಬಂದು ತೆಗೆದು ಕೊಳ್ಳುವ ಹಾಗೂ, ಆತನಿಗೆ ಪುಣ್ಯ ಲೋಕವು ಆಗುವ ಹಾಗೂ, ಎರಡು ವರಗಳನ್ನು ಇಂದ್ರನು ಕೊಟ್ಟನು. ಯಜ್ಞೇಶ್ವರನು, ನಳನು ನೆನದಾಗಲೇ ತಾನು ಪ್ರತ್ಯಕ್ಷನಾಗುವ ಹಾಗೂ, ಆತನಿಗೆ ತನ್ನ ಲೋಕಗಳು ಉಂಟಾಗುವ ಹಾಗೂ, ಎರಡು ವರಗಳನ್ನು ಕೊಟ್ಟನು. ಯಮನು, ನಳನು ಅಟ್ಟ ಅನ್ನ ಮೊದಲಾದವುಗಳಿಗೆ ರುಚಿ ಹುಟ್ಟುವ ಹಾಗೂ, ಆತನ ಹೃದಯವು ಧರ್ಮದಲ್ಲಿಯೇ ಆಸಕ್ತವಾಗಿರುವ ಹಾಗೂ, ಎರಡು ವರಗಳನ್ನು ಕೊಟ್ಟನು. ವರುಣನು, ಆತನು ನೆನಸಿದ ತಾವಿನಲ್ಲಿ ನೀರುಗಳುಂಟಾಗುವ ಹಾಗೂ, ಆತನು ಹಾಕಿ ಕೊಂಡಿರುವ ಹೂವಿನ ಹಾರಗಳು ಬಾಡದೆ, ಪರಿಮಳಿಸುತ್ತಾ ಇರುವ ಹಾಗೂ, ಎರಡು ವರಗಳನ್ನು ಕೊಟ್ಟನು. ಈ ಪ್ರಕಾರ ನಾಲ್ಕು ಮಂದಿ ಲೋಕ ಪಾಲಕರು ಎಂಟು ವರಗಳನ್ನು ಕೊಟ್ಟು, ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ಆ ಸಮಯದಲ್ಲಿ ಅಲ್ಲಿ ನಡೆದ ವೃತ್ತಾಂತವಷ್ಟು ನಳನಿಗೂ ದಮಯಂತಿಗೂ ಎಲ್ಲಾ ಅರಸುಗಳಿಗೂ ಕನಸಾಗಿ ತೋರಿತು. ಆ ಬಳಿಕ ಭೀಮ ಭೂಪಾಲನು ಮಹಾ ವೈಭವದಿಂದ ನಳ ಚಕ್ರೇಶ್ವರನಿಗೂ ದಮಯಂತಿಗೂ ನೆರೆದ ಅರಸುಗಳ ಮುಂದೆ ಮದುವೆಯನ್ನು ಮಾಡಿಸಿದನು. ಆ ಸಂತೋಷವನ್ನು ನೋಡಿ, ಎಲ್ಲರು ತಮ್ಮ ತಮ್ಮ ದೇಶಗಳಿಗೆ ಹೊರಟು ಹೋದರು. ಆ ಮೇಲೆ ನಳನು ನಾರೀ ರತ್ನವಾದ ದಮಯಂತಿಯೊಡನೆ ಕೂಡಿ, ಶಚೀ ದೇವಿಯೊಡನೆ ಕೂಡಿದ ಇಂದ್ರನೋಪಾದಿಯಲ್ಲಿ ಭೀಮರಾಯನ ಅಪ್ಪಣೆಯನ್ನು ತೆಗೆದು ಕೊಂಡು, ತನ್ನ ಪಟ್ಟಣಕ್ಕೆ ಹೋಗಿ, ಸಕಲ ಭೂಮಂಡಲವನ್ನು ಪಾಲಿಸುತ್ತಾ, ಸೂರ್ಯನ ಹಾಗೆ ತೇಜಸ್ಸುಳ್ಳವನಾಗಿ, ನಹುಷನ ಮಗನಾದ ಯಯಾತಿ ರಾಯನ ಹಾಗೆ ಅಶ್ವಮೇಧ ಮೊದಲಾದ ಬಹಳ ಯಜ್ಞಗಳನ್ನು ಮಾಡುತ್ತಾ, ಹೂದೋಟಗಳಲ್ಲಿರುವ ಕೊಳಗಳಲ್ಲಿ ದಮಯಂತಿಯೊಡನೆ ಲೀಲಾ ವಿಲಾಸಗಳಿಂದ ಹೊತ್ತನ್ನು ಕಳೆಯುತ್ತಾ, ಸಮಸ್ತ ವಸ್ತುಗಳಿಂದ ತುಂಬಿರುವ ಭೂಮಂಡಲದಲ್ಲಿ ಎರಡನೇ ದೇವೇಂದ್ರನೋಪಾದಿಯಲ್ಲಿ ಸುಖವಾಗಿದ್ದನು.

ಇತ್ತಲು ದೇವೇಂದ್ರನು ಮೊದಲಾದ ಲೋಕಪಾಲಕರು ತಮ್ಮ ತಮ್ಮ ಸ್ಥಾನಗಳಿಗೆ ಹೋಗುವ ದಾರಿಯಲ್ಲಿ, ದ್ವಾಪರನೊಡನೆ ಕೂಡಿ ಹೋಗುತ್ತಲಿ

ರುವ ಕಲಿಯನ್ನು ನೋಡಿ, ದೇವೇಂದ್ರನು—ನೀವಿಬ್ಬರು ಎಲ್ಲಿಗೆ ಹೋಗುತ್ತೀರಿ? ಎಂದು ಕೇಳಲು; ಕಲಿ ಪುರುಷನು—ದಮಯಂತಿಯನ್ನು ವರಿಸ ಬೇಕೆಂದು, ಆಕೆಯ ಸ್ವಯಂವರಕ್ಕೆ ಹೋಗುತ್ತೇನೆ, ಅಂದನು. ಇಂದ್ರನು ನಸು ನಕ್ಕು, ಕಲಿ ಪುರುಷನನ್ನು ಕುರಿತು—ವೀರಸೇನನ ಮಗನಾದ ನಳಚಕ್ರೇಶ್ವರನು ಅವಳನ್ನು ಮದುವೆಯಾದನು. ಇನ್ನು ಯಾಕೆ ಹೋಗುತ್ತೀ? ಅಂದನು. ಕಲಿಯು ಕೋಪಿಸಿ ಕೊಂಡು—ನಿಮ್ಮಂಥ ಲೋಕಪಾಲಕರನ್ನೆಲ್ಲಾ ನಿರಾಕರಿಸಿ, ಒಬ್ಬ ಮನುಷ್ಯ ಮಾತ್ರನಾದ ನಳನನ್ನು ವರಿಸಿದ ಆ ದಮಯಂತಿಯನ್ನು ಶಿಕ್ಷಿಸ ಬೇಕು, ಎನಲು; ದೇವೇಂದ್ರನು—ಯಾಕೆ ನೀನು ಇಷ್ಟು ಕೋಪಾ ಮಾಡುತ್ತೀ? ದಮಯಂತಿಯು ದೇವತೆಗಳ ಅಪ್ಪಣೆಯನ್ನು ಪಡೆದು, ನಳನನ್ನು ಮದುವೆಯಾಗಿ ಇದ್ದಾಳೆ. ಸಕಲ ಧರ್ಮ ಶಾಸ್ತ್ರಗಳನ್ನೂ ವೇದಗಳನ್ನೂ ಇತಿಹಾಸ ಪುರಾಣಗಳನ್ನೂ ತಿಳಿದು, ಸಕಲ ಗುಣಗಳೊಡನೆ ಕೂಡಿ, ಅನೇಕ ಯಜ್ಞಗಳನ್ನು ಮಾಡಿ, ದಯಾಶಾಲಿಯಾಗಿ, ದಾನಶೀಲನಾಗಿ, ಧೀರನಾಗಿ, ಸತ್ಯವ್ರತನಾಗಿ, ತಪೋನಿಷ್ಠನಾಗಿ, ಕ್ಷಮಾವಂತನಾಗಿ, ಲೋಕ ಪಾಲಕರಿಗೆ ಸರಿಯಾದ ಆ ನಳ ಭೂಪಾಲಕನಲ್ಲಿ ಯಾವವನು ದ್ರೋಹವನ್ನು ಮಾಡಲು ಎಣಿಸುವನೋ, ಅವನು ನರಕದಲ್ಲಿ ಮುಳುಗುವನು, ಎಂದು ನುಡಿದನು. ಆ ಬಳಿಕ ದಿಕ್ಪಾಲಕರು ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

ಕಲಿ ಪುರುಷನು ದ್ವಾಪರನನ್ನು ನೋಡಿ—ನನಗೆ ನಳನಲ್ಲಿ ಅತಿ ಕೋಪ ಉಂಟಾಗಿರುವದರಿಂದ, ಯಾವ ರೀತಿಯಿಂದಲಾದರೂ ಆತನಿಗೆ ರಾಜ್ಯವನ್ನು ತಪ್ಪಿಸಿ, ಆತನು ದಮಯಂತಿಯನ್ನು ಅಗಲಿ ಹೋಗುವ ಹಾಗೆ ಮಾಡುತ್ತೇನೆ. ನೀನು ದಾಳಗಳಲ್ಲಿ ಹೊಕ್ಕು, ನನಗೆ ಸಹಾಯವನ್ನು ಮಾಡ ಬೇಕು ಎಂದು ಹೇಳಿ, ಅವನನ್ನು ಒಡಗೊಂಡು, ನಿಷಧ ಪಟ್ಟಣಕ್ಕೆ ಹೋಗಿ, ತಾನು ನಳನ ಶೇರುವದಕ್ಕೆ ಹನ್ನೆರಡು ವರುಷಗಳ ಪರಿಯಂತರವು ಹೊಂಚಿ ಕೊಂಡು ಇರಲು; ಒಂದು ದಿವಸ ನಳನು ಶುಚಿ ಮಾಡಿ ಕೊಳ್ಳದೆ, ಸಂಧ್ಯಾವಂದನೆಯನ್ನು ಮಾಡಿದ್ದರಿಂದ—ಇದೇ ಸಮಯವೆಂದು, ಅವನಲ್ಲಿ ಹೊಕ್ಕು, ಆತನ ಒಡಹುಟ್ಟಾದ ಪುಷ್ಕರನ ಬಳಿಗೆ ಹೋಗಿ,—ನೀನು ನನ್ನ ಸಹಾಯದಿಂದ ನಳನನ್ನು ಜೈಸಿ, ಆತನ ಎಲ್ಲಾ ರಾಜ್ಯವನ್ನು ಕಳೆದುಕೋ ಎಂದು ನುಡಿದು, ತಾನು ಒಂದು ಎತ್ತಿನ ರೂಪವನ್ನು ಧರಿಸಿ, ಆತನ ಸಂಗಡಲೇ ಬಂದನು. ಪುಷ್ಕರನು ಮಹಾನುಭಾವನಾದ ನಳನ ಬಳಿಗೆ ಬಂದು—ನಾನು ಒಂದು ಎತ್ತನ್ನು ತಂದಿದ್ದೇನೆ. ಇದಕ್ಕೆ ಪಂಥವನ್ನು ಹಾಕಿ, ಜೂಜಾಡುವ ಬಾ, ಎಂದು

ಕರೆಯಲು; ದಮಯಂತಿ ನೋಡುವ ಹಾಗೆಯೇ ದೈವಗತಿಯಿಂದ ಚಿನ್ನ, ಬೆಳ್ಳಿ, ಆನೆ, ಕುದುರೆ, ಮೊದಲಾದ ವಾಹನಗಳನ್ನೂ ನವರತ್ನಗಳ ಒಡವೆಗಳನ್ನೂ ಪಂಥಕ್ಕೆ ಒಡ್ಡಿ, ನಳನು ತನ್ನ ತಮ್ಮ ಪುಷ್ಕರನೊಡನೆ ಜೂಜಾಡಿ, ಎಲ್ಲವನ್ನು ಸೋತನು. ಆ ಬಳಿಕ ಮಂತ್ರಿಗಳೂ ಪಟ್ಟಣದಲ್ಲಿರುವ ಜನಗಳೂ ಆ ಜೂಜನ್ನು ನಿಲ್ಲಿಸ ಬೇಕೆಂದು ಎಣಿಸಿ, ಅರಮನೆಯ ಬಾಗಿಲಿಗೆ ಬರಲು; ಕಾವಲುಗಾರರು ತಡೆಯಲಾಗಿ,—ನಾವು ಬಂದಿರುವದನ್ನು ದಮಯಂತಿಗೆ ತಿಳಿಸಿರಿ ಎಂದು ಹೇಳಿ ಕಳುಹಿಸಿದರು. ಆಗ ನಳನ ಸಾರಥಿಯು ಆಕೆಯ ಬಳಿಗೆ ಹೋಗಿ, ಅವರು ಬಂದಿರುವದನ್ನು ತಿಳಿಸಲು; ದಮಯಂತಿಯು ಕಣ್ಣೀರನ್ನು ತುಂಬಿ, ನಳನ ಸನ್ನಿಧಾನಕ್ಕೆ ಹೋಗಿ,—ಎಲೈ, ಭೂಪಾಲಕನೇ, ಮಂತ್ರಿಗಳೂ ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಶೂದ್ರರೂ ಮೊದಲಾದ ಜನಗಳು ನಿನ್ನನ್ನು ನೋಡ ಬೇಕೆಂದು, ನಿನ್ನ ಸಮಯವನ್ನು ನೋಡುತ್ತಾ, ಹಜಾರದಲ್ಲಿ ಕಾದು ಕೊಂಡಿದ್ದಾರೆ. ಅವರಿಗೆ ಏನು ಅಪ್ಪಣೆ? ಎಂದು ಕೇಳಲು; ನಳನು ಕಲಿಪುರುಷನ ಮಹಿಮೆಯಿಂದ ಉದಾಸೀನವನ್ನು ಮಾಡಿ, ದಮಯಂತಿಯ ಮಾತನ್ನು ಕಿವಿಗೆ ಹಾಕಿ ಕೊಳ್ಳದೆ, ಪ್ರತ್ಯುತ್ತರವನ್ನು ಕೊಡದೆ ಇರಲು; ಅದಷ್ಟನ್ನು ತಿಳಿದು, ಅವರೆಲ್ಲಾ ನಳನಲ್ಲಿ ಆಶೆಯನ್ನು ಬಿಟ್ಟು, ತಮ್ಮ ತಮ್ಮ ಮನೆಗಳಿಗೆ ಹೋದರು.

ಆ ಮೇಲೆ ದಮಯಂತಿಯು—ಅಕ್ಷವಿದ್ಯಾ ಸಮರ್ಥನಾದ ಈ ಪುಷ್ಕರನು ಗಂಡನ ರಾಜ್ಯವನ್ನೆಲ್ಲಾ ಕಳೆದು ಕೊಂಡು, ದೇಶಾಂತರಕ್ಕೆ ಅಟ್ಟುವನು ಎಂದು ನಿಶ್ಚೈಸಿ, ನಳನ ಸಾರಥಿಯಾದ ವಾರ್ಷ್ಣೇಯನೆಂಬವನನ್ನು ಏಕಾಂತದಲ್ಲಿ ಕರಿಸಿ,—ನಳನ ಬುದ್ಧಿಯು ವಿಪರೀತವಾಗಿದೆ; ನಮಗೆ ಆಪತ್ತು ಬರುವದು ಸಿದ್ಧವು. ಇಂಥ ಸಮಯದಲ್ಲಿ ನೀನು ನಮಗೆ ಒಂದು ಉಪಕಾರವನ್ನು ಮಾಡ ಬೇಕು. ಅದೇನಂದರೆ, ನಳನ ಇಂದ್ರಸೇನನೆಂಬ ಮಗನನ್ನೂ ಇಂದ್ರಸೇನೆ ಎಂಬ ಮಗಳನ್ನೂ ನಳನಿಗೆ ಅತ್ಯಂತ ಪ್ರಿಯಗಳಾದ ಕುದುರೆಗಳೊಡನೆ ಕೂಡಿರುವ ಆತನ ರಥದ ಮೇಲೆ ಕೂರಿಸಿ ಕೊಂಡು, ಕುಂಡಿನ ಪಟ್ಟಣಕ್ಕೆ ಹೋಗಿ, ನನ್ನ ತಂದೆಯಾದ ಭೀಮ ಭೂಪಾಲನಿಗೆ ಒಪ್ಪಿಸಿ, ಆ ಮೇಲೆ ನಿನ್ನ ಮನಸ್ಸು ಬಂದ ಕಡೆಗೆ ಹೋಗು ಎಂದು ಹೇಳಲು; ಆ ವಾರ್ಷ್ಣೇಯನು ಆ ಮಾತನ್ನು ಮಂತ್ರಿಗಳಿಗೆ ತಿಳಿಸಿದನು. ಅವರೆಲ್ಲರು ಏಕಾಲೋಚನೆಯನ್ನು ಮಾಡಿ, ನಿಶ್ಚೈಸಿ,—ಹಾಗೆ ಮಾಡು ಎಂದು, ನುಡಿದರು. ತರುವಾಯ ವಾರ್ಷ್ಣೇಯನು ಆ ಶಿಶುಗಳನ್ನು ರಥದ ಮೇಲೆ ಇರಿಸಿ ಕೊಂಡು, ಕುಂಡಿನ ಪಟ್ಟಣಕ್ಕೆ ಹೋಗಿ,

ಭೀಮ ಭೂಪಾಲನಿಗೆ ಒಪ್ಪಿಸಿ, ಆತನ ಅಪ್ಪಣೆಯನ್ನು ತೆಕೊಂಡು, ನಳನಿಗೆ ಬಂದ ಅನರ್ಥವನ್ನು ಎಣಿಸಿ, ಸಂಕಟ ಪಡುತ್ತಾ, ನಳನಲ್ಲಿ ಆಶೆಯನ್ನು ತೊರೆದು, ಇನ್ನು ಎಲ್ಲಿಗೆ ಹೋಗ ಬೇಕೆಂದು ಯೋಚಿಸುತ್ತಾ, ಅಯೋಧ್ಯಾ ಪಟ್ಟಣಕ್ಕೆ ಹೋಗಲು; ಅಲ್ಲಿಗೆ ಅರಸಾದ ಋತುಪರ್ಣ ರಾಯನು ಆತನ ಸಾರಥಿತನದ ಜಾಣತನವನ್ನು ನೋಡಿ, ಮೆಚ್ಚಿ, ಬೇಕಾದ ವಸ್ತುಗಳನ್ನು ಕೊಟ್ಟು, ಬಹುಮಾನದಿಂದ ತನ್ನ ಸಾರಥ್ಯದ ಕೆಲಸದಲ್ಲಿ ಇಟ್ಟು ಕೊಂಡನು.

ಇತ್ತಲಾ ಪುಷ್ಕರನು ನಳನನ್ನು ನೋಡಿ—ನಿನ್ನ ಬೊಕ್ಕಸ ಭಂಡಾರವನ್ನೂ ರಾಜ್ಯವನ್ನೂ ಜೂಜಿನಲ್ಲಿ ಗೆದ್ದೆನು. ಇನ್ನೇನಾದರೂ ಪಂಥವನ್ನು ಒಡ್ಡುವದಕ್ಕೆ ಮತ್ತೇನೂ ನಿನಗಿಲ್ಲ. ನಿನ್ನ ಹೆಂಡತಿಯಾದ ದಮಯಂತಿ ಒಬ್ಬಳು ಇದ್ದಾಳೆ. ಅವಳನ್ನು ಪಂಥಕ್ಕೆ ಒಡ್ಡುವದಕ್ಕೆ ನಿನಗೆ ಮನಸ್ಸಾದರೆ, ಒಡ್ಡು; ಆಡುವಾ, ಅಂದನು. ಆ ಮಾತುಗಳು ನಳನ ಎದೆಯನ್ನು ಶೀಳಲು; ಕೆಲವು ಹೊತ್ತು ಸುಮ್ಮನೇ ಇದ್ದು, ಆ ಮೇಲೆ ಆತನನ್ನು ಕೋಪದಿಂದ ಚುರುಚುರನೆ ನೋಡಿ—ಎಲೈ, ನರಾಧಮನೇ, ನನಗೆ ಇನ್ನೂ ಬೇಕಾದಷ್ಟು ಧನಗಳಿವೆ ಎಂದು ನುಡಿದು, ಒಂದು ಮಾಂಗಲ್ಯಸೂತ್ರ ಹೊರತಾಗಿ ಮಿಕ್ಕ ದಮಯಂತಿಯು ಧರಿಸಿ ಇದ್ದ ಒಡವೆಗಳನ್ನೂ ತಾನು ಹೊದ್ದ ಬಟ್ಟೆಯನ್ನೂ ಪಂಥಕ್ಕೆ ಒಡ್ಡಿ, ಸೋತು, ಉಟ್ಟ ಬಟ್ಟೆಯಲ್ಲಿ ಪಟ್ಟಣವನ್ನು ಬಿಟ್ಟು ಹೋಗುವಲ್ಲಿ, ದಮಯಂತಿಯು ಸಂಗಡಲೇ ಬರಲು; ಅವರಿಬ್ಬರು ಹೋಗಿ, ಪಟ್ಟಣದ ಸಮೀಪದಲ್ಲಿ ಆ ರಾತ್ರಿ ಇರಲು; ದುಷ್ಟನಾದ ಪುಷ್ಕರನು—ಯಾರಾದರು ನಳನಿಗೆ ಅನ್ನೋದಕಗಳಿಂದ ಉಪಚಾರವನ್ನು ಮಾಡಿದರೆ, ಅವರನ್ನು ಕೊಲ್ಲಿಸುತ್ತೇನೆ ಎಂದು ಸಾರಿಸಿದ್ದರಿಂದ, ಒಬ್ಬರೂ ನಳನಿಗೆ ಊಟ ಉಪಚಾರಗಳನ್ನು ಮಾಡಿಸದೆ ಹೋದರು.

ಆಗ ದಮಯಂತಿಯೂ ನಳನೂ ಜಲಪಾನವನ್ನು ಮಾಡಿ, ಹಸಿವಿನಿಂದ ಪೀಡಿತರಾಗಿ, ಮುಂದೆ ಬರುತ್ತಿರುವಲ್ಲಿ, ಚಿನ್ನದ ರೆಕ್ಕೆಗಳಿಂದ ಕೂಡಿರುವ ಕೆಲವು ಹಕ್ಕಿಗಳು ನಳನ ಸಮೀಪಕ್ಕೆ ಹಾರಿ ಬರಲು; ಅವುಗಳನ್ನು ನೋಡಿ, ಈ ಹಕ್ಕಿಗಳನ್ನು ಹಿಡಿದು ಕೊಂಡರೆ, ಹೊಟ್ಟೆ ತುಂಬಾ ಅನ್ನವೂ, ಚಿನ್ನವೂ ಉಂಟಾಗುತ್ತದೆ ಎಂದು ಎಣಿಸಿ, ತಾನು ಉಟ್ಟಿರುವ ಬಟ್ಟೆಯನ್ನು ಕಳೆದು, ಅವುಗಳನ್ನು ಹಿಡಿಯುವದಕ್ಕೆ ಹಾಕಲು; ಆ ಹಕ್ಕಿಗಳು ಆ ಬಟ್ಟೆಯನ್ನು ಎತ್ತಿಕೊಂಡು, ಆಕಾಶಕ್ಕೆ ಹಾರಿ ಹೋದವು. ಆಗ ನಳನು ಬೆತ್ತಲೆ ನಿಂತು, ನಾಚಿಕೆಯಿಂದ ಮೊಗವನ್ನು ಬೊಗ್ಗಿಸಿ ಕೊಂಡಿರುವದನ್ನು ನೋಡಿ, ಆ ಹಕ್ಕಿಗಳು—

ಎಲೈ, ನರೇಂದ್ರನೇ, ನಮ್ಮನ್ನು ದಾಳಗಳು ಎಂದು ತಿಳುಕೋ ಎಂಬದಾಗಿ ಹೇಳಿ, ಮಾಯವಾದವು. ಆ ಮೇಲೆ ನಳನು ದಮಯಂತಿಯನ್ನು ನೋಡಿ–ನಾನು ಬೆತ್ತಲೆ ಬರುವದಕ್ಕೆ ನಾಚಿ ಕೊಳ್ಳುತ್ತೇನೆ. ನಿಮ್ಮ ತಂದೆಯ ಕುಂಡಿನ ನಗರವು, ಇಗೋ, ಕಾಣುತ್ತದೆ; ಹೋಗು ಎಂದು ಹೇಳಲು; ದಮಯಂತಿಯು ಆ ವಾಕ್ಯವನ್ನು ಕೇಳಿ, ಶೋಕಾರ್ತೆಯಾಗಿ, ಕಣ್ಣೀರುಗಳನ್ನು ಸುರಿಸುತ್ತಾ, ಗದ್ಗದ ಕಂಠೆಯಾಗಿ, ತನ್ನ ವಲ್ಲಭನನ್ನು ಕುರಿತು–ನೀನು ಮನಸ್ಸಿನಲ್ಲಿ ನೆನಸಿರುವದನ್ನು ನೋಡಿದರೆ, ನನ್ನ ಅಂಗಾಂಗಗಳೆಲ್ಲಾ ಛಿನ್ನಾಭಿನ್ನವಾಗುತ್ತವೆ; ಹೃದಯವು ತಲ್ಲಣಿಸುತ್ತಿದೆ. ರಾಜ್ಯವನ್ನು ಬಿಟ್ಟು, ಉಡಲು ಬಟ್ಟೆ ಇಲ್ಲದೆ, ದುಃಖಿತನಾಗಿರುವ ನಿನ್ನನ್ನು ಜನ ರಹಿತವಾದ ಕಾಡಿನಲ್ಲಿ ಬಿಟ್ಟು ಹೋದೇನೇ? ಹಸಿವಿನಿಂದ ದುಃಖಿಸುತ್ತಲಿರುವ ನಿನ್ನ ಸಮೀಪದಲ್ಲಿ ಇದ್ದು ಕೊಂಡು, ನಿನ್ನ ಮನಸ್ಸಿನ ಕ್ಲೇಶವನ್ನು ಹೋಗಲಾಡಿಸುವೆನು. ಲೋಕದಲ್ಲಿ ಗಂಡಂದಿರ ಕಷ್ಟವನ್ನು ಪರಿಹರಿಸುವದಕ್ಕೆ ಹೆಂಡತಿಗಿಂತಲು ಮತ್ತೊಬ್ಬರು ಹಿತವರಿಲ್ಲ, ಎಂದು ನೀನೇ ಕೇಳಿದ್ದೀಯಷ್ಟೆ! ಎಂದು ನುಡಿಯಲು; ನಳನು ಆಕೆಯ ಮಾತನ್ನು ಕೇಳಿ,–ನಿಜವಾಗಿ ಹೇಳಿದಿ. ನಾನು ನಿನ್ನನ್ನು ಪರಿಹರಿಸುವದಕ್ಕೆ ಎಣಿಸಿದವನಲ್ಲ. ನನ್ನಲ್ಲಿ ಆ ಸಂಶಯವನ್ನು ಮಾಡ ಬೇಡ. ನನ್ನ ಪ್ರಾಣಗಳನ್ನಾದರೂ ಬಿಡುವೆನೇ ಹೊರತಾಗಿ, ನಿನ್ನನ್ನು ಅಗಲಿ ಇರುವೆನೇ? ಅಂದನು.

ಆ ಮಾತಿಗೆ ದಮಯಂತಿಯು–ಅದನ್ನು ಬಲ್ಲೆನು ವಿದರ್ಭ ದೇಶದ ಮಾರ್ಗವನ್ನು ತೋರಿಸಿದ್ದರಿಂದ ನನ್ನ ಹೃದಯವು ತಲ್ಲಣಿಸುತ್ತಲಿದೆ. ಆದರೆ ನಾವಿಬ್ಬರು ವಿದರ್ಭ ದೇಶಕ್ಕೆ ಹೋದರೆ, ನನ್ನ ತಂದೆಯಾದ ಭೀಮ ಭೂಪಾಲಕನು ನಮ್ಮನ್ನು ಪ್ರೀತಿ ಪಡಿಸಿ, ಸಕಲ ವಸ್ತುಗಳನ್ನು ಕೊಡುತ್ತಾನೆ. ಅದರಿಂದ ಸುಖವಾಗಿ ಇರ ಬಹುದು. ಇದು ನಿನ್ನ ಚಿತ್ತಕ್ಕೆ ಸಮ್ಮತವಾದರೆ, ಆ ಪ್ರಕಾರ ಮಾಡ ಬಹುದು, ಎನಲು; ನಳನು–ಅದು ಯುಕ್ತವೇಸರಿ! ಆದರೆ ನಾನು ಮೊದಲು ಸ್ವಯಂವರಕ್ಕೆ ಸಕಲ ವೈಭವದಿಂದ ಹೋಗಿ ಇದ್ದೆನು. ಈಗ ಇಂಥಾ ಬಡತನದಿಂದ ಕೂಡಿ, ನಿನಗೆ ಬಹಳ ದುಃಖವಾಗುವ ಹಾಗೆ ಅಲ್ಲಿಗೆ ಹೋಗುವದು ತಕ್ಕದ್ದಲ್ಲ ಎಂದು, ದಮಯಂತಿಯನ್ನು ಸಮಾಧಾನಾ ಮಾಡಿದನು. ಆಗ ಇಬ್ಬರು ಕೂಡಿ ಹಸಿವು ನೀರಡಿಕೆಯಿಂದ ಸಂಕಟ ಪಡುತ್ತಾ, ಒಂದು ಸ್ಥಳಕ್ಕೆ ಹೋಗಿ, ನಳನು ಮಲಿನಾಂಗನಾಗಿ, ಧೂಳಿಗಳಿಂದ ವ್ಯಾಪ್ತನಾಗಿ, ನೆಲದಲ್ಲಿ ಬಿದ್ದು ಕೊಳ್ಳಲು; ದಮಯಂತಿಯು ಆತನನ್ನು ತಬ್ಬಿ ಕೊಂಡು, ಅವನ ಬಳಿಯಲ್ಲಿಯೇ ಮಲಗಿದಳು. ಆಗ ನಳನು–ಈ ಕೋಮಲೆಯು

ಹೀಗೆ ಕಷ್ಟ ಪಡುವದನ್ನು ನೋಡುವ ನನ್ನ ಎರಡು ಕಣ್ಣುಗಳು ಒಡೆದು ಹೋಗುವದಿಲ್ಲವಲ್ಲ! ಈಕೆಯ ಕಷ್ಟವನ್ನು ನೋಡುತ್ತಾ ಬದುಕುವದಕ್ಕಿಂತ ಪ್ರಾಣಗಳನ್ನು ಬಿಡುವದು ಲೇಸು. ಇವಳು ನನ್ನ ಜೊತೆಯಲ್ಲಿ ಇರುವ ವರಿಗೂ ಇವಳಿಗೆ ಈ ಸಂಕಟವು ತಪ್ಪುವದಿಲ್ಲ. ನಾನು ಇವಳನ್ನು ಅಗಲಿ ಹೋದರೆ, ಇವಳು ತನ್ನ ತಂದೆಯ ಸಮೀಪಕ್ಕೆ ಹೋಗಿ, ಸುಖದಿಂದ ಇರುವಳು ಎಂದು ಎಣಿಸಿ, ಅವಳು ಉಟ್ಟಿದ್ದ ಬಟ್ಟೆಯಲ್ಲಿ ಅರ್ಧವನ್ನು ಹರಿದು ಕೊಂಡು, ಅವಳಿಗೆ ನಿದ್ದೆ ತಿಳಿಯದಂತೆ ಮೆಲ್ಲಗೆ ಎದ್ದು, ದುಃಖದಿಂದ ಕಣ್ಣುಗಳೊಳಗೆ ನೀರು ಸುರಿಸುತ್ತಾ,—ಅಯ್ಯೋ, ವಿಧಿಯೇ! ಇಂಥ ಕಷ್ಟವನ್ನು ಕೊಟ್ಟಿಯಾ? ನಾನೇ ಗತಿ ಎಂದು ನಂಬಿರುವ ಪತ್ನಿಯನ್ನು ಕಾಡಿನಲ್ಲಿ ಮಲಗಿರುವ ಕಾಲದಲ್ಲಿ ವಂಚಿಸಿ ಬಿಟ್ಟು ಹೋಗುವ ನನ್ನಥಾ ಪಾಪಿಯು ಉಂಟೇ? ಎಂದು ಹೇಳಿ ಕೊಳ್ಳುತ್ತಾ, ಸ್ವಲ್ಪ ದೂರ ಹೋಗಿ, ಪುನಹ ಹಿಂತಿರುಗಿ ಬಂದು, ಮುಂದಕ್ಕೆ ಹೋಗುವದಕ್ಕೆ ಕೆಲವು ಹೊತ್ತು ನಿಂತು ಇದ್ದು, ಕಲಿ ಪ್ರೇರಣೆಯಿಂದ ತಿರಿಗಿ ಹೋಗ ಬಗೆದು—ಈ ಪುಣ್ಯ ಶೀಲೆಯಾದ ಪತಿವ್ರತೆಯನ್ನು ಭೂಮಿ ದೇವಿಯೂ ವನದೇವತೆಗಳೂ ಸೂರ್ಯ ಚಂದ್ರರೂ ಧರ್ಮ ದೇವತೆಯೂ ಅಷ್ಟ ದಿಕ್ಪಾಲಕರೂ ಕಾಪಾಡಲಿ ಎಂದು ನುಡಿದು, ಹುಚ್ಚನಂತೆ ಮುಂದೆ ತೋರದೆ, ಕಲಿಯಿಂದ ಎಳಸಿ ಕೊಂಡವನಾಗಿ ಮುಂದಕ್ಕೆ ಹೊರಟು ಹೋದನು.

ಆಗ ಕೆಲವು ಹೊತ್ತಿನ ಮೇಲೆ ದಮಯಂತಿಯು ಎಚ್ಚತ್ತವಳಾಗಿ, ನಳನನ್ನು ಕಾಣದೆ, ಕಲ್ಮರಗಳು ಕರಗುವಂತೆ ದುಃಖ ಪಡುತ್ತಾ, ನಿರಪರಾಧಿಯಾದ ನನ್ನನ್ನು ಬಿಟ್ಟು ಹೋಗುವದು ನಿನಗೆ ಧರ್ಮವೇ? ಎಂದು ಕೂಗಿ, ಅಳುತ್ತಾ, ದಿಕ್ಕು ದಿಕ್ಕಿಗೆ ಬಾಯಿ ಬಿಡುತ್ತಾ, ಬಾಯಾರಿ, ಗಂಟಲು ಒಣಗಿ, ಹಸಿವಿನಿಂದ ಕಂಗೆಟ್ಟು, ಕಾಡಿನಲ್ಲಿ ಬರುತ್ತಿರಲು; ದಾರಿಯಲ್ಲಿ ಬಿದ್ದಿರುವ ಒಂದು ಹೆಬ್ಬಾವು ಅವಳನ್ನು ನುಂಗಿತು. ಆಗ ಹೆಬ್ಬಾವಿನಿಂದ ನುಂಗಲ್ಪಟ್ಟರೂ, ನಳನನ್ನು ನೆನೆದು—ಎಲೈ, ಪ್ರಾಣನಾಥನೇ, ಈ ಹಾವು ನಿನ್ನ ಹೆಂಡತಿಯನ್ನು ನುಂಗುತ್ತಿರುವಲ್ಲಿ ನೀನು ಬೇಗ ಬಂದು, ನನ್ನನ್ನು ಯಾಕೆ ಬಿಡಿಸುವದಿಲ್ಲ? ನಾನು ಸತ್ತು ಹೋದ ಮೇಲೆ ನಿನಗೆ ಬಂದಿರುವ ಈ ಕಷ್ಟವು ಪರಿಹಾರವಾಗಿ, ಸಕಲ ಐಶ್ವರ್ಯಗಳನ್ನು ಪಡೆದು, ನನ್ನನ್ನು ನೆನಸಿ ಕೊಂಡು, ಆ ದುಃಖವನ್ನು ಹ್ಯಾಗೆ ಸಹಿಸುವಿ? ಎಂದು ಮೊರೆ ಇಡುತ್ತಿರಲು; ಆ ಕಾಡಿನಲ್ಲಿ ತಿರುಗುವ ಒಬ್ಬ ಬೇಡನು ಇವಷ್ಟನ್ನು ಕೇಳಿ, ಬೇಗ ಅಲ್ಲಿಗೆ ಬಂದು, ತನ್ನ ಕೈಯಲ್ಲಿ ಇದ್ದ ಕತ್ತಿಯಿಂದ ಆ ಹಾವಿನ ಬಾಯಿಯನ್ನು ಶೀಳಿ, ದಮಯಂತಿಯನ್ನು ಬಿಡಿಸಿ, ನೀರಿನಿಂದ ಮೊ

ಖವನ್ನು ತೊಳಸಿ, ಗೆಡ್ಡೆ ಗೆಣಸುಗಳಿಂದಲೂ ಹಣ್ಣುಗಳಿಂದಲೂ ಊಟವನ್ನು ಮಾಡಿಸಿ,—ನೀನು ಯಾರು? ಒಬ್ಬಳೇ ಈ ಕಾಡಿಗೆ ಯಾಕೆ ಬಂದೆ? ಇಂಥಾ ಕಷ್ಟವು ನಿನಗೆ ಬರುವದಕ್ಕೆ ಕಾರಣವೇನು? ಎನಲು; ತನ್ನ ಎಲ್ಲಾ ಸುದ್ದಿಯನ್ನು ನಿಜವಾಗಿ ಆ ಬೇಡನಿಗೆ ದಮಯಂತಿ ಹೇಳಿದಳು. ಆ ಬಳಿಕ ಬೇಡನು ಇವಳ ಚೆಲುವನ್ನು ನೋಡಿ, ಮನ್ಮಥ ವಿಕಾರವುಳ್ಳವನಾಗಿ, ಬಲಾತ್ಕಾರದಿಂದ ಹಿಡಿಯ ಹತ್ತರಕ್ಕೆ ಬರಲು; ದಮಯಂತಿಯು ಮಹಾ ಕೋಪದಿಂದ—ನಾನು ನಳನೊಬ್ಬನನ್ನೇ ಹೊರತಾಗಿ ಮತ್ತೊಬ್ಬ ಗಂಡಸನ್ನು ಕನಸಿನಲ್ಲಾದರೂ ಎಣಿಸದೆ ಇದ್ದವಳಾದರೆ, ಈ ದುರಾತ್ಮನು ಈಗಲೇ ಸಾಯಲಿ ಎಂದು ಶಪಿಸಿದ ಕ್ಷಣದಲ್ಲಿಯೇ ಅವನು ಕಾಡುಗಿಚ್ಚಿನಿಂದ ಉರಿಯಲ್ಪಟ್ಟ ಮರದಂತೆ ಇವಳ ಶಾಪಾಗ್ನಿಯಿಂದ ಸುಟ್ಟು, ಬೂದಿಯಾದನು. ಆ ಬಳಿಕ ದಮಯಂತಿಯು ಅಲ್ಲಿಂದ ಹೊರಟು, ಹುಲಿ, ಕರಡಿ, ಸಿಂಹ, ಶರಭ ಮುಂತಾದ ದುಷ್ಟ ಮೃಗಗಳಿಂದಲೂ ಕಳ್ಳರೂ ಬೇಡರೂ ಮೊದಲಾದ ದುಷ್ಟ ಜನಗಳಿಂದಲೂ ಕೂಡಿರುವ ನಾನಾ ವಿಧವಾದ ಧಾತುಗಳಿಂದ ಪ್ರಕಾಶಮಾನವಾಗಿ, ಬಹಳ ಉದ್ದಗಳಾದ ಶಿಖರಗಳೊಡನೆ ಕೂಡಿರುವ ದೊಡ್ಡ ದೊಡ್ಡ ಬೆಟ್ಟಗಳುಳ್ಳ ಮಹಾ ಕಾಡಿನಲ್ಲಿ ತನ್ನ ಗಂಡನನ್ನು ಹುಡುಕುತ್ತಾ, ಹಂಬಲಿಸುತ್ತಾ, ತುಸವಾದರೂ ಹೆದರದೆ, ಬಂದು, ಒಂದು ದೊಡ್ಡ ಕೋಡುಗಲ್ಲಿನ ಮೇಲೆ ಕುಳಿತು—ಎಲೈ, ಪ್ರಾಣ ಪ್ರಿಯನೇ, ನಳಚಕ್ರವರ್ತಿಯೇ, ಇಂಥಾ ನಿರ್ಜನವಾದ ಅತಿ ಘೋರಾರಣ್ಯದಲ್ಲಿ ನಿನ್ನನ್ನೇ ಹಂಬಲಿಸುತ್ತಿರುವ ನನ್ನನ್ನು ಹೀಗೆ ಯಾಕೆ ಉಪೇಕ್ಷೆ ಮಾಡುತ್ತೀ? ಅತಿ ಕ್ರೂರವಾದ ಹುಲಿಯು ನನ್ನ ಬಳಿಗೆ ಬಂದು, ಕೋರೆದಾಡೆಗಳಿಂದ ಕೂಡಿರುವ ಭಯಂಕರವಾದ ಬಾಯಿಯನ್ನು ಬಿಟ್ಟು, ನನ್ನನ್ನು ಹೆದರಿಸುತ್ತಿದೆ. ಈ ಸಮಯದಲ್ಲಿ ಯಾದರೂ ನನ್ನ ಕಾಪಾಡ ಬೇಡವೇ? ಮೊದಲು—ನಿನಗಿಂತ ಪ್ರಿಯಳು ನನಗಿಲ್ಲವೆಂದು ಹೇಳುತ್ತಿದ್ದೆಯಲ್ಲ! ಆ ಮಾತುಗಳೆಲ್ಲಾ ಈಗ ಸಟೆಯಾಗ ಬಹುದೇ? ಎಂದು, ಅರ್ಧ ವಸ್ತ್ರವನ್ನು ಉಟ್ಟು ಕೊಂಡು, ನಳನನ್ನೇ ಹಂಬಲಿಸುತ್ತಾ, ಗುಂಪನ್ನು ಅಗಲಿರುವ ಜಿಂಕೆಯ ಹಾಗೆ ಮೊರೆ ಇಡುತ್ತಾ, ಶೋಕದಿಂದ ಕರಗುತ್ತಾ, ಈ ಪ್ರಕಾರ ಮೂರು ದಿವಸಗಳ ಕಳೆದು, ಒಂದು ಪುಣ್ಯಾಶ್ರಮವನ್ನು ನೋಡಿ, ಅದಕ್ಕೆ ಹೋಗಿ, ಭೃಗು, ವಸಿಷ್ಠ, ಅತ್ರಿ ಮುನಿಗಳಿಗೆ ಸಮಾನರಾಗಿ, ಊಟವನ್ನು ಬಿಟ್ಟು, ನೀರನ್ನೂ ಘಾಳಿಯನ್ನೂ ತರಗೆಲೆಗಳನ್ನೂ ತಿಂದು ಕೊಂಡು, ನಾರ ಶೀರೆಗಳನ್ನು ಉಟ್ಟು, ಕೃಷ್ಣಾಜಿನವನ್ನು ಧರಿಸಿರುವ ಮುನೀಂದ್ರರಿಗೆ ನಮಸ್ಕಾರವನ್ನು ಮಾಡಿ, ಕೈ ಮುಗಿದು, ನಿಂತು ಕೊಂಡಿರಲು;

ಆ ಮುನಿಗಳು ಇವಳನ್ನು ನೋಡಿ, ಇವಳ ಸೌಂದರ್ಯಕ್ಕೂ ಸುಗುಣಕ್ಕೂ ಸುಲಕ್ಷಣಗಳಿಗೂ ಬಹಳ ಆಶ್ಚರ್ಯ ಪಟ್ಟು—ನೀನು ಯಾರಮ್ಮಾ? ಇಲ್ಲಿಗೆ ಏನು ನಿಮಿತ್ತ ಬಂದೆ? ನಮ್ಮಿಂದ ನಿನಗೆ ಆಗ ತಕ್ಕ ಕೆಲಸವೇನು? ಎಂದು ಕೇಳಲು; ತಾನು ಹುಟ್ಟಿದ್ದು ಮೊದಲು ಗೊಂಡು ಈ ವರಿಗೂ ತನ್ನ ವೃತ್ತಾಂತಗಳನ್ನು ಬಿನ್ನವಿಸಿದಳು. ಆ ಮಹಾತ್ಮರು ಈಕೆಯನ್ನು ನೋಡಿ—ಎಲೈ, ತಾಯೇ, ನೀನು ಸ್ವಲ್ಪ ದಿವಸದಲ್ಲಿ ನಿನ್ನ ಗಂಡನನ್ನು ಕಾಣುತ್ತಲಿದ್ದೀಯೇ. ನಿನಗೆ ಇನ್ನು ಮೇಲೆ ಸಕಲ ಶ್ರೇಯಸ್ಸುಗಳು ಉಂಟಾಗುತ್ತವೆ. ನಿನ್ನ ಗಂಡನು ಹಗೆಗಳನ್ನು ಜೈಸಿ, ತಿರಿಗಿ ರಾಜ್ಯವನ್ನು ತೆಕ್ಕೊಂಡು, ನಿನ್ನೊಡನೆ ಸುಖವಾಗಿರುವನು ಎಂದು ಹೇಳಿ, ಅಂತರ್ಧಾನವನ್ನು ಹೊಂದಿದರು.

ಆ ಮೇಲೆ ಅಲ್ಲಿಂದ ಹೊರಟು ಬರುತ್ತಾ, ಹಲಿನೀ ಎಂಬ ಒಂದು ನದಿಯನ್ನು ದಾಟುತ್ತಲಿರುವ ಆನೆ ಕುದುರೆಗಳಿಂದ ಕೂಡಿರುವ ಜನಗಳನ್ನು ನೋಡಿ, ಆ ಗುಂಪನ್ನು ಸೇರಲು; ಅವರಲ್ಲಿ ಧರ್ಮಿಷ್ಠರಾದ ಕೆಲವರು—ಎಲೈ, ತಾಯೇ, ನೀನು ಯಾರು? ನಿನ್ನ ವಿಚಾರವನ್ನು ನಿಜವಾಗಿ ಹೇಳು, ಎನಲು; ದಮಯಂತಿಯು—ನಾನು ವಿದರ್ಭ ದೇಶದ ಭೀಮರಾಯನ ಮಗಳು. ನನ್ನ ಹೆಸರು ದಮಯಂತಿಯು. ನನ್ನ ಗಂಡನಾದ ನಳನೆಂಬ ರಾಜ ಕಂಠೀರವನು ದೈವ ಸಂಕಲ್ಪದಿಂದ ಅಗಲಿದ್ದಾನೆ. ಅವನನ್ನು ಹುಡುಕುತ್ತಲಿದ್ದೇನೆ ಎಂದು ಹೇಳಿ, ನೀವೇನಾದರೂ ಆ ಮಹಾ ಪುರುಷನನ್ನು ಎಲ್ಲಿಯಾದರೂ ಕಂಡಿದ್ದೀರಾ? ಎಂದು ಕೇಳಲು;—ತಾಯೇ, ನಾವು ಎಲ್ಲಿಯೂ ಕಾಣಲಿಲ್ಲ, ಅಂದರು. ಆಗ ದಮಯಂತಿಯು—ನೀವೆಲ್ಲಾ ಎಲ್ಲಿಗೆ ಹೋಗುತ್ತಲಿದ್ದೀರಿ? ನನಗೆ ತಿಳಿಸಿ ಎಂದು ಕೇಳಿದ್ದಕ್ಕೆ—ನಾವು ಸುಬಾಹು ರಾಯನಿಂದ ರಕ್ಷಿತವಾದ ಚೇದಿ ರಾಜ್ಯಕ್ಕೆ ಲಾಭಾರ್ಥವಾಗಿ ವ್ಯಾಪಾರಕ್ಕೆ ಹೋಗುತ್ತಲಿದ್ದೇವೆ ಎಂದು ಹೇಳಲು; ದಮಯಂತಿಯು ಅವರ ಕೂಡಾ ಹೋಗುವಾಗ, ಒಂದು ಕಾಡಿನಲ್ಲಿ ಒಂದು ಕೊಳದ ಸಮೀಪದಲ್ಲಿ ತಮ್ಮ ಬೀಡಿಕೆಯನ್ನು ಬಿಡಿಸಿ, ಶ್ರಮದಿಂದ ಸಕಲವಾದವರು ಮಲಿಗಿರುವ ಕಾಲದಲ್ಲಿ, ಸಮೀಪದಲ್ಲಿರುವ ಬೆಟ್ಟದ ಕಿಬ್ಬಿಯಿಂದ ಕಾಡಾನೆಗಳು ಗುಂಪು ಕೂಡಿ, ಆ ಕೊಳದಲ್ಲಿ ನೀರು ಕುಡಿಯುವದಕ್ಕೆ ಬರುತ್ತಾ, ದಾರಿಯಲ್ಲಿ ಅಡ್ಡಲಾಗಿ ಬಿದ್ದಿರುವ ವರ್ತಕರೆಲ್ಲರನ್ನು ಕಾಲುಗಳಿಂದ ತುಳಿದುಕೊಂಡು ಬರಲು; ಆ ವರ್ತಕರೆಲ್ಲರು ನಿದ್ದೆಯಿಂದ ಎದ್ದು, ಕಾಡಾನೆಗಳ ಗುಂಪನ್ನು ನೋಡಿ, ಕೆಲವರು ಬೆದರಿ, ಬೆಚ್ಚಿ, ಬೆಂಡಾಗಿ, ಹೊದೆಗಳನ್ನು ಹೊಕ್ಕರು. ಮತ್ತೆ ಕೆಲವರು ಕೊಂಬಿನ ಘಾಯಗಳಿಂದಲೂ ಸೊಂಡಿಲ ಪೆಟ್ಟುಗಳಿಂ

ದಲೂ ಹತರಾದರು. ಮತ್ತು ಆ ವರ್ತಕರು ತಂದು ಇದ್ದ ಎತ್ತು, ಕುದುರೆ, ಕತ್ತೆ, ಒಂಟೆಗಳು ಸಾಲು ದಾವಣಿಗಳನ್ನು ಕಿತ್ತು ಕೊಂಡು, ಬೆದರಿ, ನಾನಾ ದಿಕ್ಕಿಗೆ ಓಡಿ ಹೋದವು. ಈ ಪ್ರಕಾರದಿಂದ ಆನೆಗಳು ವರ್ತಕರನ್ನು ಹತ ಮಾಡಲು; ಮಾರನೇ ದಿವಸ ಹತ ಶೇಷರಾದ ವರ್ತಕರೂ ಅವರ ಜೊತೆಯಲ್ಲಿ ಇದ್ದ ಬ್ರಾಹ್ಮಣರೂ ದುಃಖ ಪಡುತ್ತಾ, ಅಲ್ಲಿಂದ ಹೊರಟರು.

ಅವರೊಡನೆ ದಮಯಂತಿಯು ಹೊರಟು ಬಂದು, ಕೆಲವು ಪ್ರಯಾಣಗಳು ಕಳೆದು ಹೋದ ಮೇಲೆ, ಚೇದಿ ದೇಶಾಧಿಪತಿಯಾಗಿರುವ ಸುಬಾಹು ರಾಯನ ಪಟ್ಟಣಕ್ಕೆ ಹೋಗಿ, ಒಂದು ದಿವಸ ಸಾಯಂಕಾಲದಲ್ಲಿ ಪಟ್ಟಣದ ಬಾಗಿಲನ್ನು ಹೊಕ್ಕು, ರಾಜ ಬೀದಿಯಲ್ಲಿ ಹೋಗುವಾಗ, ಅರವಾಶಿ ಬಟ್ಟೆಯನ್ನು ಉಟ್ಟು, ಕಂದಿ, ಕುಂದಿ, ಬಳಲಿ, ಬಾಯಾರಿ, ಬಡವಾಗಿ ದೀನೆಯಾಗಿ, ಕೆದರಿದ ಕೂದಲುಗಳುಳ್ಳವಳಾಗಿ ಬರುವ ದಮಯಂತಿಯನ್ನು ಸಜ್ಜೆಯ ಮೇಲೆ ಇರುವ ಸುಬಾಹು ರಾಯನ ತಾಯಿಯು ನೋಡಿ,—ಇವಳನ್ನು ಕರ ಕೊಂಡು ಬನ್ನಿ ಎಂದು ಗವುಡಿಗಳನ್ನು ಕಳುಹಿಸಲು; ಅವರು ದಮಯಂತಿಯನ್ನು ಕರ ಕೊಂಡು ಹೋಗಿ, ಅರಸಿನ ತಾಯಿಯ ಬಳಿಯಲ್ಲಿ ನಿಲ್ಲಿಸಲು; ಆಕೆಯು—ನೀನ್ಯಾರಮ್ಮಾ? ಎಂದು ಕೇಳಿದ್ದಕ್ಕೆ—ನಾನು ಮನುಷ್ಯ ಸ್ತ್ರೀಯು; ಸೈರೇಂಧ್ರಿಯ ಜಾತಿಯಲ್ಲಿ ಹುಟ್ಟಿದವಳು. ನನ್ನ ಗಂಡನು ಅಗಲಿದ್ದರಿಂದ ನಾನು ಅರಣ್ಯಗಳಲ್ಲಿ ಹಣ್ಣು, ಗೆಡ್ಡೆ, ಗೆಣಸುಗಳನ್ನು ತಿನ್ನುತ್ತಾ, ಎಲ್ಲಿ ಸಾಯಂಕಾಲವಾದರೂ ಅಲ್ಲಿಯೇ ಮಲಗುತ್ತಾ, ಗಂಡನನ್ನು ಹೀಗೆ ಹುಡುಕುತ್ತಾ ಬಂದೆನು. ಎಲ್ಲಿಯೂ ಗೊತ್ತು ಹತ್ತಲಿಲ್ಲ. ಆತನ ನೆಳಲಿನಂತೆ ಒಂದು ಕ್ಷಣವಾದರೂ ಅವನನ್ನು ಎಡೆ ಬಿಡದೆ ಇದ್ದ ನಾನು ಈಗ ಅವನನ್ನು ಕಾಣದೆ, ಇಂಥಾ ದುಃಖಕ್ಕೆ ಒಳಗಾದೆನು, ಎಂದು ಪಳಪಳನೆ ಕಣ್ಣುಗಳಲ್ಲಿ ನೀರುಗಳನ್ನು ಸುರಿಸುತ್ತಾ ಅಳಲು; ಆ ಅರಸಿನ ತಾಯಿಯು ಬಹಳ ದುಃಖ ಪಟ್ಟು—ಎಲೇ, ತಾಯೇ, ಏನು ನಿಮಿತ್ತವೋ, ಕಾಣೆ, ನಿನ್ನಲ್ಲಿ ನನಗೆ ಬಹಳ ಪ್ರೀತಿ ಉಂಟಾಗಿದೆ. ನೀನು ನನ್ನ ಬಳಿಯಲ್ಲಿಯೇ ಇರು. ಬೇಹಿನವರನ್ನು ಕಳುಹಿಸಿ, ನಿನ್ನ ಪತಿಯನ್ನು ನಾಲ್ಕು ದಿಕ್ಕುಗಳಲ್ಲಿಯೂ ಹುಡುಕಿಸುತ್ತೇನೆ. ಒಂದು ವೇಳೆ ನಿನ್ನ ಗಂಡನು ಎಲ್ಲಾ ದೇಶಗಳಲ್ಲಿ ತಿರುಗಿ, ತನಗೆ ತಾನೇ ಬಂದರೆ, ಮತ್ತೂ ಲೇಸು ಎಂದು ಹೇಳಲು; ಅದಕ್ಕೆ ದಮಯಂತಿಯು—ಎಲೇ, ದೇವೀ, ನಿನ್ನ ಸಮೀಪದಲ್ಲಿ ಇರು ಎಂದು ನುಡಿದೆಯಲ್ಲಾ! ನನ್ನ ಅಭಿಪ್ರಾಯವನ್ನು ಕೇಳು. ತಿಂದು ಮಿಕ್ಕದ್ದನ್ನು ತಿನ್ನುವದೂ, ಒಬ್ಬನ ಕಾಲು ತೊಳಿಯುವದೂ, ಇವು ಮೊದಲಾದದ

ಕೀಳು ಕೆಲಸಗಳನ್ನು ಮಾಡುವವಳಲ್ಲ. ನನ್ನ ಗಂಡನ ಹುಡುಕುವದಕ್ಕೆ ಹೋಗುವ ಬ್ರಾಹ್ಮಣರೊಡನೆ ಮಾತ್ರ ಮಾತಾಡುವದೇ ಹೊರತು, ಮತ್ತೊಬ್ಬರ ಕೂಡೆ ಮಾತಾಡುವದಿಲ್ಲ. ಯಾರಾದರೂ ನನ್ನ ಮೇಲೆ ಕಣ್ಣಿಟ್ಟರೆ, ನೀನು ಅವರನ್ನು ದಂಡಿಸ ಬೇಕು. ಹೀಗಾದರೆ ನಿನ್ನ ಬಳಿಯಲ್ಲಿಯೇ ಇರುವೆನು; ಇಲ್ಲದಿದ್ದರೆ, ಇರಲಾರೆನು ಎನಲು; ಅದನ್ನು ಆ ಅರಸಿನ ತಾಯಿ ಕೇಳಿ, ಬಹಳ ಸಂತೋಷ ಪಟ್ಟು—ಎಲೇ, ಭಾಮಾ ಮಣಿಯೇ, ನೀನು ಪತಿವ್ರತೆಗಳ ಶಿಖಾಮಣಿಯಾಗಿದ್ದೀ. ನಿನ್ನ ಮನಸ್ಸಿನಲ್ಲಿ ಇದ್ದ ರೀತಿಯಲ್ಲಿಯೇ ನಡಿಸುತ್ತೇನೆ. ನೀನು ಯೋಚನೆ ಮಾಡ ಬೇಡ, ಎಂದು ಹೇಳಿ, ಸಮಾಧಾನ ಪಡಿಸಿ, ತನ್ನ ಮಗಳಾದ ಸುನಂದೆಯನ್ನು ಕರೆದು,—ಲೋಕ ಸುಂದರಿಯಾದ ಈ ಸೈಳೇಂದ್ರಿಯೂ ನೀನೂ ಒಂದೇ ಪ್ರಾಯದವರಾದ್ದರಿಂದ ಸ್ವಲ್ಪವಾದರೂ ಭೇದವಿಲ್ಲದೆ ಸಂಗಾತಿಗಳಾಗಿರಿ ಎಂದು ಕಟ್ಟು ಮಾಡಿ, ಕಳುಹಿಸಲು; ದಮಯಂತಿಯು ಆ ರಾಜ ಪುತ್ರಿಯಾದ ಸುನಂದೆಯೊಡನೆ ಕೂಡಿ, ಯಾವಾಗಲು ತನ್ನ ಗಂಡನ ಚರಿತ್ರಿಗಳನ್ನು ಕಥೆಗಳಾಗಿ ಅವಳೊಡನೆ ಹೇಳಿ ಕೊಳ್ಳುತ್ತಾ, ಇದ್ದಳು.

ಇತ್ತಲಾ ನಳನು ದಮಯಂತಿಯನ್ನು ಬಿಟ್ಟು, ಆಚೆಗೆ ನಡೆಯುವ ಸಮಯದಲ್ಲಿ, ಕಾಡು ಮಾರ್ಗದಲ್ಲಿ ನಿಬಿಡವಾದ ಕಾಡುಗಿಚ್ಚು ಸುತ್ತಿ ಕೊಂಡು, ಕಾಡನ್ನು ಸುಡುತ್ತಿರುವಲ್ಲಿ, ಅದರ ನಟ್ಟ ನಡುವೆ—ಓ ಪುಣ್ಯ ಶ್ಲೋಕನಾದ ನಳ ಮಹಾ ರಾಯನೇ, ನಳ ಮಹಾ ರಾಯನೇ, ಎಂದು ತನ್ನ ಹೆಸರನ್ನು ಹಿಡಿದು ಕೂಗುತ್ತಾ,—ಬೇಗನೆ ಇಲ್ಲಿಗೆ ಬಾ ಎಂದು ಕೂಗಿ ಕರೆಯುವ ಧ್ವನಿಯನ್ನು ಕೇಳಿ, ದಯಾರ್ದ್ರ ಹೃದಯನಾಗಿ,—ಹೆದರ ಬೇಡ! ಹೆದರ ಬೇಡ! ಇಗೋ! ಇಗೋ! ಬಂದೆನು ಎಂದು ನುಡಿಯುತ್ತಾ, ಆ ಕಾಡು ಗಿಚ್ಚಿನ ನಡುವೆ ಹೊಕ್ಕು, ಸುತ್ತಿ ಕೊಂಡು, ಬಿದ್ದಿರುವ ಒಂದು ಘಟ ಸರ್ಪವನ್ನು ನೋಡಲು; ಅದು ಭಯದಿಂದ ಮೈಯನ್ನು ನಡುಗಿಸುತ್ತಾ—ಎಲೈ, ರಾಜೇಂದ್ರನೇ, ನಾನು ಕಾರ್ಕೋಟಕನೆಂಬ ಮಹಾ ನಾಗೇಂದ್ರನು. ಮೊದಲು ತಪೋನಿಧಿಯಾಗಿ, ನಿರಪರಾಧಿಯಾಗಿರುವ ಒಬ್ಬ ಬ್ರಾಹ್ಮಣನಿಗೆ ನಾನು ಅಪಕಾರ ಮಾಡಿದ್ದರಿಂದ, ಆತನು ಕೋಪಿಸಿ ಕೊಂಡು—ಆಚೆಗೆ ಹೋಗುವದಕ್ಕೆ ಸಾಮರ್ಥ್ಯವಿಲ್ಲದೆ, ನಿನ್ನನ್ನು ನಳನು ನೋಡುವ ಪರಿಯಂತರವು ಕಲ್ಲಿನ ಹಾಗೆ ಇಲ್ಲಿಯೇ ಬಿದ್ದು ಇರು ಎಂದು ಶಪಿಸಿದನು. ಅದರಿಂದ ಇಲ್ಲಿಂದ ನಾನು ಏಳಲಾರೆನು. ನೀನು ಈ ಕಾಡು ಗಿಚ್ಚಿನಿಂದ ಆಚೆಗೆ ತೆಗೆದು, ಕಾಪಾಡಿದರೆ, ನಿನಗೆ ಹಿತವನ್ನು ಮಾಡುವೆನು. ನಾನು ಹಾವುಗಳೊಳಗೆ ಬಲ್ಲಿದನು. ನನ್ನ ಬೆಟ್ಟದಂಥಾ ಮೈಯ

ನ್ನು ಕೊಂಚವಾಗಿ ಮಾಡಿ ಕೊಂಡು, ನಿನಗೆ ತೋರಿಸಿ ಇದ್ದೇನೆ. ನನ್ನನ್ನು ಬೆಂಕಿಯಿಂದ ಆಚೆಗೆ ಎತ್ತಿ ಹಾಕು ಎಂದು, ಹೆಬ್ಬೆಟ್ಟಿನ ಗಾತ್ರವಾಗಿ ಇರಲು; ನಳನು ಆ ಕಾರ್ಕೋಟಕನನ್ನು ಕೈಯಲ್ಲಿ ಇಟ್ಟು ಕೊಂಡು, ಕಾಡು ಗಿಚ್ಚನ್ನು ದಾಟಿ, ಒಂದು ಪ್ರದೇಶದಲ್ಲಿ ಇರಿಸುವದಕ್ಕೆ ಹೋದನು.

ಆ ಕಾರ್ಕೋಟಕನು ನಳನನ್ನು ನೋಡಿ,—ಎಲೈ, ಮಹಾತ್ಮನೇ, ಇನ್ನು ಕೆಲವು ದೂರ ಎತ್ತಿ ಕೊಂಡು, ಹತ್ತು ಹೆಜ್ಜೆಗಳನ್ನು ಎಣಿಸಿ, ಅಲ್ಲಿ ನನ್ನನ್ನು ನಿಲ್ಲಿಸಿದರೆ, ನಿನಗೆ ಶ್ರೇಯಸ್ಸು ಉಂಟಾಗುತ್ತದೆ ಎನಲು; ನಳನು ಅದೇ ಪ್ರಕಾರವಾಗಿ ಇರಿಸಿದ ಕಾಲದಲ್ಲಿ ಆ ಕಾರ್ಕೋಟಕನು ನಳನನ್ನು ಕಚ್ಚಲು; ಆಗ ನಳನ ಸೌಂದರ್ಯವೆಲ್ಲಾ ಕೆಟ್ಟು ಹೋಗಿ, ವಿಕಾರವಾದ ಮೈಯುಳ್ಳವನಾಗಲು; ಆಶ್ಚರ್ಯ ಪಟ್ಟು, ನಿಜ ರೂಪದಿಂದ ಹೊಳೆಯುತ್ತಲಿರುವ ಕಾರ್ಕೋಟಕನನ್ನು ನೋಡಿ, ಮಾಡ ತಕ್ಕ ಕಾರ್ಯವು ತೋರದೆ, ನಿಂತು ಇದ್ದನು. ಆಗ ಆ ಕಾರ್ಕೋಟಕನು ನಳನಿಗೆ ಸಮಾಧಾನವನ್ನು ಮಾಡಿ—ಎಲೈ, ರಾಜ ಶ್ರೇಷ್ಠನೇ, ಹೆಚ್ಚಾದ ನಿನ್ನ ಚೆಲುವನ್ನು ಲೋಕದ ಜನರು ಕಾಣದೆ ಇರುವ ಹಾಗೆ ಮರೆ ಮಾಡಿದೆನು. ನನ್ನ ನಂಜು ಎಷ್ಟು ದಿನ ನಿನ್ನ ಮೈಯೊಳಗೆ ಇರುವದೋ, ಅಷ್ಟು ದಿನ ಪರಿಯಂತರವು ಕಷ್ಟವನ್ನು ಅನುಭವಿಸಿ, ನನ್ನ ನಂಜು ಹೋದ ಬಳಿಕ ಸುಖದಲ್ಲಿ ಇರುತ್ತೀ. ಮತ್ತು ಹಾವು, ಚೇಳು, ಮೊದಲಾದ ಜಂತುಗಳ ನಂಜಿನದೆಶೆಯಿಂದ ನಿನಗೆ ತೊಂದರೆ ಇಲ್ಲದೆ ಇರುವ ಹಾಗೆ ನನ್ನ ನಂಜನ್ನು ನಿನ್ನ ಶರೀರದಲ್ಲಿ ಇರಿಸಿ, ನಿನ್ನನ್ನು ಕಾಪಾಡಿದ್ದೇನೆ. ನಿನಗೆ ಹಗೆಗಳದೆಶೆಯಿಂದ ಭಯವಿಲ್ಲ. ನನ್ನ ಮಹತ್ವದಿಂದ ನಿನಗೆ ಬ್ರಹ್ಮ ಜ್ಞಾನವು ಬರುತ್ತದೆ. ಯುದ್ಧದಲ್ಲಿ ಎಲ್ಲಾ ಹಗೆಗಳನ್ನು ಕೊಂದು, ಜಯಿಸುತ್ತೀ. ಈ ಹೊತ್ತು ಮೊದಲುಗೊಂಡು ನೀನು ಸೂತ ವಂಶದಲ್ಲಿ ಹುಟ್ಟಿದವನು, ಬಾಹುಕನು ಎಂಬ ಹೆಸರುಳ್ಳವನು ಎಂದು ಹೇಳಿ ಕೊಳ್ಳುತ್ತಾ, ಅಯೋಧ್ಯಾಧಿಪತಿಯಾದ ಮಹಾನುಭಾವನಾದ ಅಕ್ಷಹೃದಯವನ್ನು ತಿಳಿದು ಇರುವ ಋತುಪರ್ಣ ರಾಯನ ಬಳಿಗೆ ಹೋಗು. ನೀನು ಆತನಿಗೆ ಅಶ್ವಹೃದಯ ವಿದ್ಯವನ್ನು ಹೇಳಿ, ಆತನಿಂದ ಅಕ್ಷಹೃದಯವನ್ನು ತಿಳಿದುಕೋ! ಆ ರಾಯನು ನಿನ್ನಲ್ಲಿ ಪ್ರೀತಿಯನ್ನು ಮಾಡಿ, ನಿನಗೆ ಸಂಗಡಿಗನಾಗಿರುವನು. ನೀನು ಅಕ್ಷಹೃದಯವನ್ನು ಯಾವಾಗ ತಿಳಿಯುತ್ತಿದ್ದೀಯೋ, ಆಗಲೇ ನಿನ್ನ ಕ್ಲೇಶಗಳೆಲ್ಲಾ ಹೋಗಿ, ಶ್ರೇಯಸ್ಸನ್ನು ಪಡೆದು, ರಾಜ್ಯಾಭಿಷಿಕ್ತನಾಗಿ ಹೆಂಡತಿ ಮಕ್ಕಳೊಡನೆ ಕೂಡಿ, ಸುಖವಾಗಿರುವಿ. ಇದೆಲ್ಲಾ ನಿಜವೆಂದು ನಂಬು. ಇಗೋ, ಈಗ ನಿನಗೆ ಎರಡು ಬಟ್ಟೆಗಳನ್ನು ಕೊ

ಡುತ್ತೇನೆ. ಇವನ್ನು ತೆಕ್ಕೊಂಡು, ನಿನ್ನ ಸಿಜಾಕಾರವು ಯಾವಾಗ ಬರಬೇಕೆಂದು ಎಣಿಸುತ್ತೀಯೋ, ಆಗ ನನ್ನನ್ನು ನೆನೆದು, ಇವುಗಳನ್ನು ಹೊದ್ದುಕೊಂಡರೆ, ಮೊದಲಿನಂತೆ ಅತಿ ಚೆಲುವನಾಗುತ್ತೀ ಎಂದು ನುಡಿದು, ದಿವ್ಯ ವಸ್ತ್ರಗಳನ್ನು ಕೊಟ್ಟು, ಅಂತರ್ಧಾನವಾಯಿತು.

ಆ ಬಳಿಕ ನಳನು ಅಲ್ಲಿಂದ ಹೊರಟು, ಹತ್ತನೇ ದಿವಸಕ್ಕೆ ಅಯೋಧ್ಯಾಪತಿಯಾದ ಅರಸಿನ ಸಮೀಪಕ್ಕೆ ಬಂದು,—ಎಲೈ, ಅರಸೇ, ನಾನು ಬಾಹುಕನೆಂಬ ಹೆಸರುಳ್ಳವನು; ಕುದುರೆಗಳನ್ನು ತಿದ್ದುವದರಲ್ಲಿ ನನಗೆ ಸರಿಯಾದವನು ಮೂರು ಲೋಕಗಳಲ್ಲಿಯೂ ಇಲ್ಲ. ಇದಲ್ಲದೆ ಒಂದೊಂದು ಕೆಲಸದಲ್ಲಿ ನನ್ನ ಆಲೋಚನೆಯನ್ನು ಕೇಳಿದರೆ, ನಿಗದಿಯಾಗಿ ಹೇಳುವೆನು. ಇನ್ನು ಅನ್ನದಲ್ಲಿ ಹೆಚ್ಚಾಗಿ ಶೀ ಹುಟ್ಟುವ ಹಾಗೆ ಅಡಿಗೆ ಮಾಡುವದಕ್ಕೆ ಬಲ್ಲೆನು. ಮತ್ತು ಲೋಕದಲ್ಲಿ ಜನರಿಗೆ ಮಾಡ ಕೂಡದ ಕೆಲಸಗಳನ್ನೆಲ್ಲಾ ಸುಲಭವಾಗಿ ಮಾಡುವದಕ್ಕೆ ನನಗೆ ಸಾಮರ್ಥ್ಯ ಉಂಟು ಎಂದು ಹೇಳಿದನು. ರುತುಪರ್ಣರಾಯನು ಆತನ ಮಾತನ್ನು ಕೇಳಿ, ಸಂತೋಷಪಟ್ಟು—ಎಲೈ, ಬಾಹುಕನೇ, ನಿನಗೆ ಬೇಕಾದವುಗಳನ್ನು ಕೊಡುತ್ತೇನೆ; ನನ್ನ ಸಮುಖದಲ್ಲಿ ಇದ್ದುಕೊಂಡು, ಇಷ್ಟು ಕೆಲಸಗಳನ್ನು ಮಾಡು. ಕುದುರೆಗಳು ಬೇಗ ನಡೆಯಬೇಕೆಂಬ ಬುದ್ಧಿಯು ನನಗೆ ಹೆಚ್ಚಾಗಿರುವದರಿಂದ, ನೀನು ನನ್ನ ಕುದುರೆಗಳಿಗೆಲ್ಲಾ ಒಡೆಯನಾಗಿ ಇರು. ನಿನಗೆ ತಿಂಗಳು ಒಂದಕ್ಕೆ ಹತ್ತು ಸಾವಿರ ಮೋಹರಗಳನ್ನು ಸಂಬಳವಾಗಿ ಕೊಡುತ್ತೇನೆ. ಈ ವಾರ್ಷ್ಣೇಯನೂ ಈ ಜೀವಲನೂ ನನ್ನ ಅಶ್ವಾಧ್ಯಕ್ಷರು. ಇವರು ನೀನು ಹೇಳಿದ ಪ್ರಕಾರ ನಡೆದುಕೊಳ್ಳುವ ಹಾಗೆ ಕಟ್ಟು ಮಾಡುತ್ತೇನೆ. ಇವರಿಬ್ಬರನ್ನು ನಿನ್ನಾಧೀನ ಮಾಡಿಕೊಂಡು, ಸುಖದಿಂದ ಇರು, ಅಂದನು.

ನಳನು ಆ ರುತುಪರ್ಣನ ಮಾತುಗಳನ್ನು ಕೈಕೊಂಡು, ಅಯೋಧ್ಯಾಪಟ್ಟಣದಲ್ಲಿ ವಾರ್ಷ್ಣೇಯನೂ ಜೀವಲನೂ ತನ್ನ ಹಿಂದುಗಡೆಯಲ್ಲಿ ಬರುತ್ತಿರಲು; ಕುದುರೆಗಳನ್ನು ತಿದ್ದುತ್ತಾ, ಪ್ರತಿ ದಿವಸದ ರಾತ್ರಿಯಲ್ಲಿಯೂ ಚೆಲುವೆಯಾಗಿ ಪತಿವ್ರತಾ ಶಿರೋಮಣಿಯಾಗಿರುವ ದಮಯಂತಿಯನ್ನು ನೆನೆದು, ಸಂಸ್ಕೃತ ಶ್ಲೋಕ ರೂಪದಿಂದ—ಹಸಿವು ಬಾಯಾರಿಕೆಗಳಿಂದ ಕಂಗೆಟ್ಟು, ಆ ವನಿತಾ ಶಿರೋಮಣಿಯು ಮಂದ ಭಾಗ್ಯನನ್ನು ನೆನಸುತ್ತಾ, ಎಲ್ಲಿ ಮಲಗಿ ಇದ್ದಾಳೋ? ಎಂಬ ಈ ಅರ್ಥವುಳ್ಳ ಶ್ಲೋಕವನ್ನು ಪ್ರತಿ ದಿವಸವೂ ಹೇಳುತ್ತಿರಲು; ಒಂದು ದಿವಸ ಜೀವಲನು ಅದನ್ನು ಕೇಳಿ, ಎಲೈ, ಬಾಹುಕನೇ,

ದಿನ ದಿನವು ಈ ಶ್ಲೋಕವನ್ನೇ ಹೇಳುತ್ತಾ, ಯಾರನ್ನು ನೆನಸಿ ಕೊಂಡು, ದುಃಖ ಪಡುತ್ತೀ ಎಂದು ಕೇಳಲು;—ಎಲೈ, ಜೀವಲನೇ, ಹೆಡ್ಡನಾದ ಒಬ್ಬ ಮನುಷ್ಯನು ಉಂಟು. ಆತನಿಗೆ ಅನುರಾಗವುಳ್ಳ ಒಬ್ಬಳು ಹೆಂಡತಿ ಉಂಟು. ಅವನಿಗೆ ಅವಳಲ್ಲಿ ಬಹು ಪ್ರೀತಿ ಉಂಟು. ಆ ಪುರುಷನು ಒಂದು ಕಾರಣದಿಂದ ಮಂದ ಬುದ್ಧಿಯಾಗಿ ಅವಳನ್ನು ಬಿಟ್ಟು, ರಾತ್ರಿ ಹಗಲು ಶೋಕಾಗ್ನಿಯಿಂದ ಸುಡಲ್ಪಟ್ಟು, ರಾತ್ರಿ ಕಾಲದಲ್ಲಿ ಅವಳನ್ನು ನೆನೆದು, ಹೆಚ್ಚಾದ ದುಃಖವನ್ನು ಅನುಭವಿಸುತ್ತಾನೆ. ಅವನನ್ನು ನೆನೆದು, ನಾನು ವ್ಯಸನ ಪಡುತ್ತೇನೆ. ಅವನು ನನಗೆ ಸಂಗಡಿಗನು ಎಂದು, ಈ ಪ್ರಕಾರದಿಂದ ಮರೆಯಾಗಿ ಹೇಳಿ, ತನ್ನನ್ನು ಒಬ್ಬರೂ ಅರಿಯದ ಹಾಗೆ ಗುಟ್ಟಾಗಿ ದಮಯಂತಿಯನ್ನು ನೆನೆದು, ದುಃಖ ಪಡುತ್ತಾ, ಅಯೋಧ್ಯಾ ಪಟ್ಟಣದಲ್ಲಿ ಇದ್ದನು.

ಇತ್ತಲಾ ನಳನು ಜೂಜಿನಿಂದ ತನ್ನ ರಾಜ್ಯವನ್ನೂ ಸಕಲ ವಸ್ತುಗಳನ್ನೂ ಕಳ ಕೊಂಡು, ಹೆಂಡತಿಯೊಡನೆ ಕೂಡಿ, ವನಕ್ಕೆ ಹೋಗಿ, ಇಂಥಾ ತಾವಿನಲ್ಲಿ ಇದ್ದಾನೆ ಎಂದು ಕೇಳದೆ ಇರುವದರಿಂದ, ಭೀಮ ಭೂಪಾಲಕನು ತನ್ನ ಮಗಳಾದ ದಮಯಂತಿಯನ್ನೂ ಅಳಿಯನಾದ ನಳನನ್ನೂ ಹುಡುಕುವದಕ್ಕೆ ಬ್ರಾಹ್ಮಣರನ್ನು ಕರ ತರಿಸಿ, ಅವರಿಗೆ ಅನೇಕ ದ್ರವ್ಯಗಳನ್ನು ಕೊಟ್ಟು,—ನೀವು ಎಲ್ಲಾ ದೇಶಗಳಿಗೂ ಹೋಗಿ, ನಳನನ್ನೂ ದಮಯಂತಿಯನ್ನೂ ಹುಡುಕಿ, ಇಲ್ಲಿಗೆ ಕರ ಕೊಂಡು ಬನ್ನಿ. ಕರ ಕೊಂಡು ಬಂದಂಥಾವರಿಗೆ ಪಟ್ಟಣಗಳಿಗೆ ಸರಿಯಾದ ಗ್ರಾಮಗಳ ಸರ್ವಮಾನ್ಯವನ್ನೂ ಸಾವಿರ ಆಕಳುಗಳನ್ನೂ ಬಹಳ ಹಣಗಳನ್ನೂ ಕೊಡುವೆನು. ಹಾಗೆ ಹುಡುಕುವಾಗ ನಳನನ್ನಾದರೂ ದಮಯಂತಿಯನ್ನಾದರೂ ನೋಡಿ, ಕರೆದಾಗ್ಯೂ, ಅವರು ಇಲ್ಲಿಗೆ ಬಾರದೆ ಹೋದರೆ, ಅವರ ಯೋಗ ಕ್ಷೇಮವನ್ನು ತಿಳಿದು, ಹೇಳಿದಂಥಾವರಿಗೆ ಸಾವಿರ ಹಸುಗಳನ್ನೂ ಕೆಲವು ಮೋಹರಗಳನ್ನೂ ಕೊಡುತ್ತೇನೆ ಎಂದು ಹೇಳಲು; ಬ್ರಾಹ್ಮಣರು ಸಂತೋಷ ಪಟ್ಟು, ಅವರಿಬ್ಬರನ್ನು ಹುಡುಕುವದಕ್ಕೆ ದಿಕ್ಕು ದಿಕ್ಕಿಗೆ ಹೋಗಿ, ಹುಡುಕುತ್ತಾ ಇದ್ದರು. ಅವರಲ್ಲಿ ವಸುದೇವನೆಂಬ ಬ್ರಾಹ್ಮಣನು ಅಲ್ಲಿ ಅಲ್ಲಿ ಹುಡುಕುತ್ತಾ, ಪ್ರತಿ ದಿನವು ಪ್ರಯಾಣಗಳನ್ನು ಮಾಡುತ್ತಾ ಬಂದು, ಸುಬಾಹು ರಾಯನ ಪಟ್ಟಣವನ್ನು ಹೊಕ್ಕು, ಅರಮನೆಯಲ್ಲಿ ಪುಣ್ಯಾಹವಾಚನೆ ಮಾಡುವದಕ್ಕೆ ಹೋಗುವ ಪುರೋಹಿತರ ಸಂಗಡ ತಾನೂ ಅಂತಃಪುರಕ್ಕೆ ಹೋಗಿ, ಬಡವಾಗಿ ಗಂಡನ ಚಿಂತೆಯಿಂದ ಕರಗುತ್ತಾ, ತಾವರೆಯಂತೆ ಕಣ್ಣುಗಳುಳ್ಳವಳಾಗಿ, ಸುನಂದೆಯೊಡನೆ ಕೂಡಿರುವ ದಮಯಂತಿ

ಯನ್ನು ನೋಡಿ, ಹೊಗೆಯ ತಂಡದಿಂದ ಮುಚ್ಚಲ್ಪಟ್ಟ ಬೆಂಕಿಯ ಉರಿಯ ಹಾಗೆ ಇರುವ ಮಲಿನವಾದ ಮೈಯುಳ್ಳ ಆ ಹೆಂಗಸನ್ನು ಗುರುತುಗಳಿಂದ ದಮಯಂತಿ ಎಂದು ನಿಶ್ಚೈಸಿ, ಜಗನ್ಮೋಹನಾಕಾರೆಯಾಗಿ, ದೊಡ್ಡದಾದ ಮೊಲೆಗಳುಳ್ಳವಳಾಗಿ, ತಾವರೇ ಎಸಳಿನ ಹಾಗೆ ಇರುವ ಕಣ್ಣುಗಳುಳ್ಳವಳಾಗಿ, ಮನ್ಮಥನ ಹೆಂಡತಿಯಾದ ರತಿಯ ಹಾಗೆ ಚೆಲುವೆಯಾಗಿ, ಚಂದ್ರಕಳೆಯೋಪಾದಿಯಲ್ಲಿ ಹೊಳೆಯುತ್ತಲಿದ್ದ ಈಕೆಯು ಈಗ ಗಂಡನ ವಿಯೋಗದಿಂದ ಕಂದಿ, ಕುಂದಿದವಳಾಗಿ, ರಾಹು ಹಿಡಿದ ಚಂದ್ರಮಂಡಲವುಳ್ಳ ಪೌರ್ಣಮಿಯ ರಾತ್ರಿಯನ್ನು ಹೋಲುತ್ತಾಳೆ. ಭೀಮ ಭೂಪಾಲನೆಂಬ ಕೊಳದಲ್ಲಿ ಹುಟ್ಟಿ, ದೈವವು ಕಿತ್ತು ಹಾಕಲು, ಕೆಸರಿನಿಂದ ಕೂಡಿ ಬಾಡಿರುವ ತಾವರೇ ದಂಟಿಗೆ ಸರಿಯಾಗಿ ಇದ್ದಾಳೆ. ಮತ್ತು ಅಲ್ಪವಾದ ಶೆಳವು ಉಳ್ಳ ಹೊಳೆಗೂ, ಛಳಿಗಾಲದಲ್ಲಿ ಉದುರಿ ಹೋಗಿರುವ ಕಮಲಿನಿಗೂ, ಆನೆಗಳಿಂದ ಕಲಕಲ್ಪಟ್ಟ ಕೊಳಗಳಿಗೂ ಸಮಾನಳಾಗಿದ್ದಾಳೆ. ಸಕಲಾಭರಣಗಳನ್ನು ತೊಟ್ಟಿದ್ದಂಥಾವಳು ಈಗ ಆಭರಣ ಹೀನಳಾಗಿದ್ದಾಳೆ. ಪಟ್ಟೆ ಪೀತಾಂಬರಗಳನ್ನು ಉಟ್ಟಿದ್ದಂಥಾವಳು ಈಗ ಮಾಸಿದ ಬಟ್ಟೆಯನ್ನು ಉಟ್ಟಿದ್ದಾಳೆ. ಗಂಡನನ್ನು ಅಗಲಿ, ತಿರಿಗಿ ನೋಡೇನು ಎಂಬ ಅಭಿಲಾಷೆಯಿಂದ ಶರೀರವನ್ನು ಧರಿಸಿ ಇದ್ದಾಳೆ. ಇಂಥಾ ದಮಯಂತಿಯನ್ನು ಬಿಟ್ಟು, ನಳನು ದುಖ್ಖದಿಂದ ಬದುಕಿ ಇದ್ದಾನೋ, ಇಲ್ಲವೋ, ತಿಳಿಯದು. ಇವಳನ್ನು ನೋಡಿದರೆ, ನನ್ನಂಥಾವನಿಗೂ ಹೃದಯವು ತಪಿಸುತ್ತದೆ. ರೋಹಿಣಿಯು ಚಂದ್ರನೊಡನೆ ಕೂಡಿದ ತೆರದಿಂದ ಈಕೆಯು ನಳನೊಡನೆ ಯಾವಾಗ ಕೂಡಿ, ಇಂಥಾ ದಃಖ್ಖದ ಕಡಲನ್ನು ದಾಟುವಳೋ, ತಿಳಿಯದು. ನಳನು ಈಕೆಯೊಡನೆ ಕೂಡಿದರೆ, ಹಗೆಗಳಿಂದ ಅಪಹೃತವಾದ ರಾಜ್ಯವು ತಿರಿಗಿ ಲಭಿಸಿದಂತೆ ಸಂತೋಷ ಪಡುವನು ಎಂದು, ಈ ಪ್ರಕಾರ ಆಲೋಚಿಸಿ, ದಮಯಂತಿಯ ಬಳಿಗೆ ಹೋಗಿ—ತಾಯೀ, ನಾನು ವಸುದೇವನೆಂಬ ಬ್ರಾಹ್ಮಣನು; ನಿನ್ನ ತಂದೆಯಾದ ಭೀಮ ಭೂಪಾಲನಿಗೆ ಮಿತ್ರನು. ಆತನು ನನ್ನನ್ನು ನಿನ್ನ ಹುಡುಕುವದಕ್ಕೆ ಕಳುಹಿಸಲು; ನಾನು ಇಲ್ಲಿಗೆ ಬಂದೆನು. ನಿನ್ನ ತಾಯಿ ತಂದೆಗಳೂ ಒಡಹುಟ್ಟುಗಳೂ ನಿನ್ನ ಮಗನೂ ನಿನ್ನ ಮಗಳೂ ಸುಖವಾಗಿ ಇದ್ದಾರೆ. ನಿನ್ನ ನೆಂಟರಿಷ್ಟರೆಲ್ಲಾ ನಿನ್ನನ್ನು ನೋಡದೆ ಇರುವದರಿಂದ ಪ್ರಾಣವಿಲ್ಲದವರ ಹಾಗೆ ಇದ್ದಾರೆ. ನಿನ್ನನ್ನು ಹುಡುಕುವದಕ್ಕೆ ಸಾವಿರಾರು ಸಂಖ್ಯೆಯುಳ್ಳ ಬ್ರಾಹ್ಮಣರನ್ನು ಕಳುಹಿಸಿ ಇದ್ದಾರೆ ಎಂದು ಹೇಳಿದನು.

ಆಗ ದಮಯಂತಿಯು, ಈತನು ವಸುದೇವನು ಹೌದು ಎಂದು ತಿಳಿದು, ತನ್ನವರ ಕ್ಷೇಮಗಳನ್ನು ಬೇರೆ ಬೇರೆಯಾಗಿ ಕೇಳಿ, ತಿಳು ಕೊಂಡು, ಆ ಮೇಲೆ ಇಷ್ಟಪಟ್ಟು ಎಂದು ಹೇಳ ಕೂಡದ ದುಃಖದಿಂದ ಕೂಗಿ ಅಳಲು; ಅವಷ್ಟನ್ನು ಸುನಂದಾ ದೇವಿಯು ತಿಳಿದು, ತನ್ನ ತಾಯಿಗೆ ತಿಳಿಸಿದಳು. ಆ ಅರಸಿನ ತಾಯಿಯು ಬಹು ಬೇಗ ಅಲ್ಲಿಗೆ ಬಂದು, ಆ ವಸುದೇವನೆಂಬ ಬ್ರಾಹ್ಮಣನನ್ನು ನೋಡಿ,—ಇವಳ್ಯಾರು? ಇಲ್ಲಿಗೆ ನೀನು ಯಾಕೆ ಬಂದೆ? ಇದೆಲ್ಲಾ ನನಗೆ ತಿಳಿಸು ಎಂದು ಕೇಳಿದಳು. ಆಗ ವಸುದೇವನು—ಎಲೈ, ರಾಜ ಮಾತೆಯೇ, ಇವಳು ವಿದರ್ಭ ದೇಶಾಧಿಪತಿಯಾದ ಭೀಮರಾಯನ ಮಗಳು; ಇವಳ ಹೆಸರು ದಮಯಂತಿಯು. ಮಹಾನುಭಾವನಾದ ನಳಚಕ್ರವರ್ತಿಯು ಈಕೆಯ ಗಂಡನು. ಆತನು ದಾಯಾದಿಗಳೊಡನೆ ಜೂಜಾಡಿ, ರಾಜ್ಯಕೋಶಗಳು ಮೊದಲಾದ ಸಕಲೈಶ್ವರ್ಯವನ್ನು ಕಳ ಕೊಂಡು, ಈ ಹೆಂಡತಿಯೊಡನೆ ಪಟ್ಟಣವನ್ನು ಬಿಟ್ಟು, ಅರಣ್ಯವನ್ನು ಹೊಕ್ಕನು. ಆತನು ಇಂಥಾ ಸ್ಥಳದಲ್ಲಿ ಇದ್ದಾನೆಂದು ಗೊತ್ತು ತಿಳಿಯದು. ಇವರನ್ನು ಹುಡುಕುವದಕ್ಕೆ ಭೀಮ ರಾಯನು ಸಕಲ ದೇಶಗಳಿಗೆ ಬ್ರಾಹ್ಮಣರನ್ನು ಕಳುಹಿಸಿದ್ದರಿಂದ ಅವರು ದೇಶ ದೇಶಗಳಲ್ಲಿ ಹುಡುಕುತ್ತಿದ್ದಾರೆ, ನಾನು ಒಬ್ಬನೇ ಈ ಪಟ್ಟಣಕ್ಕೆ ಬಂದು, ಈಕೆಯನ್ನು ಕಂಡು, ಸಕಲ ಐಶ್ವರ್ಯವು ಇವಳಿಗೆ ಉಂಟು ಎಂಬುವದಕ್ಕೆ ಬ್ರಹ್ಮನಿಂದ ಸೂಚನೆಯಾಗಿ ಈ ದಮಯಂತಿಯ ಭ್ರೂಮಧ್ಯದಲ್ಲಿ ಪದ್ಮಾಕಾರವಾದ ಒಂದು ಮತ್ತಿಯು ನಿರ್ಮಿತವಾಗಿರುವದು. ಅದು ಮೇಘದಿಂದ ಮುಚ್ಚಲ್ಪಟ್ಟ ಚಂದ್ರ ರೇಖೆಯ ಹಾಗೆ ಧೂಳಿಯಿಂದ ಮಾಸಿ, ಚನ್ನಾಗಿ ಕಾಣಿಸುವದಿಲ್ಲ. ಅದರ ಸುಮಾರಿನಿಂದ ನಾನು ಈಕೆಯನ್ನು ಗೊತ್ತು ಮಾಡಿದೆನು, ಅಂದನು. ಅದನ್ನು ಕೇಳಿ, ಸುನಂದಾ ದೇವಿಯು ದಮಯಂತಿಯ ಹಣೆಯಲ್ಲಿ ಇರುವ ಧೂಳಿಯನ್ನು ತನ್ನ ಶೀರೇ ಶೆರಗಿನಿಂದ ಒರಿಸಲು; ಮೇಘ ಮಂಡಲದಿಂದ ಹೊರಟು ಬರುವ ಸೂರ್ಯ ಬಿಂಬದಂತೆ ತೋರುವ ಮತ್ತಿಯನ್ನು ನೋಡಿ, ಸುಬಾಹು ರಾಜನ ಮಾತೆಯು ದಮಯಂತಿಯನ್ನು ತಬ್ಬಿ ಕೊಂಡು, ಕಣ್ಣೀರನ್ನು ಸುರಿಸುತ್ತಾ, ಆಕೆಯನ್ನು ನೋಡಿ,—ತಾಯಿ, ನಿನ್ನ ಹುಬ್ಬುಗಳ ನಡುವೆ ಇರುವ ಮತ್ತಿಯನ್ನು ನೋಡಿದ್ದರಿಂದ, ನನ್ನ ಒಡಹುಟ್ಟಿದವಳ ಮಗಳೆಂದು ತಿಳಿದೆನು. ನಾನೂ ನಿನ್ನ ತಾಯಿಯೂ ದಶಾರ್ಣ ದೇಶಾಧ್ಯಕ್ಷನಾದ ಸುಧಾಮನ ಮಕ್ಕಳು. ಆತನು ನಿನ್ನ ತಾಯಿಯನ್ನು ಭೀಮ ಭೂಪಾಲಕನಿಗೂ, ನನ್ನನ್ನು ಚೇದಿ ದೇಶಾಧೀಶನಾದ ವೀರ ಬಾಹುಕನಿಗೂ, ಕೊಟ್ಟ

ನು. ನಿನ್ನ ತಾಯಿಯು ತೌರ ಮನೆಗೆ ಬಂದಾಗ, ಚಿಕ್ಕತನದಲ್ಲಿ ನಿನ್ನನ್ನು ನೋಡಿ, ಉಂಟು. ಆದ್ದರಿಂದ ನೀನು ಈ ಮನೆಗೂ ನಿನ್ನ ತಂದೆಯ ಮನೆಗೂ ಭೇದವೆಣಿಸ ಬೇಡ. ಈ ಐಶ್ವರ್ಯವಷ್ಟು ನಿನ್ನದು ಎಂದು ಎಣಿಸು, ಅಂದಳು.

ಆಗ ದಮಯಂತಿಯು ತನ್ನ ಚಿಕ್ಕಮ್ಮನಿಗೆ ನಮಸ್ಕಾರವನ್ನು ಮಾಡಿ—ಎಲೇ, ತಾಯೇ, ನನ್ನ ಸ್ವರೂಪವನ್ನು ತಿಳಿಯದಿದ್ದರೂ ಮಗಳೋಪಾದಿಯಲ್ಲಿ ನೀನು ಕಾಪಾಡಿದ್ದರಿಂದ, ಇಷ್ಟು ದಿವಸಗಳು ನಿನ್ನ ಮನೆಯಲ್ಲಿ ಸುಖವಾಗಿ ಇದ್ದೆನು. ನನ್ನ ಮಗಳಾದ ಇಂದ್ರಸೇನಿಯು ತಾಯಿ ತಂದೆಗಳನ್ನು ಅಗಲಿ, ಬಹು ಕಾಲವಾಯಿತು. ಹ್ಯಾಗಿದ್ದಾಳೋ, ತಿಳಿಯಲಿಲ್ಲ. ನಿನ್ನ ಮನಸ್ಸಿನಲ್ಲಿ ನನಗೆ ಪ್ರಿಯವನ್ನು ಮಾಡ ಬೇಕೆಂದು ಎಣಿಸಿದರೆ, ನನ್ನನ್ನು ಶೀಘ್ರದಲ್ಲಿ ವಿದರ್ಭ ನಗರಕ್ಕೆ ಕಳುಹಿಸ ಬೇಕೆನಲು; ಆ ದೇವಿಯು—ಹಾಗೆ ಆಗಲಿ ಎಂದು, ತನ್ನ ಮಗನಾದ ಸುಬಾಹುಕನನ್ನು ಕರತರಿಸಿ, ಅರಿಕೆ ಮಾಡಿ, ಆ ಕನ್ಯಾಮಣಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿ, ಅನೇಕ ದಾಸ ದಾಸೀ ಜನಗಳನ್ನೂ ಬೇಕಾದ ವಸ್ತುಗಳನ್ನೂ ಕೊಟ್ಟು, ಅಂಗರಕ್ಷೆಗೆ ಚತುರ್ಬಲವನ್ನು ಜೊತೆಗೊಳಿಸಿ, ಕಳುಹಿಸಲು; ದಮಯಂತಿಯು ಶೀಘ್ರವಾಗಿ ತನ್ನ ತೌರ ಮನೆಗೆ ಹೋಗಿ, ತನ್ನ ಮಕ್ಕಳನ್ನೂ ತಾಯಿ ತಂದೆಗಳನ್ನೂ ನೆಂಟ ಇಷ್ಟರನ್ನೂ, ತನ್ನ ಸಂಗಾತಿಗಳನ್ನೂ ನೋಡಿ, ಸಂತೋಷ ಪಟ್ಟಳು. ಆ ಬಳಿಕ ಭೀಮ ಭೂಪಾಲಕನು ವಸುದೇವನಿಗೆ ಸಾವಿರ ಹಸುಗಳನ್ನೂ ಅನೇಕ ಧನ ರತ್ನಗಳನ್ನೂ ಊರುಂಬಳಿಗಳನ್ನೂ ಕೊಟ್ಟನು.

ಮೂರನೇ ದಿವಸ ದಮಯಂತಿಯು ತನ್ನ ತಾಯಿಯನ್ನು ಕುರಿತು—ಎಲೈ, ತಾಯೇ, ನೀನು ನಾನು ಪ್ರಾಣದೊಡನೆ ಇರ ಬೇಕೆಂದು ಎಣಿಸಿದರೆ, ನಳನು ಇರುವ ಎಡೆಗೆ ಬ್ರಾಹ್ಮಣರನ್ನು ಕಳುಹಿಸಿ, ಹುಡುಕುವದಕ್ಕೆ ಯತ್ನವನ್ನು ಮಾಡಿಸೆಂದು ನುಡಿಯಲು; ಕೇಳಿ, ಗದ್ಗದ ಕಂಠದೊಡನೆ ಬದಲು ಮಾತು ಆಡಲಾರದೆ, ಕಣ್ಣೀರುಗಳನ್ನು ಧಾರೆಯಾಗಿ ಸುರಿಸುತ್ತಾ, ಭೀಮ ಭೂಪಾಲಕನ ಎಡೆಗೆ ಹೋಗಿ—ಎಲೈ, ರಾಜೇಂದ್ರನೇ, ನಿನ್ನ ಮಗಳು ತನ್ನ ಗಂಡನಾದ ನಳನನ್ನು ಅಗಲಿ ಇರುವದರಿಂದ ಬಹಳ ದುಃಖಾಕ್ರಾಂತೆಯಾಗಿ ಚಿಂತಿಸುತ್ತಾ, ಆತನನ್ನು ತಡಕುವದಕ್ಕೆ ಜನರನ್ನು ಕಳುಹಿಸ ಬೇಕೆಂದು, ನಾಚಿಕೆಯನ್ನು ಬಿಟ್ಟು ಹೇಳುತ್ತಾಳೆ, ಎನಲು; ಭೀಮ ನರೇಂದ್ರನು ತನ್ನ ಬಳಿಯಲ್ಲಿ ಇರುವ ಹಾರುವರನ್ನು ಕರೆದು—ಇಳೆಯ ಮೇಲೆ ತಿರುಗಿ, ನಳನನ್ನು ತಡಕಿ, ಅವನಿ

ರುವ ಎಡೆಯನ್ನು ಅರಿದು, ಬನ್ನಿ ಎಂದು, ಅಪ್ಪಣೇ ಕೊಡಲು; ಅವರು ದಮಯಂತಿಯ ಬಳಿಗೆ ಬಂದು, ನಿನ್ನ ಪತಿಯನ್ನು ಹುಡುಕುವದಕ್ಕೆ ಹೋಗುತ್ತೇವೆ ಎಂದು ಹೇಳಿದರು. ದಮಯಂತಿಯು ಆ ಬ್ರಾಹ್ಮಣರನ್ನು ನೋಡಿ,—ನೀವು ದಿಕ್ಕು ದಿಕ್ಕುಗಳಿಗೆ ಹೋಗಿ, ಹತ್ತು ಮಂದಿ ಕೂಡಿರುವ ಚಾವಡಿಗಳನ್ನು ಹೊಕ್ಕು,—ನೀನು ಧರ್ಮವನ್ನು ತಿಳಿದವರಲ್ಲಿ ಪ್ರಸಿದ್ಧನಾಗಿ, ವಿವೇಕಿಯಾಗಿ, ದೊಡ್ಡ ಕುಲದಲ್ಲಿ ಹುಟ್ಟಿ, ದಯಾ ಸಮೇತನಾಗಿ, ಸದಾಚಾರ ಸಂಪನ್ನನಾಗಿ ಇದ್ದರೂ, ಧೂರ್ತನಾಗಿ, ಕೃಪಾ ರಹಿತನಾಗಿ, ನಡು ರಾತ್ರಿಯಲ್ಲಿ ನಿದ್ರೆ ಹೋಗುವಾಗ, ವಂಚಿಸಿ, ಉಟ್ಟ ಬಟ್ಟೆಯಲ್ಲಿ ಅರವಾಶಿ ಬಟ್ಟೆಯನ್ನು ಹರ ಕೊಂಡು, ನಿನ್ನಲ್ಲಿ ತುಂಬಾ ಪ್ರೀತಿಯುಳ್ಳ, ನಿನಗೆ ಧರ್ಮ ಪತ್ನಿಯಾದ ದಮಯಂತಿಯನ್ನು ಕಾಡಿನ ನಡುವೆ ಬಿಟ್ಟು, ನೀನು ಎಲ್ಲಿಗೆ ಹೋದೆ? ನಿನ್ನನ್ನು ಅಗಲಿದ್ದರಿಂದ ಕ್ಲೇಶ ಪಡುತ್ತಾ, ಆಕೆಯು ನೀನೆಲ್ಲಿ ಬಿಟ್ಟು ಬಂದೆಯೋ, ಅಲ್ಲಿ ಇದ್ದು ಕೊಂಡು, ನೀನು ಎಂದಿಗೆ ಬರುವೆಯೋ? ಎಂದು ದಾರೀ ನೋಡುತ್ತಾ, ಅರ್ಧ ಬಟ್ಟೆಯನ್ನು ಉಟ್ಟು ಕೊಂಡು, ದುಖ್ಖದ ಕಿಚ್ಚಿನಿಂದ ಉರಿಯುವ ಮನಸ್ಸುಳ್ಳವಳಾಗಿ ಇದ್ದಾಳೆ. ಅನ್ನ ಬಟ್ಟೆಯನ್ನು ಕೊಟ್ಟು, ಕಾಪಾಡುವದೂ, ಮತ್ತೊಬ್ಬರಿಂದ ತೊಂದರೆ ಬಾರದ ಹಾಗೆ ಹೆಂಡರನ್ನು ರಕ್ಷಿಸುವದೂ, ಗಂಡಂದಿರಿಗೆ ಧರ್ಮವು ಎಂಬ ಈ ಎರಡು ಗುಣಗಳನ್ನು ಬಿಟ್ಟು, ನೀನು ವಂಚಿಸಿ, ಹೋದ್ದರಿಂದ ಅವಳ ನಿರ್ಭಾಗ್ಯತನವೇ ಹೊರತಾಗಿ ನಿನ್ನ ತಪ್ಪಲ್ಲ. ಇನ್ನಾದರೂ ಅವಳಲ್ಲಿ ದಯ ಮಾಡಿ, ಬದಲು ಮಾತನ್ನು ಆಡೆಂದು ಹೇಳಿರಿ. ಆಗ ಅದನ್ನು ಕೇಳಿ, ಯಾವವನು ಬದಲು ಹೇಳುತ್ತಾನೋ, ಆತನು ಐಶ್ವರ್ಯ ಸಂಪನ್ನನಾಗಿರುವದನ್ನೂ ಬಡವನಾಗಿರುವದನ್ನೂ ಅರ್ಥ ಕಾಮ ವಶನಾಗಿರುವದನ್ನೂ ಚನ್ನಾಗಿ ತಿಳು ಕೊಂಡು ಬನ್ನಿರಿ. ಮತ್ತು ಭೀಮ ಭೂಪಾಲಕನು ನಿಮ್ಮನ್ನು ಕಳುಹಿಸಿದವನಾಗಿ, ಆತನು ತಿಳಿಯದ ಹಾಗೆ ಇರ ಬೇಕು. ಮತ್ತು ಬೆಂಕಿಯು ಬೆಣ್ಣೆಯನ್ನು ಕರಗಿಸುವ ಹಾಗೆ ನಿಮ್ಮ ಮಾತುಗಳು ಆತನ ಹೃದಯವನ್ನು ಕರಗಿಸಿ, ನನ್ನಲ್ಲಿ ಪ್ರೀತಿಯನ್ನು ಹುಟ್ಟಿಸ ಬೇಕು ಎಂದು ನುಡಿದಳು. ಅವರು—ಹಾಗೆ ಆಗಲಿ ಎಂದು, ನಾನಾ ದೇಶಗಳಿಗೆ ಹೋಗಿ, ಪಟ್ಟಣ, ಗ್ರಾಮ, ಹಳ್ಳಿ, ಕೊಪ್ಪಲು, ಗಿರಿ, ಬೆಟ್ಟ ಘಟ್ಟಗಳು, ಪುಣ್ಯಾಶ್ರಮಗಳು, ಮಂಟಪ, ಛತ್ರ, ದೇವಸ್ಥಾನ, ರಾಜಸಭೆ, ಬ್ರಾಹ್ಮಣರ ಗೋಷ್ಠಿ, ಇವು ಮೊದಲಾದ ಎಡೆಗಳಲ್ಲಿ ನೆರೆದ ಜನರ ಸಮೂಹದಲ್ಲಿ ದಮಯಂತಿ ಹೇಳಿದ ವಾಕ್ಯಗಳನ್ನು ಹೇಳುತ್ತಾ, ಆ ಮಾತಿಗೆ ಪ್ರತ್ಯುತ್ತರವನ್ನು ಪಡೆಯದೆ, ತಿರಿಗಿ

ವಿದರ್ಭ ಪಟ್ಟಣಕ್ಕೆ ಬಂದು, ದಮಯಂತಿಗೆ ತಿಳಿಸಿ, ತಮ್ಮ ತಮ್ಮ ಮನೆಗೆ ಹೋದರು.

ಮತ್ತೆ ಕೆಲವು ದಿವಸದ ಮೇಲೆ ವರ್ಣಾದನೆಂಬ ಒಬ್ಬ ಬ್ರಾಹ್ಮಣನು ದಮಯಂತಿಯ ಹತ್ರಕ್ಕೆ ಬಂದು—ಎಲೇ, ತಾಯೇ, ನಾನು ಎಲ್ಲಾ ದೇಶಗಳನ್ನು ರಾತ್ರೆ ಹಗಲು ತಿರುಗಿ, ನಳನನ್ನು ಹುಡುಕುತ್ತಾ, ಅಯೋಧ್ಯಾ ಪಟ್ಟಣಕ್ಕೆ ಹೋಗಿ, ಅಲ್ಲಿಗೆ ಅರಸಾದ ಋತುಪರ್ಣನ ಓಲಗದ ಚಾವಡಿಗೆ ಹೋಗಿ, ನೀನು ಮೊದಲು ನಮಗೆ ಹೇಳಿದ ವಾಕ್ಯಗಳಷ್ಟನ್ನು ನುಡಿಯಲು; ಎಲ್ಲರು ಕೇಳಿ ಬದಲುತ್ತರವನ್ನು ಕೊಡದೆ, ಸುಮ್ಮನೆ ಇದ್ದರು. ಆ ಚಾವಡಿಯಲ್ಲಿ ಇದ್ದ ಋತುಪರ್ಣರಾಯನ ಸಾರಥಿಯಾಗಿ, ಅಡಿಗೇ ಮಾಡುವದರಲ್ಲಿಯೂ ಕುದುರೆಗಳನ್ನು ಚುರುಕಾಗಿ ನಡಿಸುವದರಲ್ಲಿಯೂ ಬಹಳ ಘಟ್ಟಿಗನಾದ ಬಾಹುಕನೆಂಬ ಹೆಸರುಳ್ಳ ಒಬ್ಬ ಪುರುಷನು ಹೊರಗೆ ಎದ್ದು, ಬಂದು, ನನ್ನನ್ನು ಏಕಾಂತದಲ್ಲಿ ಕರೆದು, ಹೆಚ್ಚಿದ ಅಳಲಿನಿಂದ ನಿಟ್ಟುಸುರುಗಳನ್ನು ಬಿಡುತ್ತಾ, ಕಣ್ಣೀರನ್ನು ಸುರಿಸುತ್ತಾ, ಮುಂದೆ ನನ್ನ ಪರಿಣಾಮವನ್ನು ಕೇಳಿ, ಆ ಮೇಲೆ—ಎಲೈ, ಬ್ರಾಹ್ಮಣನೇ, ಲೋಕದಲ್ಲಿ ಕಷ್ಟಕಾಲ ಬಂದಾಗ್ಯೆ ಪಾತಿವ್ರತ್ಯ ಧರ್ಮವುಳ್ಳ ಕುಲಸ್ತ್ರೀಯರು ತಮ್ಮನ್ನು ತಾವೇ ಕಾಪಾಡಿ ಕೊಂಡು, ಸ್ವರ್ಗಕ್ಕೆ ಹೋಗುವರು. ಮತ್ತು ಗಂಡನನ್ನು ಅಗಲಿದ ಪತಿವ್ರತೆಯರು ತಮ್ಮ ಒಳ್ಳೇ ನಡತೆ ಎಂಬ ಅಂಗಿಯಿಂದ ರಕ್ಷಿತರಾಗಿ, ಪ್ರಾಣಗಳನ್ನು ತಾಳಿ ಕೊಂಡಿರುವರೇ ಹೊರ್ತು, ಗಂಡರನ್ನು ಹೀಯಾಳಿಸುವದಿಲ್ಲ. ಅವನು ಕಾಲ ಗತಿಯಿಂದ ರಾಜ್ಯ ಕೋಶಗಳೇ ಮೊದಲಾದ ಸಕಲ ಸಂಪತ್ತುಗಳನ್ನು ಕಳ ಕೊಂಡು, ದುಃಖದಿಂದ ಬುದ್ಧಿ ಕೆಟ್ಟು, ಮುಂದೋರದೆ, ಮೂಢನಾಗಿ, ಹುಚ್ಚನಂತೆ ಕಾಡಿನಲ್ಲಿ ಬಿಟ್ಟು ಹೋದನು. ಆದರೂ ಅವನಲ್ಲಿ ಪತಿವ್ರತೆಯಾದ ನೀನು ಕೋಪವನ್ನು ಮಾಡುವದು ಧರ್ಮವಲ್ಲ. ಅವನು ಹೊದ್ದಿದ್ದ ಬಟ್ಟೆಯನ್ನು ಹಕ್ಕಿಯು ಎತ್ತಿ ಕೊಂಡು ಹೋದ್ದರಿಂದ ತನ್ನ ಮಾನವನ್ನು ಕಾಯ್ದು ಕೊಳ್ಳುವದಕ್ಕೆ ಅರ್ಧ ಬಟ್ಟೆಯನ್ನು ಹರಿದು ಕೊಂಡು ಹೋದರೆ, ಆ ತಪ್ಪನ್ನೆಣಿಸಿ, ಹೀಗೆ ಆತನ ಮೇಲೆ ಕೋಪಿಸಬಹುದೇ? ಕುಲ ಸ್ತ್ರೀಯರಿಗೆ ಸಕಲ ಧರ್ಮವು ಗಂಡನೇ ಎಂದು ನೀನು ತಿಳಿದು, ಆತನು ನಿನ್ನ ಕಾಪಾಡಿದರೂ, ಕಾಪಾಡದೇ ಹೋದರೂ, ರಾಜ್ಯ ಹೀನನಾಗಿ, ಸಕಲ ಐಶ್ವರ್ಯಗಳನ್ನು ತೊರೆದು, ಕ್ಲೇಶಗಳನ್ನು ಅನುಭವಿಸುತ್ತಾ, ತಾನು ನಿನ್ನಲ್ಲಿ ಮಾಡಿದ ತಪ್ಪುಗಳನ್ನು ನೆನೆದು, ನೆನೆದು, ತನ್ನೊಳಗೆ ತಾನೇ ಕರಗುವಂಥಾವನ ಮೇಲೆ ತಪ್ಪೆಣಿಸ ಬಹುದೇ? ಎಂದು ನುಡಿದನು. ಇದಷ್ಟನ್ನು

ನಿನಗೆ ತಿಳಿಸಿ ಇದ್ದೇನೆ. ಇನ್ನು ನೀನು ಅರಸಿಗೆ ಅರಿಕೆ ಮಾಡಿ, ನಿನ್ನ ಮನಸ್ಸಿಗೆ ತೋರಿದ ರೀತಿಗೆ ನಡಿ, ಅಂದನು. ಆಗ ದಮಯಂತಿಯು—ತನ್ನ ತಾಯಿಯ ಸಮೀಪಕ್ಕೆ ಹೋಗಿ, ಆ ಸುದ್ದಿಯನ್ನೆಲ್ಲಾ ಹೇಳಿ, ಪರ್ಣಾದನೆಂಬ ವಿಪ್ರನಿಗೆ ವಿವಿಧ ವಿತ್ತಾದಿಗಳನ್ನು ಕೊಡಿಸಿ,—ನಳನು ಇಲ್ಲಿಗೆ ಬರುವಾಗ, ನಿನಗೆ ಬೇಕಾದ ಬಹುಮಾನಗಳನ್ನು ಮಾಡಿಸುತ್ತೇನೆ. ಗಂಡನಗಲಿದ ನನಗೆ ಗಂಡನೊಡನೆ ಕೂಡುವ ಉಪಕಾರವನ್ನು ಮಾಡಿದೆ. ಇಂಥಾ ಉಪಕಾರವನ್ನು ಮಾಡುವವರು ಯಾರು? ಎಂದು, ಶೀ ನುಡಿಗಳನ್ನು ನುಡಿದು, ಕಳುಹಿಸಲು; ಆತನು—ನಿನಗೆ ಶುಭವಾಗಲಿ! ಎಂದು ಆಶೀರ್ವಾದವನ್ನು ಮಾಡಿ, ಕೃತ ಕೃತ್ಯನಾಗಿ ತನ್ನ ಮನೆಗೆ ಹೋದನು.

ತರುವಾಯ ದಮಯಂತಿಯು ತನ್ನ ತಾಯಿಯನ್ನು ಕುರಿತು—ಎಲೇ, ತಾಯೇ, ಈಗ ನಾನು ಒಂದು ಆಲೋಚನೆಯನ್ನು ಹೇಳುತ್ತೇನೆ. ನಾನು ಚನ್ನಾಗಿ ಬದುಕ ಬೇಕೆಂಬ ಆಶೆಯೂ ನಿನಗೆ ಇದ್ದರೆ, ಈ ಮಾತನ್ನು ನನ್ನ ತಂದೆಗೆ ಹೇಳದೆ, ನಿನ್ನ ಮನಸ್ಸಿನಲ್ಲಿಯೇ ಇರಿಸಿ ಕೊಂಡಿರು. ಮೊದಲು ನನ್ನನ್ನು ನಿನ್ನೊಡನೆ ಕೂಡಿಸಿದ ವಸುದೇವನೆಂಬ ಬ್ರಾಹ್ಮಣನನ್ನು ಅಯೋಧ್ಯಾ ಪಟ್ಟಣದಲ್ಲಿ ರುತುಪರ್ಣ ರಾಯನ ಸನ್ನಿಧಾನದಲ್ಲಿ ಇರುವ ನನ್ನ ಗಂಡನನ್ನು ಕರ ತರಿಸುವದಕ್ಕೆ ಕಳುಹಿಸ ಬೇಕು ಎಂದು, ಆತನನ್ನು ಕರ ತರಿಸಿ, ತನ್ನ ತಾಯಿ ಕೇಳುತ್ತಿರಲು; ಆತನನ್ನು ಕುರಿತು—ಎಲೈ, ಬ್ರಾಹ್ಮಣೋತ್ತಮನೇ, ನೀನು ಅಯೋಧ್ಯಾ ಪತಿಯಾದ ರುತುಪರ್ಣ ರಾಯನ ಸನ್ನಿಧಾನಕ್ಕೆ ಹೋಗಿ,—ನಳನು ಜೂಜಿನಲ್ಲಿ ಪರಾಜಿತನಾಗಿ, ಎಲ್ಲಿ ಹುಡುಕಿದರೂ ಕಾಣಿಸದೆ ಇರುವದರಿಂದ, ಆ ದಮಯಂತಿಗೆ ತಿರಿಗಿ ಸ್ವಯಂವರವನ್ನು ಮಾಡುತ್ತಲಿದ್ದಾರೆ. ಸಮಸ್ತವಾದ ಅರಸುಗಳು ಕುಂಡಿನ ನಗರಕ್ಕೆ ಬಂದರು. ನಾಳೆ ಬೆಳಗ್ಗೆ ಸ್ವಯಂವರದಲ್ಲಿ ಎರಡನೇ ಗಂಡನನ್ನು ವರಿಸುತ್ತಲಿದ್ದಾಳೆ. ಅವಳನ್ನು ಮದುವೆಯಾಗ ಬೇಕೆಂದು ನಿನಗೆ ಬಯಕೆ ಇದ್ದರೆ, ಬೇಗನೇ ಹೋಗ ಬಹುದು ಎಂದು ಹೇಳಿ, ಬಂದು ಬಿಡು ಎಂದು ಕಳುಹಿಸಲು; ಆತನು ಅಯೋಧ್ಯಾ ಪಟ್ಟಣಕ್ಕೆ ಹೋಗಿ, ರುತುಪರ್ಣನೊಡನೆ ದಮಯಂತಿ ಹೇಳಿದ ಹಾಗೆ ತಿಳಿಸಿ, ತಿರಿಗಿ ಕುಂಡಿನ ಪಟ್ಟಣಕ್ಕೆ ಹೊರಟು ಬಂದನು. ರುತುಪರ್ಣ ರಾಯನು ಆ ಮಾತನ್ನು ಕೇಳಿ, ತನ್ನ ಮನಸ್ಸಿನಲ್ಲಿ, ಇದೇನೋ? ಬಹಳ ಆಶ್ಚರ್ಯವಾಗಿದೆ. ಮಹಾ ಪತಿವ್ರತೆಯಾದ ದಮಯಂತಿಯು ನಳನನ್ನು ಬಿಟ್ಟು, ಮತ್ತೊಬ್ಬನನ್ನು ವರಿಸೋಣಾ ಅಂದರೆ ಏನು? ಇದೇನೋ? ನಳನ ಗುರುತು ಹಿಡಿಯುವದಕ್ಕೆ ಮಾಡಿದ ಕಪ

ಟೋಪಾಯವಾಗಿ ತೋರುತ್ತದೆ. ಇದರ ಬುಡವನ್ನು ಅಗತ್ಯವಾಗಿ ತಿಳಿಯ
ಬೇಕೆಂದು ನಿಶ್ಚೈಸಿ, ತನ್ನ ಸಾರಥಿಯಾದ ಬಾಹುಕನನ್ನು ಕರಿಸಿ—ಎಲೈ, ಬಾ
ಹುಕನೇ, ದಮಯಂತಿಯ ಸ್ವಯಂವರಕ್ಕೆ ವಿದರ್ಭ ರಾಯನ ಪಟ್ಟಣಕ್ಕೆ
ಹೋಗಿ, ಎರಡನೇ ಸ್ವಯಂವರವನ್ನು ನೋಡ ಬೇಕೆಂದು ಎಣಿಸಿ ಇದ್ದೇನೆ.
ನೀನು ಕುದುರೆಯ ಮನಸ್ಸನ್ನು ತಿಳಿದವನಾದ್ದರಿಂದ, ನಿನ್ನ ಕುಶಲತ್ವವನ್ನು
ತೋರಿಸುವದಕ್ಕೆ ಇದೇ ಸಮಯವಾಗಿದೆ. ನಿನಗೆ ಬೇಕಾದ ಕುದುರೆಗಳನ್ನು
ರಥಕ್ಕೆ ಕಟ್ಟಿ, ನನ್ನನ್ನು ಒಂದು ದಿವಸದೊಳಗೆ ಕುಂಡಿನ ಪಟ್ಟಣಕ್ಕೆ ಕರ
ಕೊಂಡು ಹೋಗ ಬೇಕು ಎಂದು ಹೇಳಿದನು.

ನಳನು ಆ ಮಾತನ್ನು ಕೇಳಿ, ಎದೆಯಲ್ಲಿ ಶೂಲ ನೆಟ್ಟಂತೆ ಕೊರಗುತ್ತಾ,—
ಕ್ಷುದ್ರನಾಗಿ, ಪಾಪ ಬುದ್ಧಿಯಾಗಿ, ವಂಚಕನಾಗಿರುವ ನಾನು ತನಗೆ ಬಹಳ
ಅಪಕಾರವನ್ನು ಮಾಡಿದ್ದರಿಂದ, ಹೆಂಗಸರ ಮನಸ್ಸು ಮಿಂಚಿನಂತೆ ಚಂಚಲ
ವಾದ ಕಾರಣ, ನನ್ನಲ್ಲಿ ನಿರಾಶೆಯಿಂದ ಸ್ನೇಹವನ್ನು ಬಿಟ್ಟು, ಇಂಥಾ ಕ್ರೂರ
ಕರ್ಮವನ್ನು ಆಚರಿಸಿದಳೋ, ಏನೋ? ಎಂದು, ಮೊದಲು ತನ್ನ ಮನಸ್ಸಿ
ನಲ್ಲಿ ಯೋಚಿಸಿ, ಮತ್ತೆ ತಿರಿಗಿ—ಅಕಟಕಟಾ! ಮಹಾ ಪತಿವ್ರತಾ ಶಿರೋ
ಮಣಿಯಾದ ಆಕೆಯು ಪ್ರಾಣವನ್ನು ತೊರ ಕೊಳ್ಳುವಳೇ ಹೊರತಾಗಿ, ಇಂಥಾ
ಕೆಟ್ಟ ಕೆಲಸವನ್ನು ಎಂದಿಗೂ ಯೋಚಿಸಳು. ನಾನು ವಸುದೇವನ ಬಳಿ
ಯಲ್ಲಿ ಹೇಳಿ ಕಳುಹಿಸಿದ ಮಾತಿನಿಂದ ನಾನು ಇಲ್ಲಿ ಇರುವದನ್ನು ತಿಳಿದು,
ನನ್ನನ್ನು ಕರತರಿಸ ಬೇಕೆಂದು, ಹೀಗೆ ಮಾಡಿರುವಳು ಎಂದು ಎಣಿಸಿ, ರುತು
ಪರ್ನ ರಾಯನ ಕಾರ್ಯಕ್ಕಾಗಲಿ, ನನ್ನ ಕಾರ್ಯಕ್ಕಾಗಲಿ, ಹೋಗ ಬೇಕಲ್ಲಾ!
ಅಂದು ಕೊಂಡು, ಕೈ ಮುಗಿದು, ರುತುಪರ್ನನನ್ನು ಕುರಿತು—ಎಲೈ,
ಅರಸೇ, ನಿನ್ನನ್ನು ಒಂದೇ ದಿವಸದಲ್ಲಿ ಕುಂಡಿನ ಪಟ್ಟಣಕ್ಕೆ ಕರ ಕೊಂಡು
ಹೋಗಿ, ಬಿಡುವೆನು ಎಂದು ಪ್ರತಿಜ್ಞೆಯನ್ನು ಮಾಡಲು; ಆ ಮಾತನ್ನು
ಕೇಳಿ, ರುತುಪರ್ನನು—ಎಲೈ, ಬಾಹುಕನೇ, ನಿನ್ನ ಮಾತಿನಿಂದ ಬಹಳ
ಸಂತೋಷವಾಯಿತು. ನಿನಗೆ ಬೇಕಾದ ವಸ್ತುಗಳನ್ನು ಕೊಡುತ್ತೇನೆ;
ಬೇಡೆನಲು; ನಳನು—ನೀನು ಎಣಿಸಿರುವ ಕಾರ್ಯವನ್ನು ನೆರವೇರಿಸಿ, ನಿನ್ನನ್ನು
ಮೆಚ್ಚಿಸಿ, ಆ ಬಳಿಕ ತೆಗೆದು ಕೊಳ್ಳುತ್ತೇನೆ ಎಂದು, ಆತನ ಅಪ್ಪಣೆಯನ್ನು
ತೆಗೆದು ಕೊಂಡು, ಕುದುರೇ ಲಾಯಕ್ಕೆ ಹೋಗಿ, ಕೃಶಾಂಗಗಳಾಗಿ, ದಾರಿ
ಯನ್ನು ನಡಿಯುವದಕ್ಕೆ ತಕ್ಕವುಗಳಾಗಿ, ವೇಗದಿಂದ ವಾಯುವನ್ನು ಜೈಸು
ವಂಥಾವುಗಳಾಗಿ, ತೇಜೋ ಬಲ ಸಮೇತಗಳಾಗಿ, ಉತ್ತಮ ಲಕ್ಷಣಗಳೂ,

ಗಂಭೀರ ಧ್ವನಿಯೂ, ವಿಶಾಲವಾದ ಎದೆಯೂ, ಮಂಗಳಕರವಾಗಿರುವ ಹತ್ತು ಸುಳಿಗಳೂ, ಇವುಗಳಿಂದ ಪ್ರಕಾಶಮಾನಗಳಾಗಿರುವ ಸಿಂಧು ದೇಶ ದಲ್ಲಿ ಹುಟ್ಟಿದಂಥ, ಚನ್ನಾಗಿ ತಿದ್ದಿದ ಕುದುರೆಗಳನ್ನು ತರಲು; ಅವುಗಳನ್ನು ನೋಡಿ, ಋತುಪರ್ಣನು ಸ್ವಲ್ಪವಾಗಿ ಕೋಪಿಸಿ ಕೊಂಡು—ಎಲೈ, ಸಾರಥಿ ಯೇ, ಹೀಗೆ ಬಡವಾಗಿ, ಅಲ್ಪ ಬಲವುಳ್ಳ ಇಂಥಾ ಕುದುರೆಗಳನ್ನು ಯಾಕೆ ತಂದೆ? ನಾವು ಬಹು ಬೇಗ ಹೋಗ ಬೇಕಲ್ಲವೇ? ಇಂಥಾ ಎಳೆಯಲಾರದ ಕುದುರೆಗಳನ್ನು ನಮ್ಮ ತೇರಿಗೆ ಕಟ್ಟಿದರೆ, ಬಹು ದೂರ ಹ್ಯಾಗೆ ಒಂದೇ ದಿನದಲ್ಲಿ ಹೋದೇವು? ಅಂದನು. ಬಾಹುಕನು ಆತನನ್ನು ಕುರಿತು—ನಿನ್ನಲ್ಲಿ ನಾನು ಮಾಡಿದ ಪ್ರತಿಜ್ಞೆಯನ್ನು ಇವುಗಳು ನೆರವೇರಿಸುವವೆಂದು, ನನ್ನ ಬು ದ್ಧಿಗೆ ತಿಳಿದು, ನಾನು ತಂದು ಇದ್ದೇನೆ. ನಿನ್ನ ಮನಸ್ಸಿಗೆ ಇವು ಬೇಡವಾದರೆ, ನಿನಗೆ ಬೇಕಾದ ಕುದುರೆಗಳನ್ನು ತರಿಸಿ, ತೇರಿಗೆ ಕಟ್ಟಿಸು, ಎನಲು; ಆತನು ಒಳ್ಳೇ ಕುಲದಲ್ಲಿ ಹುಟ್ಟಿ, ಅತಿ ವೇಗಶಾಲಿಗಳಾದ ನಾಲ್ಕು ಕುದುರೆಗಳನ್ನು ತೇರಿಗೆ ಕಟ್ಟಿಸಿ, ರಥದ ಮೇಲೆ ಏರಲು; ಅವುಗಳು ಆ ರಥವನ್ನು ಎಳೆಯ ಲಾರದೆ, ಮುಗ್ಗರಿಸಲು; ಅವುಗಳನ್ನು ಬಿಚ್ಚಿಸಿ, ಹಿಂದಕ್ಕೆ ಲಾಯಕ್ಕೆ ಕಳು ಹಿಸಿ, ನಳನು ತಂದಿದ್ದ ಕುದುರೆಗಳನ್ನೇ ತೇರಿಗೆ ಹೂಡಿಸಿದ ಮೇಲೆ, ನಳನು ಕುದುರೆಗಳ ಕಡಿವಾಣಗಳನ್ನು ಬಿಗಿದು, ಹಿಡಿದು, ಕುತ್ತಿಗೆಗಳನ್ನು ತಟ್ಟಿ, ಲಾ ಲಿಸಿ, ತನ್ನ ಸಾರಥಿಯಾದ ವಾರ್ಷ್ಣೇಯನನ್ನು ಆ ತೇರಿನ ಮೇಲೆ ಕೂರಿಸಿ ಕೊಂಡು, ನಡಿಸಲು; ತೇಜೋ ಬಲಗಳಿಂದ ಕೂಡಿದ ಆ ಕುದುರೆಗಳು ಆಕಾಶ ಮಾರ್ಗದಲ್ಲಿಯೇ ಅತಿ ಬೇಗನೆ ನಡಿಯಲು; ಋತುಪರ್ಣನು ಆಶ್ಚರ್ಯ ಭರಿತನಾಗಿ ನೋಡುತ್ತಿದ್ದನು.

ಆಗ ವಾರ್ಷ್ಣೇಯನು ರಥ ವೇಗವನ್ನೂ ಬಾಹುಕನ ಅಶ್ವ ಹೃದಯ ಜ್ಞಾನ ವನ್ನೂ ಆತನು ಕುದುರೆಗಳ ನಡಿಸುವ ತೆರವನ್ನೂ ನೋಡಿ—ಈ ಬಾಹುಕನು ಇಂದ್ರ ಸಾರಥಿಯಾದ ಮಾತಲಿಯೋ? ಅಲ್ಲದಿದ್ದರೆ, ಮನುಷ್ಯನ ಆಕಾರ ವನ್ನು ತಾಳಿ ಬಂದಿರುವ ಕುದುರೆಗಳ ತತ್ವ ಜ್ಞಾನವುಳ್ಳ ಶಾಲಿಹೋತ್ರನೋ? ಅಥವಾ ಸಕಲ ಶತ್ರು ಸಂಹಾರಕನಾದ ಈ ವೇಷದಿಂದ ಬಂದಿರುವ ನಳನೋ? ಅಲ್ಲದಿದ್ದರೆ, ನಳನ ಬಳಿಯಲ್ಲಿ ಅಶ್ವ ಹೃದಯ ಜ್ಞಾನ ವಿದ್ಯೆಯನ್ನು ತಿಳಿದ ವನೋ? ಸುಮಾರು ನೋಡಿದರೆ, ಬಹು ತರ ಪುಣ್ಯ ಶ್ಲೋಕನಾದ ನಳನೇ ಎಂದು ತೋರುತ್ತದೆ. ಇವನಿಗೂ ನಳನಿಗೂ ಒಂದೇ ಪ್ರಾಯವಾಗಿದೆ; ರೂಪ ದಲ್ಲಿ ಮಾತ್ರ ಬೇರೆಯಾಗಿದೆ. ಆದರೂ ನನ್ನ ಮನಸ್ಸಿಗಂತೂ ನಳನೇ

ಎಂದು ತಿಳಿಯುತ್ತದೆ ಎಂದು ಯೋಚಿಸಿದನು. ಈ ಪ್ರಕಾರದಿಂದ ಹೋಗುವಂಥಾ ತೇರು ಹೊಳೆಗಳನ್ನೂ ಬೆಟ್ಟ ಗುಡ್ಡಗಳನ್ನೂ ಕಾಡುಗಳನ್ನೂ ಕೊಳಗಳನ್ನೂ ದಾಟಿ, ಬಹಳ ಬೇಗವಾಗಿ ಘಾಳಿಯ ಚಂದದಿಂದ ಹೋಗುತ್ತಿರಲು; ಆ ಸಮಯದಲ್ಲಿ ರುತುಪರ್ನನು ತನ್ನ ಉತ್ತರೀಯವು ಜಾರಿ, ಭೂಮಿಯಲ್ಲಿ ಬಿದ್ದದ್ದನ್ನು ನೋಡಿ—ಎಲೇ, ಸಾರಥಿಯೇ, ನಾನು ಹೊದ್ದ ಶಲ್ಯವು ಜಾರಿ ಬಿತ್ತು. ವಾರ್ಷ್ಣೇಯನು ಹೋಗಿ, ತೆಗೆದು ಕೊಂಡು ಬರುವ ಪರಿಯಂತರವು ತೇರನ್ನು ಕ್ಷಣ ಮಾತ್ರ ನಿಲ್ಲಿಸೆನಲು; ನಳನು ಆತನನ್ನು ನೋಡಿ—ಎಲೇ, ರಾಜೇಂದ್ರನೇ, ನೀನು ಹೊದ್ದಿದ್ದ ಶಲ್ಯವು ಬಿದ್ದ ಎಡೆಗೂ ಇಲ್ಲಿಗೂ ಐದು ಹರದಾರೀ ದೂರ ಉಂಟು; ಅದನ್ನು ತೆಗೆದು ಕೊಂಡು ಬರುವದಕ್ಕೆ ಕೂಡದು, ಅಂದನು. ಆಗ ರುತುಪರ್ನನು ಸಂತೋಷ ಪಟ್ಟು, ಬಹಳ ಹಣ್ಣುಗಳಿಂದ ಕೂಡಿರುವ ಒಂದು ತಾರೇ ಮರವನ್ನು ನೋಡಿ, ನಳನನ್ನು ಕುರಿತು—ಎಲೈ, ಬಾಹುಕನೇ, ಎಣಿಸುವದರಲ್ಲಿ ನನಗೆ ಬಹಳ ಸಾಮರ್ಥ್ಯ ಉಂಟು. ಲೋಕದಲ್ಲಿ ಅಷ್ಟು ಮಂದಿಯು ಸ್ವಲ್ಪವಾದ ಲೆಖ್ಖವನ್ನು ಅರಿತಿರುವರೇ ಹೊರತಾಗಿ, ಸಂಪೂರ್ಣವಾಗಿ ತಿಳಿದವರಿಲ್ಲ. ಈ ವಿದ್ಯ ನನ್ನಲ್ಲಿ ಉಂಟು. ಅದನ್ನು ನಿನಗೆ ಹೇಳುತ್ತೇನೆ; ಕೇಳು. ಈ ತಾರೇ ಮರದಲ್ಲಿ ಇರುವ ಎಲೆ ಕಾಯಿಗಳ ಲೆಖ ವನ್ನು ಹೇಳುವೆನು. ಈ ಮರದಲ್ಲಿ ಉದುರಿರುವ ಎಲೆ ಕಾಯಿಗಳ ಲೆಖ್ಖವನ್ನು ಹೇಳುವೆನು; ಕೇಳು. ಆದರೆ ನೀನು ಅವಷ್ಟನ್ನು ಲೆಖ್ಖಾ ಮಾಡಿ, ಪರೀಕ್ಷಿಸುವದಕ್ಕೆ ಸಾಮರ್ಥ್ಯ ಇಲ್ಲದೆ ಇರುವದರಿಂದ, ಈ ಎರಡು ಕೊಂಬೆಗಳಲ್ಲಿ ಮಾತ್ರ ಎರಡು ಸಾವಿರದ ತೊಂಬತ್ತೈದು ಕಾಯಿಗಳಿವೆ, ಎನಲು; ಆ ನಳನು ರಥದಿಂದ ಇಳಿದು, ಮರವನ್ನು ಏರಿ, ಕೊಂಬೆಗಳೆರಡರ ಫಲಗಳನ್ನು ಲೆಖ್ಖಾ ಮಾಡಿ, ಆಶ್ಚರ್ಯ ಪಟ್ಟು, ರುತುಪರ್ನನನ್ನು ನೋಡಿ—ನೀನು ಎಷ್ಟು ಹಣ್ಣುಗಳವೆ ಎಂದು ಹೇಳಿದೆಯೋ, ಅಷ್ಟು ಹಣ್ಣುಗಳು ಅವೆ. ಯಾವ ವಿದ್ಯೆಯಿಂದ ನಿನಗೆ ಈ ಮಹಾತ್ಮೆಯು ಉಂಟಾಯಿತೋ, ಆ ವಿದ್ಯೆಯನ್ನು ನನಗೆ ತಿಳಿಸು. ನನ್ನ ಅಶ್ವ ಹೃದಯದ ಜ್ಞಾನ ವಿದ್ಯೆಯನ್ನು ನಿನಗೆ ತಿಳಿಸುತ್ತೇನೆ, ಎನಲು; ರುತುಪರ್ನನು—ಹಾಗೆ ಆಗಲಿ ಎಂದು ಸಮ್ಮತಿಸಿ, ಆತನನ್ನು ನೋಡಿ—ನಿನಗೆ ಅಕ್ಷಹೃದಯ ವಿದ್ಯೆಯನ್ನು ಈಗ ಹೇಳುತ್ತೇನೆ. ನಿನ್ನ ಅಶ್ವ ಹೃದಯ ವಿದ್ಯೆಯು ನಿನ್ನಲ್ಲಿ ಇರಲಿ. ನನಗೆ ಬೇಕಾದಾಗ ತೆಗೆದು ಕೊಳ್ಳುತ್ತೇನೆ ಎಂದು ನುಡಿದು, ನಳನಿಗೆ ಸಾಂಗವಾಗಿ ಅಕ್ಷಹೃದಯ ವಿದ್ಯವನ್ನು ಉಪದೇಶಿಸಿದನು. ಆ ಬಳಿಕ ಅಕ್ಷವಿದ್ಯಾ ಸಮರ್ಥನಾದ ನಳನ ಶರೀರದ್ದೆ

ಶೆಯಿಂದ ಕಲಿಪುರುಷನು ಕಾರ್ಕೋಟಕನು ಕಚ್ಚಿದ ವಿಷದಿಂದಲೂ ದಮಯಂತಿಯು ಶಾಪದಿಂದಲೂ ಸುಡಲ್ಪಟ್ಟವನಾಗಿ, ಭೂಮಿಯಲ್ಲಿ ಬೀಳಲು; ನಳನು ನೋಡಿ, ಆತನಿಂದ ಬಹು ಕಾಲವು ತೊಂದರೆಯನ್ನು ಹೊಂದಿದವನಾದ್ದರಿಂದ, ಅವನನ್ನು ಶಪಿಸುವದಕ್ಕೆ ಎಣಿಸಿದನು. ಅದಕ್ಕೆ ಅವನು ಬೆದರಿ, ಗಡಗಡನೆ ನಡುಗುತ್ತಾ, ಕೈ ಮುಗಿದು—ಎಲೈ, ಮಹಾತ್ಮನೇ, ನನ್ನನ್ನು ಶಪಿಸ ಬೇಡ. ನಿನಗೆ ಬಹು ಕೀರ್ತಿ ಉಂಟಾಗುವಂತೆ ಮಾಡುತ್ತೇನೆ. ಮೊದಲು ನಿನ್ನನ್ನು ಅಗಲಿದ ಸಮಯದಲ್ಲಿ ದಮಯಂತಿಯು ಶಪಿಸಿದ್ದರಿಂದಲೂ ಕಾರ್ಕೋಟಕನ ವಿಷದಿಂದಲೂ ಬಹಳ ಪೀಡಿತನಾಗಿ ಇದ್ದೇನೆ. ನಿನ್ನನ್ನು ಶರಣವನ್ನು ಹೊಂದಿದ್ದೇನೆ. ಲೋಕದಲ್ಲಿ ಯಾವ ಜನರಾಗಲಿ ನಿನ್ನ ಹೆಸರನ್ನು ನೆನೆದರೆ, ಅವರಿಗೆ ನನ್ನ ಬಾಧೆಗಳು ಇಲ್ಲದೆ ಹೋಗಲಿ ಎಂದು ಬೇಡಿ ಕೊಳ್ಳಲು; ನಳನು ದಯಶಾಲಿಯಾದ್ದರಿಂದ ಮನ್ನಿಸಿ ಬಿಟ್ಟನು. ಕಲಿ ಪುರುಷನು ಹತ್ತರದಲ್ಲಿರುವ ತಾರೇ ಮರವನ್ನು ಹತ್ತಿ, ಮರಸಿ ಕೊಂಡನು. ಆದದರಿಂದಲೇ ತಾರೇ ಮರವು ಅಯೋಗ್ಯವೆನಿಸಿ ಕೊಂಡಿತು.

ಆ ಬಳಿಕ ರಥವನ್ನು ಏರಿ, ಕಲಿಯಿಂದ ಬಿಡಲ್ಪಟ್ಟ ನಳನು ಕುಂಡಿನ ನಗರಕ್ಕೆ ಹೋಗಲು; ತನ್ನ ಗಂಡನಾದ ನಳನು ರುತುಪರ್ನರಾಯನೊಡನೆ ಈಗ ಬರುವನು ಎಂದು ನಡುವಣ ತೊಟ್ಟಿಯ ಮಾಡದ ಮೇಲೆ ಹತ್ತಿ, ನಿಂತು, ದಮಯಂತಿಯು ದಾರಿಯನ್ನು ನೋಡುತ್ತಿರುವಲ್ಲಿ, ಬಾಹುಕ ವಾರ್ಷ್ಣೇಯರೊಡನೆ ಕೂಡಿ ಬರುವ ರುತುಪರ್ನನನ್ನು ಕಂಡಳು. ಆಗ ನಳನೂ ವಾರ್ಷ್ಣೇಯನೂ ತೇರನ್ನೂ ಕುದುರೆಗಳ ಕಡಿವಾಣಗಳನ್ನೂ ಹಿಡಿದು, ನಿಲ್ಲಿಸಲು; ರುತುಪರ್ನನು ತೇರಿನಿಂದ ಇಳಿದು, ಭೀಮ ಭೂಪಾಲನಿಗೆ ಎದುರಾಗಿ ಹೋಗಲು; ಆತನು ಈತನನ್ನು ಯಥೋಚಿತವಾಗಿ ಪೂಜಿಸಿ, ಹೆಂಗಸರು ಬಳಾಲೋಚನೆಯಿಂದ ನಡಿಸಿದ ಕೆಲಸವನ್ನು ಸ್ವಲ್ಪವಾದರೂ ತಿಳಿಯದೆ ಇರುವವನಾದ್ದರಿಂದ, ಒಮ್ಮಿಂದೊಮ್ಮೆ ಬಂದ ರುತುಪರ್ನನನ್ನು ನೋಡಿ, ಕುಶಲ ಪ್ರಶ್ನೆಯನ್ನು ಮಾಡಿ—ನೀನು ಬಂದ ಕೆಲಸವೇನು? ಎಂದು ಕೇಳಿದನು. ಆಗ ರುತುಪರ್ನನು ಜಾಣನಾದ್ದರಿಂದ, ಸ್ವಯಂವರಕ್ಕೆ ಒಬ್ಬ ಅರಸುಗಳೂ ಬಾರದೆ ಇರುವದನ್ನೂ ಸ್ವಯಂವರ ಪ್ರಯತ್ನವು ಕೊಂಚವಾದರೂ ಇಲ್ಲದೆ ಇರುವದನ್ನೂ ಕಂಡು, ಮತ್ತೊಂದು ಮಾತನ್ನು ಹೇಳದೆ—ನಿನ್ನನ್ನು ನೋಡಿ, ನಮಸ್ಕಾರಾ ಮಾಡುವದಕ್ಕೆ ಬಂದೆನು, ಅಂದನು. ಭೀಮ ಭೂಪಾಲನು—ಇಷ್ಟು ಮಾತ್ರಕ್ಕೆ ಇಷ್ಟು ದೂರ ಪ್ರಯಾಣಾ ಮಾಡುವದು ಯುಕ್ತವಾಗಿ ತೋರುವದಿಲ್ಲ. ಇವನು

ತನ್ನ ಮನೋಗತವನ್ನು ನಿಜವಾಗಿ ತಿಳಿಸಲಿಲ್ಲ ಎಂದು, ತನ್ನ ಮನದಲ್ಲಿ ತಿಳು
ಕೊಂಡು, ಆತನಿಗೆ ಒಂದು ಬಿಡಾರವನ್ನು ಬಿಡಿಸಿ ಕೊಟ್ಟದರಿಂದ, ಅಲ್ಲಿ ವಾರ್ಷ್ಣೇ
ಯ ಸಹಿತವಾಗಿ ಹೋಗಿ, ಆ ಮನೆಯಲ್ಲಿ ಇಳಿದು ಕೊಂಡನು. ನಳನು ರಥ
ವನ್ನು ರಥಶಾಲೆಗೆ ತೆಕ್ಕೊಂಡು ಹೋಗಿ, ಇರಿಸಿ, ತಾನೂ ಅದರ ಸಮೀಪದ
ಲ್ಲಿಯೇ ಇದ್ದು ಕೊಂಡಿದ್ದನು.

ಆಗ ದಮಯಂತಿಯು ತನ್ನ ಬಳಿಯಲ್ಲಿ ಇರುವ ಒಬ್ಬ ದೂತಿಯನ್ನು ಕರೆ
ದು—ಎಲೈ, ಕೇಶಿನಿಯೇ, ರುತುಪರ್ನ್ನನ ತೇರಿನ ಬಳಿಯಲ್ಲಿ ಕುಗ್ಗಿದ ತೋಳು
ಳ್ಳವನಾಗಿ, ವಿಕೃತಾಕಾರನಾಗಿರುವ ಈತನಾರೋ, ತಿಳಿಯಲಿಲ್ಲ. ಈತನನ್ನು
ನೋಡಿದ ಮಾತ್ರದಿಂದಲೇ ನನ್ನ ಮನಸ್ಸಿನಲ್ಲಿ ಸಂತೋಷ ಹುಟ್ಟಿದ್ದರಿಂದ, ಇವನು
ನಳನೋ? ಎಂಬ ಸಂಶಯ ಉಂಟಾಗಿದೆ. ನೀನು ಇವನ ಸನ್ನಿಧಾನಕ್ಕೆ
ಹೋಗಿ, ಸಕ್ಕರೆಯ ಹಾಗೆ ಶೀಯಾಗಿರುವ ಮಾತುಗಳಿಂದ ಕುಶಲ ಪ್ರಶ್ನೆಯನ್ನು
ಮಾಡಿ, ಆತನು ಕೊಡುವ ಬದಲು ಮಾತನ್ನೂ, ಮೊದಲು ಪರ್ನಾದನು ಹೋಗಿ
ನುಡಿದ ವಾಕ್ಯಗಳಿಗೆ ಆತನು ಪ್ರತ್ಯುತ್ತರ ಕೊಟ್ಟದ್ದನ್ನೂ ವಿವರವಾಗಿ ತಿಳು
ಕೊಂಡು ಬಾ ಎಂದು ಕಳುಹಿಸಿ, ತಾನು ಮಾಡುವನ್ನೇರಿ, ನೋಡುತ್ತಿದ್ದಳು.
ಅವಳು ಬಾಹುಕನ ಹತ್ರಕ್ಕೆ ಬಂದು, ಆತನನ್ನು ಕುರಿತು—ಎಲೈ, ಮಹಾ
ತ್ಮನೇ, ಕ್ಷೇಮದಲ್ಲಿ ಇದ್ದೀಯಾ? ಅಯೋಧ್ಯಾ ಪಟ್ಟಣದ್ದೆಶೆಯಿಂದ ಹೊರಟು
ಎಷ್ಟು ದಿವಸಗಳಾಯಿತು? ಇಲ್ಲಿಗೆ ಯಾವ ಪ್ರಯೋಜನಕ್ಕೋಸ್ಕರ ಬಂದಿ?
ಇದನ್ನು ತಿಳು ಕೊಂಡು ಬಾ ಎಂದು, ನಮ್ಮ ಅರಸಿನ ಮಗಳು ಕಳುಹಿಸಿ
ದ್ದಾಳೆ. ನಿನ್ನ ಸ್ವರೂಪವನ್ನು ನಿಜವಾಗಿ ವಿವರಿಸು, ಎನ್ನಲು; ಬಾಹುಕನು—
ದಮಯಂತಿಯು ಎರಡನೇ ಸ್ವಯಂವರವನ್ನು ನಾಳೇ ಬೆಳಿಗ್ಯೆ ಮಾಡುತ್ತಾಳೆಂ
ದು, ಜನರು ಹೇಳಿದ ಸುದ್ದಿಯನ್ನು ರತುಪರ್ನ್ನನು ಕೇಳಿ, ವಾಯು ವೇಗಗಳಿಂದ
ಕೂಡಿರುವ ಕುದುರೆಗಳನ್ನು ಕಟ್ಟಿದ ತೇರನ್ನು ಏರಿ, ಈ ದಿವಸ ಬೆಳಿಗ್ಯೆ ಹೊ
ರಟು, ಈ ಸಾಯಂಕಾಲಕ್ಕೆ ಬಂದನು. ನಾನು ಆತನ ಸಾರಥಿಯು, ಅಂದನು.
ಆಕೆಯು ಆ ಬಾಹುಕನನ್ನು ಕುರಿತು—ನಿನ್ನ ಸಂಗಡ ಇನ್ನೊಬ್ಬ ಬಂದನಲ್ಲ;
ಅವನು ಯಾರು? ನೀನು ಯಾವ ಬಗೆಯವನು? ನಿನಗೆ ಸಾರಥ್ಯವು ಹ್ಯಾಗೆ
ಬಂತು? ಎನಲು;—ಆತನು ಪುಣ್ಯ ಶ್ಲೋಕನಾದ ನಳನ ಸಾರಥಿಯು; ಆತನ
ಹೆಸರು ವಾರ್ಷ್ಣೇಯನು. ನಳನು ರಾಜ್ಯವನ್ನು ಬಿಟ್ಟು, ಹೋದ ಬಳಿಕ, ರುತು
ಪರ್ನರಾಯನನ್ನು ಶೇರಿ ಕೊಂಡನು. ನಾನು ಅಡಿಗೆ ಮಾಡುವದರಲ್ಲಿಯೂ
ಸಾರಥ್ಯ ಮಾಡುವದರಲ್ಲಿಯೂ ಘಟ್ಟಿಗನಾದ್ದರಿಂದ, ಈ ರುತುಪರ್ನ್ನನಿಗೆ ಸಾರಥ್ಯ

ವನ್ನೂ ಅಡಿಗೆಯನ್ನೂ ಮಾಡಿ ಕೊಂಡಿದ್ದೇನೆ, ಅಂದನು. ಆ ಕೇಶಿನಿಯು—ನಳನ ಸಾರಥಿಯಾದ ವಾರ್ಷ್ಣೇಯನು, ಆತನು ಇಂಥಾ ಬಳಿಯಲ್ಲಿ ಇದ್ದಾನೆಂದು ನಿನಗೇನಾದರೂ ಒಂದು ದಿವಸ ತಿಳಿಸಿದ್ದಾನೋ? ಎಂದು ಕೇಳಲು;—ವಾರ್ಷ್ಣೇಯನು ನಳನ ಮಗನನ್ನೂ ಮಗಳನ್ನೂ ಈ ವಿದರ್ಭ ಪಟ್ಟಣದಲ್ಲಿ ಇರಿಸಿ, ತನ್ನ ಇಚ್ಛೆ ಬಂದ ಹಾಗೆ ಈ ರುತುಪರ್ಣನನ್ನು ಸೇರಿಕೊಂಡದ್ದರಿಂದ ಅವನಿಗೆ ನಳನ ಸುದ್ದಿ ತಿಳಿಯದು; ಹೇಳುವದೇನು? ಮೊದಲಿದ್ದ ರೂಪವನ್ನು ಬಿಟ್ಟು, ಬೇರೆ ರೂಪಿನಿಂದ ಗುಟ್ಟಾಗಿ ತಿರುಗುವಂಥ ಆ ನಳನನ್ನು ಯಾರಾದರೂ ಅರಿಯುವದಕ್ಕೆ ಸಮರ್ಥರೇ? ಆತನ ಆತ್ಮನೂ, ಆತಗೆ ಹೊರಗಣ ಪ್ರಾಣವಾಗಿರುವ ದಮಯಂತಿಯೂ, ಇವರಿಬ್ಬರೇ ಹೊರತಾಗಿ, ಮತ್ತೊಬ್ಬರೂ ಅರಿಯರು. ಆತನ ಗುರುತುಗಳನ್ನು ಅರಿಯುವದಕ್ಕೆ ಯಾರಿಗೂ ಶಕ್ಯವಲ್ಲ, ಅಂದನು. ಕೇಶಿನಿಯು—ಮೊದಲು ಅಯೋಧ್ಯಾ ಪಟ್ಟಣಕ್ಕೆ ಪರ್ಣಾದನು ಬಂದು ಹೇಳಿದ ಮಾತಿಗೆ ನೀನು ಬದಲು ಮಾತು ಆಡಿದೆ ಅಷ್ಟೆ! ಅದನ್ನು ತಿರಿಗಿ ಹೇಳಬೇಕೆಂದು, ದಮಯಂತಿ ಬಯಸುತ್ತಾಳೆ. ಅದನ್ನು ಮತ್ತೊಮ್ಮೆ ಹೇಳು, ಎನಲು; ನಳನು ಮೊದಲು ಹೇಳಿದ ಹಾಗೆಯೇ ಹೇಳಿ, ಕಣ್ಣೀರನ್ನು ಸುರಿಸಿದನು.

ಅವಷ್ಟನ್ನು ಕೇಶಿನಿ ತಿರಿಗಿ ಹೋಗಿ, ದಮಯಂತಿಗೆ ಹೇಳಲು; ದಮಯಂತಿಯು—ತಿರಿಗಿ ಆತನ ಬಳಗೆ ಹೋಗಿ, ಸುಮ್ಮನಿದ್ದು ಕೊಂಡು, ಆತನು ಮಾಡುವ ಕೆಲಸಗಳನ್ನು ನೋಡುತ್ತಾ, ಆತನು ಎಷ್ಟು ಬೇಡಿದರೂ ಬೆಂಕಿಯನ್ನೂ ನೀರನ್ನೂ ತಂದು ಕೊಡ ಬೇಡ. ಅದನ್ನೆಲ್ಲಾ ತಿಳಿದು ಕೊಂಡು ಬಂದು, ಹೇಳು, ಎನಲು; ಅವಳು ತಿರಿಗಿ ಅವನ ಬಳಿಗೆ ಹೋಗಿ, ಅವನು ಮಾಡುವದನ್ನೆಲ್ಲಾ ತಿಳಿದು ಕೊಂಡು—ಎಲೈ, ಅರಸಿನ ಮಗಳೇ, ಇಂಥಾ ಚರಿತ್ರೆಯುಳ್ಳ ಮನುಷ್ಯನನ್ನು ಎಲ್ಲಿಯೂ ಕೇಳಿ ಇಲ್ಲ. ಆತನು ಕಿಟಕಿಯ ಕನ್ನಗಳನ್ನು ಹೊಕ್ಕು, ತಡೆ ಇಲ್ಲದೆ ಆಚೆಗೆ ಹೋಗುತ್ತಾನೆ. ಅಡಿಗೆ ಮಾಡುವದಕ್ಕೆ ನಮ್ಮ ಅರಸು ರುತುಪರ್ಣನಿಗೆ ಮಾಂಸವನ್ನು ಕಳುಹಿಸಲು; ಅದನ್ನು ತೊಳೆಯುವದಕ್ಕೆ ಬರೀ ಚಾರಿಗೆಯನ್ನು ತಂದು ಕೊಟ್ಟರೆ, ಅದು ನೀರಿನಿಂದ ತುಂಬಿ ಇರುತ್ತದೆ. ಆ ನೀರುಗಳಿಂದ ಮಾಂಸವನ್ನು ತೊಳೆದು, ಅಡುವದಕ್ಕೆ ಕಟಗೆಯನ್ನು ಕೈಯಿಂದ ಹಿಡಿದ ಮಾತ್ರದಿಂದಲೇ ಬೆಂಕಿಯು ಭಗ್ಗೆಂದು ಉರಿಯುತ್ತದೆ. ಆತನು ಬೆಂಕಿಯನ್ನು ಕೈಯಲ್ಲಿ ಹಿಡಿದರೂ ಸುಡುವದಿಲ್ಲ. ಆತನು ಎಷ್ಟು ನೀರು ಬೇಕೆಂದರೂ ಅಷ್ಟು ಬರುತ್ತದೆ. ಇದಲ್ಲದೆ ಇನ್ನೊಂದು ಆಶ್ಚ

ರ್ಯವನ್ನು ನೋಡಿದೆನು. ಆತನು ಬಾಡಿದ ಹೂವುಗಳನ್ನು ಕೈಯಿಂದ ಹಿಡಿದರೆ, ಅವಷ್ಟು ಬಾಡದೆ, ಪರಿಮಳದಿಂದ ಘುಮುಘುಮಿಸುತ್ತವೆ, ಅಂದಳು.

ದಮಯಂತಿಯು—ಎಷ್ಟು ವಿಧದಲ್ಲಿ ಪರೀಕ್ಷಿಸಿ ನೋಡಿದರೂ, ನಳನೇ ಹೌದೆಂದು ನಿಶ್ಚಯವಾಗುತ್ತೆ. ಇಂಥಾ ಕೀಳು ರೂಪು ಉಂಟಾಗುವದಕ್ಕೆ ಏನು ನಿಮಿತ್ತವೋ? ಎಂದು ಸಂಶಯ ಪಡುತ್ತಾ, ತಿರಿಗಿ ಕೇಶಿನಿಯನ್ನು ಕರೆದು,—ನೀನು ಬಾಹುಕ ಜೇಸಿದ ಬಾಡನ್ನು ಬೇಗ ಆತನು ತಿಳಿಯದ ಹಾಗೆ ತೆಗೆದು ಕೊಂಡು ಬಾ ಎಂದು ಕಳುಹಿಸಲು; ಅವಳು ಹೋಗಿ, ಅತ್ಯುಷ್ಣವಾದ ಮಾಂಸವನ್ನು ತೆಗೆದು ಕೊಂಡು ಬಂದು, ದಮಯಂತಿಗೆ ಕೊಡಲು; ಆಕೆಯು ಆ ಬಾಡನ್ನು ತಿಂದು, ಮೊದಲು ನಳನು ಜೇಸಿದ ಬಾಡನ್ನು ತಿಂದು, ರುಚಿಯನ್ನು ತಿಳಿದಿದ್ದವಳಾದ್ದರಿಂದ, ಈ ಬಾಹುಕನೇ ನಳನೆಂದು ನಿಶ್ಚೈಸಿ, ತನ್ನ ಮಗನನ್ನೂ ಮಗಳನ್ನೂ ಕೇಶಿನಿಯ ಸಂಗಡ ಕೂಡಿಸಿ, ಬಾಹುಕನ ಬಳಿಗೆ ಕಳುಹಿಸಲು; ಆತನು, ತನ್ನ ಕೂಸುಗಳೆಂದು ತಿಳಿದು, ಬೇಗ ಬಂದು, ತಬ್ಬಿ ಕೊಂಡು, ಮುತ್ತು ಕೊಟ್ಟು, ಮುದ್ದಾಡಿ, ತನ್ನ ತೊಡೆಯ ಮೇಲೆ ಕೂರಿಸಿ ಕೊಂಡು, ದೇವಕುಮಾರಕರೋಪಾದಿಯಲ್ಲಿ ಇರುವ ತನ್ನ ಮಕ್ಕಳನ್ನು ನೋಡಿ, ಧೀರೋದಾತ್ತನಾಯಕನಾದರೂ ದುಃಖವನ್ನು ಸಹಿಸಲಾರದೆ, ನಾಚಿಕೆಯನ್ನು ತೊರೆದು, ಹೆಚ್ಚಾಗಿ ಪ್ರಳಾಪಿಸಿ, ಆ ಮಕ್ಕಳನ್ನು ಕೇಶಿನಿಯ ವಶಕ್ಕೆ ಕೊಟ್ಟು, ಅವಳನ್ನು ನೋಡಿ—ನನಗೂ ಇಂಥ ಇಬ್ಬರು ಮಕ್ಕಳುಂಟು. ಈ ಮಕ್ಕಳನ್ನು ನೋಡಲು, ಅವರನ್ನು ನೆನಸಿ ಕೊಂಡು, ದುಃಖದಿಂದ ಕ್ಲೇಶ ಪಟ್ಟೆ. ದೇಶಾಂತರದಿಂದ ಬಂದ ನನ್ನ ಬಳಿಗೆ ಬಾರಿ ಬಾರಿಗೂ ನೀನು ಹೀಗೆ ಬರುತ್ತಾ ಇದ್ದರೆ, ನೋಡಿದವರಿಗೆ ಸಂದೇಹ ಉಂಟಾಗುವದು. ಇನ್ನು ನೀನು ಇಲ್ಲಿ ಇರದೆ, ಬೇಗ ಮನೆಗೆ ಹೋಗು, ಎನಲು; ಅವಳು ಆ ಮಾತನ್ನೆಲ್ಲಾ ಹೋಗಿ, ದಮಯಂತಿಗೆ ತಿಳಿಸಿದಳು. ಆಕೆಯು ಅವಳನ್ನು ನೋಡಿ—ನೀನು ನನ್ನ ತಾಯಿಯ ಬಳಿಗೆ ಹೋಗಿ,—ಈ ಬಾಹುಕನನ್ನು ಬಹು ಪ್ರಕಾರವಾಗಿ ಪರೀಕ್ಷಿಸಿದೆನು. ರೂಪದಲ್ಲಿ ವಿಕಾರವಾಗಿ ತೋರುವದು ಒಂದೇ ಹೊರತಾಗಿ, ಮಿಕ್ಕ ಎಲ್ಲಾ ನಡತೆಯಲ್ಲಿಯೂ ಈತನೇ ನಳನೆಂದು, ನಿಶ್ಚಯವಾಗಿ ತಿಳಿಯ ಬಂತು. ನಾನು ಆತನ ಕೂಡೆ ಮಾತನಾಡಿದರೆ, ಎಲ್ಲಾ ತಿಳಿಯುತ್ತದೆ. ನೀನು ಅರಸಿಗೆ ಅರಿಕೆ ಮಾಡಿಯಾದರೂ, ಮಾಡದೆಯಾದರೂ, ಆತನನ್ನು ಇಲ್ಲಿಗೆ ಕರ ತರಿಸಿದರೆ, ನಾನು ಮಾತನಾಡೇನು. ಅಲ್ಲದಿದ್ದರೆ, ಆತನ ಬಳಿಗೆ ನನ್ನನ್ನು ಕಳುಹಿಸಿದರೆ, ಹೋಗಿ ಬಂದೇನು ಎಂದು, ನಾನು ಹೇಳಿದ್ದಾಗಿ ಅರಿಕೆ ಮಾಡಿ ಬಾ, ಎಂದು ಕಳುಹಿ

ಸಲು; ಅವಳು ಹಾಗೆ ಹೋಗಿ, ರಾಣಿಗೆ ಅರಿಕೆ ಮಾಡಲು; ಆ ದೇವಿಯು ಭೀಮ ಭೂಪಾಲನಿಗೆ ಬಿನ್ನವಿಸಿದ್ದಕ್ಕೆ ಆತನು—ದಮಯಂತಿಗೆ ಹ್ಯಾಗೆ ಉಚಿತವಾಗಿ ತೋರುತ್ತದೋ, ಹಾಗೆ ಮಾಡಲಿ ಎಂದು, ತನ್ನ ಹೆಂಡತಿಗೆ ಹೇಳಿ ಕಳುಹಿಸಲು; ಆಗ ತಾಯಿ ತಂದೆಗಳ ಅಪ್ಪಣೆಯಿಂದ ದಮಯಂತಿಯು ದೂತಿಯನ್ನು ನೋಡಿ—ಎಲೇ, ಕೇಶಿನೀ, ನೀನು, ಬಾರಿ ಬಾರಿಗೂ ತಿರುಗುತ್ತಲಿದೇನೆ ಎಂದು ಬೇಸರದೆ, ನನ್ನ ತಾಯಿಯೋಪಾದಿಯಲ್ಲಿ ಪ್ರಿಯವನ್ನು ಮಾಡು. ನೀನು ಪುನಹ ಬಾಹುಕನ ಸಮೀಪಕ್ಕೆ ಹೋಗಿ,—ನಿನ್ನನ್ನು ಭೀಮ ನರೇಂದ್ರನು ಕರ ಕೊಂಡು ಬರ ಹೇಳಿದನು ಎಂದು ಹೇಳಿ, ಆತನನ್ನು ಅಂತಃಪುರಕ್ಕೆ ಕರ ಕೊಂಡು ಬಾ ಎಂದು ಕಳುಹಿಸಿದಳು.

ಅವಳು ಹೋಗಿ, ಹಾಗೆ ಕರೆಯಲು; ನಳನು ಮುಹೂರ್ತ ಮಾತ್ರವು ತನ್ನ ಮನಸ್ಸಿನಲ್ಲಿ ವಿಚಾರಿಸಿ, ಇದನ್ನು ನೋಡ ಬೇಕು ಎಂದು ಎಣಿಸಿ, ಆ ದೂತಿಯ ಸಂಗಡಲೇ ದಮಯಂತಿಯ ಮನೆಗೆ ಬರಲು; ಆಗ ವಿಕೃತಾಕಾರನಾಗಿರುವ ನಳನನ್ನು ನೋಡಿ, ಕಾವೀ ಬಟ್ಟೆಯನ್ನೂ ಜಡೆಗಳನ್ನೂ ಧರಿಸಿ, ಮಲಿನ ಗಾತ್ರಳಾಗಿರುವ ದಮಯಂತಿಯು—ಎಲೈ, ಬಾಹುಕನೇ, ಲೋಕದಲ್ಲಿ ಧರ್ಮಜ್ಞನಾದ ಪುರುಷನು ಮಹಾರಣ್ಯದ ಮಧ್ಯದಲ್ಲಿ ಒಂದಾಗಿ ನಿದ್ದೆ ಹೋಗುತ್ತಲಿರುವ ತನ್ನ ಪ್ರಿಯ ಭಾರ್ಯೆಯನ್ನು ಬಿಟ್ಟು ಹೋದದ್ದನ್ನು ನೀನು ಕಂಡು, ಕೇಳಿ ಉಂಟೇ? ನಿರಪರಾಧಿಯಾಗಿ, ಪ್ರಿಯಾಂಗನೆಯಾಗಿ, ಹಸಿವು ಬಾಯಾರಿಕೆಗಳಿಂದ ಕಂಗೆಟ್ಟು ಇರುವ ಧರ್ಮ ಪತ್ನಿಯನ್ನು ಅರಣ್ಯದಲ್ಲಿ ಬಿಟ್ಟು, ಹೋಗುವದು ಪುಣ್ಯ ಶ್ಲೋಕನಾದ ನಳ ಮಹಾರಾಯನಿಗೆ ಹೊರತಾಗಿ, ಮತ್ತೊಬ್ಬನಿಗೆ ಸಲ್ಲುವದೇ? ಮೊದಲು ತನ್ನ ಸ್ವಯಂವರಕ್ಕೆ ಇಂದ್ರಾದಿ ದಿಕ್ಪಾಲಕರು ಬಂದಲ್ಲಿ, ಅವರಷ್ಟು ಮಂದಿಯನ್ನು ಬಿಟ್ಟು, ಮೊದಲೇ ಹಂಸಗಳದೆಶೆಯಿಂದ ತನ್ನ ಗುಣಗಳ ಹೆಚ್ಚಿಗೆಯನ್ನು ಕೇಳಿದ್ದರಿಂದ, ಅಗ್ನಿ ಸಾಕ್ಷಿಯಾಗಿ ವರಿಸಿರುವದನ್ನು ಎಣಿಸದೆ, ಮಕ್ಕಳುಳ್ಳವಳಾಗಿಯೂ, ಪ್ರಿಯ ಹೆಂಡತಿಯಾಗಿಯೂ ಇರುವವಳನ್ನು, ಕಾಡಿಗೆ ತನ್ನ ಸಂಗಡಲೇ ಬಂದಳಲ್ಲ! ಎಂದು ಕೊಂಚವಾದರೂ ಕರುಣವಿಡದೆ, ಕಷ್ಟಕ್ಕೆ ಗುರಿಯಾಗಿ ಮಲಗಿದ್ದವಳನ್ನು ಮೋಸದಿಂದ ಮರಸಿ ಬಿಟ್ಟು ಹೋಗುವದು ತನ್ನಂಥಾವನಿಗೆ ತಕ್ಕದ್ದೇ? ಎಂದು, ಮರ್ಮೋದ್ಘಾಟನವಾಗಿ ಮಾತಾಡುವ ಮಡದಿಯ ಮಾತುಗಳನ್ನು ಕೇಳಿ, ಕಣ್ಣೀರುಗಳು ಸಂತತ ಧಾರೆಯಾಗಿ ಸುರಿಯಲು; ಸುಂದರಿಯಾದ ಆಕೆಯನ್ನು ಕುರಿತು—ಎಲೇ, ಕಲ್ಯಾಣಿಯೇ, ಮೊದಲು ಕಾಡಿನಲ್ಲಿ ಕಲಿಪುರುಷನಿಂದ ಕೂಡಿ,

ನಿನ್ನೊಬ್ಬಳನ್ನೇ ಬಿಟ್ಟು ಹೋದ ಪಾಪಿಷ್ಠನಾದ ನಳನು ನಾನೇ ಎಂದು ತಿಳು
ಕೋ. ಸಕಲ ರಾಜ್ಯವನ್ನು ಕಳೆದು ಕೊಂಡು, ನಿನ್ನನ್ನು ಕಾಡಿನಲ್ಲಿ ಬಿಟ್ಟು
ಹೋಗುವದು ಕಲಿಪುರುಷನ ಪ್ರೇರಣೆಯಿಂದ ಬಂತು ಎಂದು, ತಿಳುಕೋ.
ನಾನು ವಸ್ತ್ರಹೀನನಾಗಿ ಒಬ್ಬನೇ ಕಾಡಿಗೆ ಹೋದೆನೆಂದು, ಕುಲವಂತೆಯಾದ
ನೀನು ಕೋಪಿಸಿ ಕೊಂಡು, ಕಲಿ ಪುರುಷನನ್ನು ಶಪಿಸಿದವಳಾದ್ದರಿಂದ,
ಆತನು ನಿನ್ನ ಶಾಪಾಗ್ನಿಯಿಂದ ಸುಡಲ್ಪಟ್ಟವನಾಗಿಯೂ, ನನ್ನ ತಪ್ರೋತಾಪದಿಂದ
ತಪ್ತನಾಗಿಯೂ, ಆಪತ್ತುಗಳು ಬಿಟ್ಟು ಹೋಗುವ ಕಾಲವಾದ್ದರಿಂದ ನನ್ನೊಡ
ಲಲ್ಲಿ ಇರದೆ ಹೋದನು. ನಾನು ನಿನ್ನ ನಿಮಿತ್ತದಿಂದಲೇ ಇಲ್ಲಿಗೆ ಬಂದೆನೇ
ಹೊರತಾಗಿ, ನನಗೆ ಮತ್ತೊಂದು ಕಾರ್ಯವೇನದೆ? ಲೋಕದಲ್ಲಿ ತನ್ನಲ್ಲಿ
ಎಷ್ಟೋ ಅನುರಕ್ತನಾಗಿ, ಕಣ್ಣಿನ ಸಂಜ್ಞೆಗೆ ಒಳಗಾಗಿರುವ ಪ್ರಿಯ ಪತಿಯನ್ನು
ಬಿಟ್ಟು, ನಿನ್ನಸ್ಪಂದ ಪರ ಪುರುಷನನ್ನು ಪರಿಗ್ರಹಿಸುವ ಪತ್ನಿ ಉಂಟೇ?—ಪುನಹ
ಸ್ವಯಂವರದಲ್ಲಿ ಚೆಲುವುಳ್ಳ ಎರಡನೇ ಗಂಡನನ್ನು ದಮಯಂತಿಯು ತನ್ನಿಚ್ಛೆ
ಯಿಂದ ವರಿಸುತ್ತಾಳೆ; ಎಲ್ಲಾ ಅರಸುಗಳು ಬನ್ನಿ ಎಂದು, ನಿಮ್ಮ ಅಪ್ಪ ಕಳು
ಹಿಸಿದ ಬೇಹಿನವರು ಎಲ್ಲಾ ದೇಶದಲ್ಲಿಯೂ ತಿರುಗುತ್ತಲಿದ್ದಾರೆ. ಇದಷ್ಟನ್ನು
ಕೇಳಿ, ಬೇಗ ಋತುಪರ್ಣ ರಾಯನು ಬಂದನು ಎಂದು, ಹೇಳಲು;

ದಮಯಂತಿಯು ನಳನ ಕರ್ಣಕಠೋರವಾದ ಕ್ರೂರೋಕ್ತಿಗಳನ್ನು
ಕೇಳಿ, ಬೆದರಿ, ಬೆಂಡಾಗಿ, ಬಸವಳಿದು, ಗಡಗಡನೆ ನಡುಗುತ್ತಾ, ಕೈ ಮುಗಿದು
ಕೊಂಡು—ಎಲೈ, ಮಹಾತ್ಮನೇ, ಇಂದ್ರಾದಿ ದೇವತೆಗಳನ್ನು ಬಿಟ್ಟು, ನಿನ್ನನ್ನೇ
ಬಯಸಿರುವಂಥ ನನ್ನಲ್ಲಿ ಇಂಥ ಪಾಪ ಶಂಕೆಯನ್ನು ಮಾಡುವದು ಉಚಿ
ತವೇ? ನೀನು ಎಲ್ಲಿ ಇದ್ದೀಯೋ, ತಿಳಿಯ ಬೇಕೆಂದು, ನಾನು ಹೇಳಿದಂಥಾ
ಮಾತುಗಳನ್ನು ಬ್ರಾಹ್ಮಣರು ಅಲ್ಲಲ್ಲಿ ನುಡಿಯುತ್ತಾ, ಹತ್ತು ದಿಕ್ಕುಗಳ
ಲ್ಲಿಯೂ ತಿರುಗಿ, ತಡಕುತ್ತಿರಲು; ಪರ್ಣಾದನೆಂಬ ಬ್ರಾಹ್ಮಣನು ಋತುಪ
ರ್ಣನ ಬಳಿಯಲ್ಲಿ ಆ ಮಾತುಗಳನ್ನು ಹೇಳಿದ್ದಕ್ಕೆ ನೀನು ಪ್ರತ್ಯುತ್ತರವನ್ನು
ಕೊಟ್ಟೇ ಎಂದು, ನನ್ನ ಕೂಡೆ ಹೇಳಿದವನಾದ್ದರಿಂದ, ನೀನೇ ನಳನೆಂದು ಎಣಿಸಿ,
ನಿನ್ನನ್ನು ಇಲ್ಲಿಗೆ ಕರಿಸುವದಕ್ಕೋಸ್ಕರ, ನೂರು ಯೋಜನ ದಾರಿಯನ್ನು
ಒಂದು ದಿವಸದಲ್ಲಿ ತಲಪುವಂತೆ ತೇರು ನಡಿಸುವ ಸಾಮರ್ಥ್ಯವು ನಿನ್ನಲ್ಲಿ
ಇರುವದೆಂದು ನಾನು ತಿಳಿದವಳಾದ್ದರಿಂದ, ಹಾಗೆ ಹೇಳಿ ಕಳುಹಿಸಿದೆನೇ
ಹೊರತಾಗಿ, ಮತ್ತೊಂದಲ್ಲ. ನಿನ್ನ ಮನಸ್ಸಿನಲ್ಲಿ ಏನಾದರೂ ಅಂಥಾ ಸಂಶ
ಯವಿದ್ದರೆ, ನಿನ್ನಡಿಗಳ ಮೇಲೆ ಆಣೆಯನ್ನು ಇಕ್ಕುತ್ತೇನೆ. ನಿನ್ನ ಮನಸ್ಸಿಗೆ

ಅಸಮ್ಮತವಾದ ಕಾರ್ಯವನ್ನು ನಾನು ಮನಸ್ಸಿನಲ್ಲಿ ಸ್ಮರಿಸಿದ್ದರೆ, ಸಕಲ ಭೂತ ಸಾಕ್ಷಿಯಾದ ವಾಯುವೂ, ಸಕಲ ಜನರ ಕರ್ಮ ಸಾಕ್ಷಿಗಳಾದ ಸೂರ್ಯ ಚಂದ್ರರೂ, ಎಲ್ಲಾ ಜನಗಳ ಪಾಪ ಪುಣ್ಯಗಳನ್ನು ತಿಳಿದು ಶಿಕ್ಷೆ ರಕ್ಷಣೆಯನ್ನು ಮಾಡುವ ಯಮನೂ, ಸಕಲ ಜನರನ್ನು ಹೊತ್ತು ಸಲಹುವ ಭೂಮಿಯೂ, ಎಲ್ಲರಿಗೆ ಪರ ಮೋಪಕಾರಿಗಳಾದ ನೀರು ಬೆಂಕಿಗಳೂ, ಇವರು ಮೊದಲಾದ ದೇವತೆಗಳೂ ಸತ್ಯವನ್ನೇ ನುಡಿಯಲಿ. ಹಾಗೆ ನುಡಿಯದೆ ಇದ್ದರೆ, ಈ ಶರೀರವನ್ನು ಬಿಡುತ್ತಲಿದ್ದೇನೆ ಎಂದು ಪ್ರತಿಜ್ಞೆಯನ್ನು ಮಾಡಲು; ಆಗ ದೇವತೆಗಳೆಲ್ಲಾ ಅಂತರಿಕ್ಷದಲ್ಲಿ ಮರೆಯಾಗಿ ಇದ್ದು ಕೊಂಡು, ನಳನನ್ನು ಕುರಿತು—ಎಲೈ, ರಾಜೇಂದ್ರನೇ, ದಮಯಂತಿಯು ತನ್ನ ಪಾತಿವ್ರತ್ಯವೆಂಬ ನಿಕ್ಷೇಪವನ್ನು ಒಂದು ವರುಷದಿಂದ ಕಾಪಾಡಿದಳು. ಇದಕ್ಕೆ ನಾವೆಲ್ಲರು ಸಾಕ್ಷಿಗಳಾಗಿದ್ದೇವೆ. ಒಂದು ದಿವಸದಲ್ಲಿ ನೂರು ಯೋಜನ ದಾರಿಯನ್ನು ತಲಪುವ ಶಕ್ತಿ ನಿನಗಿರುವದಲ್ಲದೆ ಮತ್ತೊಬ್ಬರಿಗೆ ಇಲ್ಲವೆಂದು ಎಣಿಸಿ, ನಿನ್ನನ್ನು ಕರಿಸುವದಕ್ಕೋಸ್ಕರ ಈ ಉಪಾಯವನ್ನು ಮಾಡಿದಳು. ನೀನು ಶಂಕಿಸ ಬೇಡ. ಈಕೆಯನ್ನು ಕೈ ಕೊಂಡು, ಸುಖವಾಗಿರು ಎಂದು ಹೇಳಿದರು. ಆಗ ಆಕಾಶದಿಂದ ಹೂವಿನ ಮಳೆಯು ಸುರಿಯಿತು. ದೇವ ದುಂದುಭಿಗಳು ಮೊಳಗಿದವು. ಪರಿಮಳದಿಂದ ಕೂಡಿದ ಮಂದ ಮಾರುತವು ಬೀಸಿತು.

ಇದಷ್ಟನ್ನು ನೋಡಿ, ಆಶ್ಚರ್ಯ ಭರಿತನಾಗಿ, ನಳನು ದಮಯಂತಿಯಲ್ಲಿ ಸಂಶಯವನ್ನು ಬಿಟ್ಟು, ಕಾರ್ಕೋಟಕನನ್ನು ನೆನೆದು, ಅವನು ಕೊಟ್ಟ ಎರಡು ಬಟ್ಟೆಯನ್ನು ಉಟ್ಟು, ಹೊದ್ದು ಕೊಂಡು, ಆ ಕ್ಷಣವೇ ತನ್ನ ಮೊದಲಿನ ಚೆಲುವಾದ ಮೈಯನ್ನು ಧರಿಸಿ ಕೊಂಡು, ಹೊಳೆಯುತ್ತಿದ್ದನು. ಅದನ್ನು ದಮಯಂತಿಯು ನೋಡಿ, ತನ್ನ ಗಂಡನನ್ನು ತಬ್ಬಿ ಕೊಂಡು, ಬಿಮ್ಮನೆ ಕೂಗಿ, ಅಳಲು; ಆತನು ಹಾಗೆಯೇ ಅವಳನ್ನು ತಬ್ಬಿ ಕೊಂಡು, ಅಳುತ್ತಾ, ಸಮಾಧಾನವನ್ನು ಮಾಡಿ, ಲಾಲಿಸಲು; ಧೂಳಿಯಿಂದ ತುಂಬಿದ ಮೈಯುಳ್ಳ ದಮಯಂತಿಯು ನಳನ ಎದೆಯಲ್ಲಿ ತನ್ನ ಮೊಗವನ್ನು ಇಟ್ಟು, ಕಣ್ಣೀರುಗಳನ್ನು ತುಂಬಿ ಕೊಂಡು ಇದ್ದಳು. ಆಗ ಇದಷ್ಟನ್ನು ದಮಯಂತಿಯ ತಾಯಿ ಕಂಡು, ಭೀಮ ಭೂಪಾಲಕನಿಗೆ ತಿಳಿಸಿದಳು. ಆತನು ಸಂತೋಷ ಪಟ್ಟು, ತನ್ನ ಮಡದಿಯನ್ನು ಕುರಿತು—ಆ ಗಂಡ ಹೆಂಡರಿಗೆ ನಾಳೆ ಬೆಳಗ್ಯೆ ಮಂಗಳ ಸ್ನಾನವನ್ನು ಮಾಡಿಸಿ, ದಿವ್ಯ ವಸ್ತ್ರಾಭರಣಗಳಿಂದ ಅಲಂಕರಿಸು. ಆ ಮೇಲೆ ನಾನು ಬಂದು ನೋಡುವೆನು ಎಂದು ಹೇಳಿ, ಕಳುಹಿಸಿದನು.

ಆ ರಾತ್ರಿಯಲ್ಲಿ ನಳನು ದಮಯಂತಿಯೂ ತಾವು ತಾವು ಪಟ್ಟ ಕಷ್ಟಗಳನ್ನು ಒಂದು ಕಥೆಯಾಗಿ ಒಬ್ಬರು ಒಬ್ಬರಿಗೆ ಹೇಳಿ ಕೊಳ್ಳುತ್ತಾ, ಚಂದ್ರನಿಂದ ಮೆರೆಯುವ ರಾತ್ರಿಯಂತೆಯೂ, ಕಮಲಿನಿಯಿಂದ ಕಳಕಳಿಸುವ ಕೊಳದಂತೆಯೂ ಸುಖವಾಗಿದ್ದರು. ಮಾರಣೇ ದಿವಸದ ಬೆಳಿಗ್ಯೆ ನಳನು ದಮಯಂತಿಯೊಡನೆ ಕೂಡಿ, ಮಂಗಳ ಸ್ನಾನವನ್ನು ಮಾಡಿ, ಸಕಲ ಭೂಷಣ ಭೂಷಿತನಾಗಿ, ದಿವ್ಯ ಮಾಲ್ಯಾಂಬರಾಲಂಕೃತನಾಗಿ, ದಮಯಂತಿಯೊಡನೆ ಭೀಮ ಭೂಪಾಲನ ಬಳಿಗೆ ಹೋಗಿ, ನಮಸ್ಕಾರವನ್ನು ಮಾಡಲು; ಆತನು ನಳನಲ್ಲಿ ಪುತ್ರವಾತ್ಸಲ್ಯವನ್ನು ಮಾಡಿ, ಶೀ ನುಡಿಗಳಿಂದ ಸಮಾಧಾನವನ್ನು ಮಾಡಿ, ಬೇಕಾದಷ್ಟು ವಸ್ತ್ರ ಭೂಷಣಾದಿಗಳನ್ನು ಕೊಟ್ಟು, ತನ್ನ ಮಗಳಿಗೂ ಬೇಕಾದಷ್ಟು ವಸ್ತ್ರಾಭರಣಗಳನ್ನು ಕೊಟ್ಟು, ಮನ್ನಿಸಲು; ಆ ಗಂಡ ಹೆಂಡರು ಚಂದ್ರ ರೋಹಿಣಿ ದೇವಿಯರಂತೆಯೂ, ಅಗ್ನಿ ಸ್ವಾಹಾ ದೇವಿಯರಂತೆಯೂ, ನಾರಾಯಣ ಲಕ್ಷ್ಮೀ ದೇವಿಯರಂತೆಯೂ, ಬ್ರಹ್ಮ ಸರಸ್ವತಿಯರಂತೆಯೂ, ಶಿವ ಶಿವೆಯರಂತೆಯೂ ಮೆರೆಯುತ್ತಿದ್ದರು. ಆಗ ಊರು ಜನರೆಲ್ಲಾ ಅವರಿಬ್ಬರನ್ನು ಕಣ್ಣು ತುಂಬಾ ನೋಡಿ, ಚಂದ್ರನನ್ನು ಕಂಡ ಸಮುದ್ರದಂತೆ ಸಂತೋಷದಿಂದ ಉಬ್ಬಿದರು. ಆಗ ಭೀಮ ಭೂಪಾಲನು ಪಟ್ಟಣವನ್ನೆಲ್ಲಾ ಅಲಂಕಾರ ಮಾಡಿಸಿದನು. ಆ ಬಳಿಕ ನಳನು ರುತುಪರ್ಣ ರಾಯನನ್ನು ಕರತರಿಸಿ, ಬಹು ಮಾನಗಳನ್ನು ಮಾಡಿ, ಒಳ್ಳೇ ಮಾತುಗಳಿಂದ ಸಂತೋಷ ಪಡಿಸಿದನು. ಬುದ್ಧಿ ಸಂಪನ್ನನಾದ ಆತನು ನಳನಿಂದ ಸತ್ಕೃತನಾಗಿ, ನಸುನಗೆಯಿಂದ ಕೂಡಿದ ಮೊಗದಾವರೆಯುಳ್ಳವನಾಗಿ, ಆತನನ್ನು ಕುರಿತು—ಎಲೈ, ಮಹಾನುಭಾವನೇ, ದೇವರ ದಯದಿಂದ ಹೆಂಡತಿಯೊಡನೆ ಕೂಡಿದ ನಿನ್ನನ್ನು ನೋಡಿ, ನನ್ನ ಕಣ್ಣುಗಳು ಸಫಲಗಳಾದವು. ನಾನು ಧನ್ಯನಾದೆನು. ಮೊದಲು ನನ್ನ ಪಟ್ಟಣಕ್ಕೆ ಬಂದು, ನೀನು ಅಜ್ಞಾತ ವಾಸವಾಗಿರುವ ಸಮಯದಲ್ಲಿ, ನಾನು ಅರಿತಾದರೂ, ಅರಿಯದಿದ್ದಾದರೂ, ನಿನ್ನಲ್ಲಿ ಏನಾದರೂ ತಪ್ಪು ಮಾಡಿರುವೆನು. ಅದಷ್ಟನ್ನು ಸಹಿಸ ಬೇಕೆಂದನು. ನಳನು ಆತನನ್ನು ನೋಡಿ—ಇಷ್ಟು ದಿವಸಗಳು ನಿನ್ನ ಪಟ್ಟಣದಲ್ಲಿ ಸ್ವರ್ಗ ಲೋಕದಲ್ಲಿ ಇದ್ದಂತೆ ಸೌಖ್ಯವಾಗಿ ಇದ್ದೆನು. ನನ್ನ ರಾಜ್ಯದಲ್ಲಿ ನಾನು ಅಷ್ಟು ಸೌಖ್ಯದಿಂದ ಇರಲಿಲ್ಲಾ. ಇಂಥಾ ನೀನು ತಪ್ಪು ಮಾಡಿದ್ದರೂ ನಾನು ಮರೆಯ ಬೇಕು. ಇಂಥಾದ್ದರಲ್ಲಿ ನೀನು ಒಂದು ತಪ್ಪನ್ನು ಮಾಡಿದವನೇ ಅಲ್ಲ. ಅಶ್ವ ಹೃದಯವೆಂಬ ವಿದ್ಯೆಯನ್ನು ನನ್ನಲ್ಲಿಯೇ ನಿಲ್ಲಿಸಿದವನಾದ್ದರಿಂದ, ಅದನ್ನು ಪರಿಗ್ರಹಿಸ ಬೇಕೆಂದನು. ರುತು

ಪರ್ಣನು ಆ ವಿದ್ಯೆಯನ್ನು ನಳನಿಂದ ಗುಟ್ಟಾಗಿ ಗ್ರಹಿಸಿ ಕೊಂಡು, ಅಪ್ಪಣೇ ತೆಗೆದು ಕೊಂಡು, ಮತ್ತೊಬ್ಬ ಸಾರಥಿಯಿಂದ ಕೂಡಿ, ತನ್ನ ಪಟ್ಟಣಕ್ಕೆ ಹೋದನು.

ಆ ಬಳಿಕ ನಳನು ಕುಂಡಿನ ಪಟ್ಟಣದಲ್ಲಿ ಒಂದು ತಿಂಗಳು ಸುಖದಿಂದ ಇದ್ದು, ಆ ಮೇಲೆ ಭೀಮ ಭೂಪಾಲಕನ ಅಪ್ಪಣೆಯನ್ನು ತೆಗೆದು ಕೊಂಡು, ಬಿಳೀ ಕುದುರೆಗಳು ಕಟ್ಟಿದ ತೇರನ್ನು ಏರಿ, ಹದಿನಾರು ಭದ್ರ ಗಜಗಳೂ ಐವತ್ತು ಕುದುರೆಗಳೂ ಆರು ನೂರು ಕಾಲಾಳುಗಳನ್ನು ಕೂಡಿ ಕೊಂಡು, ತನ್ನ ನಿಷಧ ದೇಶಕ್ಕೆ ಬಂದು, ಪುಷ್ಕರನ ಸಮೀಪಕ್ಕೆ ಹೋಗಿ,—ಇದಕೋ! ದಮಯಂತಿ ಹೊರತಾಗಿ ಮಿಕ್ಕಾದ ನನ್ನ ದ್ರವ್ಯವನ್ನು ಪಂಥಕ್ಕೆ ಒಡ್ಡುತ್ತಲಿದ್ದೇನೆ. ನೀನು ರಾಜ್ಯವಷ್ಟನ್ನು ಪಂಥಕ್ಕೆ ಒಡ್ಡು. ತಿರಿಗಿ ನಿನ್ನೊಡನೆ ಜೂಜಾಡ ಬೇಕೆಂದು ಎಣಿಸಿ ಇದ್ದೇನೆ. ಇದು ಮುಗಿದ ಮೇಲೆ, ನಮ್ಮಿಬ್ಬರ ಪ್ರಾಣಗಳನ್ನು ಒಡ್ಡುವ. ಜೂಜಿನಲ್ಲಿ ಒಬ್ಬನ ಧನ ರಾಜ್ಯಗಳನ್ನು ಗೆದ್ದು ಕೊಂಡವನ ಬಳಿಗೆ ಆತನು ತಿರಿಗಿ ಬಂದು, ಜೂಜಿಗೆ ಕರೆದರೆ, ಆಡ ಬೇಕು. ಅದಕ್ಕೆ ನೀನು ಒಲ್ಲದಿದ್ದರೆ, ಯುದ್ಧಕ್ಕೆ ಬಾ. ದ್ವಂದ್ವ ಯುದ್ಧದಲ್ಲಿ ಆದರೂ ನಮ್ಮಿಬ್ಬರಲ್ಲಿ ಒಬ್ಬನಿಗೆ ಕೇಡಾಗ ಬೇಕು. ಹಗೆಯು ತೆಗೆದು ಕೊಂಡ ರಾಜ್ಯವನ್ನು ಹ್ಯಾಗಾದರೂ ತಿರಿಗಿ ತೆಗೆದು ಕೊಳ್ಳ ಬೇಕು ಎಂದು, ದೊಡ್ಡವರು ಹೇಳುವದರಿಂದ, ನಾನು ಹೇಳಿದ ಎರಡು ಕೆಲಸಗಳಲ್ಲಿ ಒಂದಕ್ಕೆ ನಿಲ್ಲು! ಎಂದು ಕರೆಯಲು; ಪುಷ್ಕರನು ರಾಜ್ಯ ಗರ್ವಿತನಾಗಿ, ಜೂಜಾಡುವದಕ್ಕೆ ಉದ್ಯುಕ್ತನಾಗಿ, ಒಂದು ಪಂಥದಲ್ಲಿ ಧನ ಕನಕ ವಸ್ತು ವಾಹನಗಳನ್ನೂ ರಾಜ್ಯಗಳನ್ನೂ ತನ್ನ ಪ್ರಾಣಗಳನ್ನೂ ಒಡ್ಡಿ, ಆಡಲು; ನಳನು ಜೈಸಿ, ಆ ಪುಷ್ಕರನನ್ನು ನೋಡಿ—ನೀನು ಜೂಜಿನಲ್ಲಿ ನನಗೆ ಅಪಕಾರವನ್ನು ಮಾಡಿದವನಲ್ಲ; ಕಲಿ ಪುರುಷನು ಮಾಡಿದನು. ನೀನು ಹೆಡ್ಡನಾದ್ದರಿಂದ ತಿಳಿಯೆ. ನಿನ್ನ ಪ್ರಾಣಗಳನ್ನು ಕೊಲ್ಲುವದಿಲ್ಲ. ನೂರು ವರುಷಗಳು ಸುಖವಾಗಿ ಜೀವಿಸು. ನೀನು ಎಷ್ಟು ಅಪಕಾರ ಮಾಡಿದರೂ, ನನ್ನ ಒಡಹುಟ್ಟುಗಳಲ್ಲಿ ಒಬ್ಬನಾದ್ದರಿಂದ, ನಿನ್ನಲ್ಲಿ ನನಗೆ ಬಹು ಪ್ರೀತಿ ಅದೆ ಎಂದು ಹೇಳಿ, ಬಾರಿ ಬಾರಿಗೂ ತಬ್ಬಿ ಕೊಳ್ಳುತ್ತಿರಲು; ಪುಷ್ಕರನು ನಳನಿಗೆ ನಮಸ್ಕಾರವನ್ನು ಮಾಡಿ, ಕೈ ಮುಗಿದು—ಎಲೈ, ಮಹಾನುಭಾವನೇ, ನಿನ್ನ ಕೈಗೆ ಶಿಕ್ಕಿದ ಪ್ರಾಣಗಳನ್ನು ತಿರಿಗಿ ಕೊಟ್ಟು, ನನ್ನನ್ನು ಕಾಪಾಡಿದೆ ಎಂದು ಕೊಂಡಾಡಿ, ನಳನ ಅಪ್ಪಣೆಯನ್ನು ತೆಗೆದು ಕೊಂಡು, ಸಂತೋಷದಿಂದ ತನ್ನ ಪಟ್ಟಣಕ್ಕೆ ಹೋದನು.

ಆಗ ತೇಜೋವಂತನಾಗಿ, ನಡು ಹಗಲ ಸೂರ್ಯನ ಹಾಗೆ ಹೊಳೆಯುತ್ತಲಿರುವ ನಳನ ಬಳಿಗೆ ಬಂದು, ಪೌರ ಜನ ಪರಿಜನಗಳು ಅಡ್ಡ ಬಿದ್ದು—ಸ್ವಾಮೀ, ಮಹಾ ರಾಯನೇ, ತನ್ನ ತಾಯಿಯನ್ನು ಕಂಡ ಎಳೆ ಗರುವಿನಂತೆ ಈ ದಿವಸ ನಾವೆಲ್ಲರು ಸಂತುಷ್ಟರಾದೆವು, ಅಂದರು. ಆಗ ನಳಚಕ್ರವರ್ತ್ತಿಯು ಅವರನ್ನೆಲ್ಲಾ ಯಥೋಚಿತವಾಗಿ ಮನ್ನಿಸಿ, ಸಕಲ ಸೇನೆಗಳನ್ನು ಭೀಮ ಭೂಪಾಲಕನ ಪಟ್ಟಣಕ್ಕೆ ಕಳುಹಿಸಿ, ದಮಯಂತಿಯನ್ನೂ, ತನ್ನ ಮಕ್ಕಳನ್ನೂ ಕರಿಸಿಕೊಂಡು, ಸಂತೋಷ ಯುಕ್ತನಾಗಿ ಬಹು ಯಜ್ಞಗಳನ್ನು ಮಾಡಿ, ದೇವತೆಗಳನ್ನು ಸಂತೋಷ ಪಡಿಸುತ್ತಾ, ಮಕ್ಕಳ ಹಾಗೆ ಪ್ರಜೆಗಳನ್ನು ಕಾಪಾಡುತ್ತಾ, ಬಹು ಕೀರ್ತ್ತಿಯನ್ನು ಪಡೆದು, ಸುಖವಾಗಿದ್ದನು.



# ART III.

———:0:———

## the Maha Bharata.

———:0:———

**rning of the Milk Sea.**

ಮುದ್ರ ಮಥನದ ಕಥೆ.

ಸಮಯದಲ್ಲಿ ಇಂದ್ರನೇ ಮೊದಲಾದ ಸಮಸ್ತ
ನ್ನು ನಿರಾಕರಿಸುತ್ತಲಿರುವ ಚಿನ್ನದ ಶಿಖ
ಥಾ—ಸಕಲ ಭೂಷಣಗಳನ್ನು ಧರಿಸಿರುವ
ಂಥಾ—ದುಷ್ಕರ್ಮಗಳನ್ನು ಮಾಡಿದ ಜನರಿಗೆ
ಯಂಕರವಾದ ದುಷ್ಟ ಸರ್ಪ ಸಮೂಹದಿಂದ
ಲಿಕೆಗಳಿಗೆ ಆಶ್ರಯವಾದಂಥಾ—ಆಕಾಶವನ್ನು
ಂದ ಕೂಡಿರುವಂಥಾ—ಫಲ ಪುಷ್ಪ ಶೋಭಿ
ಕೂಡಿರುವಂಥಾ—ಗಿಣಿ, ಗೊರವಂಕ, ಪಾರಿ
ನ ನಾನಾ ಪಕ್ಷಿಗಳ ಧ್ವನಿಗಳಿಂದ ಅತಿ ರಮ
ಪರ್ವತಕ್ಕೆ ಹೋಗಿ, ಅಲ್ಲಿ ಓಲಗದ ಚಾವ
ೃತವನ್ನು ಹೊಂದುವದಕ್ಕೋಸ್ಕರ ಆಲೋ
ಕ್ತ ಜನ ಪರಿಪಾಲಕನಾದ ಮಹಾ ವಿಷ್ಣುವು
ೈ, ಬ್ರಹ್ಮನೇ, ಈ ದೇವತೆಗಳೂ, ರಾಕ್ಷ
ೀಗಿ, ಸಕಲ ಮೂಲಿಕೆಗಳನ್ನೂ, ರತ್ನಗ
ಮಥಿಸಿದರೆ, ಅದರಲ್ಲಿ ಅಮೃತ ಹುಟ್ಟುತ್ತದೆ.
ಳು ಸುಖದಲ್ಲಿರುವರು ಎಂದು, ಕಟ್ಟು ಮಾಡ
ಸುರರಿಗೆ ಕಟ್ಟು ಮಾಡಿದನು.

ಕ್ರ ದೇವನ ಅಪ್ಪಣೆಯನ್ನು ಶಿರಸಾವಹಿಸಿ,
ಯಲ್ಲಿ ಬಿಳುಪಾಗಿರುವ ಶಿಖರಗಳಿಂದ ಅಲಂ
ನ್ನರ, ಕಿಂಪುರುಷ, ದೇವತಾ ಸಮೂಹದಿಂದ
ಗಳ ಧ್ವನಿಗಳಿಂದ ಶೋಭಿಸುವಂಥಾ—ಸಿಂಹ,
ರ ಮೃಗಗಳಿಂದ ಅತಿ ಭಯಂಕರವಾದಂ

